ಪ್ರತಿಭಾಗ್ರಂಥಮಾಲೆ, ಧಾರವಾಡ ವರ್ಷ. ೪-ಕಿರಣ ೫.

# ದಲಿತ ಕುಸುಮ



ಸುಪ್ರಸಿದ್ಧ ಬಂಗಾಲೀ ಲೇಖಿಕೆಯರಾದ ಸ್ವರ್ಣಮಯೀ ದೇವಿಯವರ
ಸರಸ ಸಾಮಾಜಿಕ ಕಾದಂಬರಿಯ ರೂಪಾಂತರ



ಶ್ರೀ ಹೊಸಮನೆ ಗುಡ್ಡಪ್ಪ, ವಿದ್ವಾನ್.





ಆಗಸ್ಟ ೧೫
೧೯೪೭

ಬೆಲೆ
೨-೦-೦

ಮುದ್ರಕರು:
ಎಚ್, ಬಿ, ನವಲೂರ.
ಹಿಂದವಾತಾ ಮುದ್ರಣಾಲಯ,
ಧಾರವಾಡ.

ಪ್ರಕಾಶಕರು:
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ,
ಧಾರವಾಡ.

# ಪ್ರತಿಭಾಗ್ರಂಥಮಾಲೆ, ಧಾರವಾಡ.

## ಸಂಪಾದಕರು: ಬಾಲಚಂದ್ರ ಘಾಣೇಕರ.

(ವಾರ್ಷಿಕ ಚಂದಾ ಅಂಚೆ-ರಜಿಸ್ಟರ್ ಸೇರಿ ೯ರೂ. ಮಾತ್ರ)

● ವರ್ಷದಲ್ಲಿ ಎಂಟು ಪುಸ್ತಕಗಳು ತಪ್ಪದೆ ಪ್ರಕಟವಾಗುತ್ತವೆ.

● ಕಾದಂಬರಿಗಳನ್ನು ಹೆಚ್ಚಾಗಿ ಕೊಡುವದೇ ನಮ್ಮ ವೈಶಿಷ್ಟ್ಯ.

● ವರ್ಷದಲ್ಲಿ ೧೨-೧೩ರೂ. ಬೆಲೆಯ ಪುಸ್ತಕಗಳು ದೊರೆಯುತ್ತವೆ.

● ಈಗ ೯ರೂ. ಕಳಿಸಿದವರಿಗೆ ೪ನೇ ವರ್ಷದ ಪುಸ್ತಕ ದೊರೆಯುತ್ತವೆ.

● ಮೊದಲಿನ ಮೂರು ವರ್ಷದ ಪುಸ್ತಕಗಳು ಚಂದಾಹಣಕ್ಕೆ ದೊರೆಯುವದಿಲ್ಲ. ನಮ್ಮ ಚಂದಾದಾರರಿಗೆ ಬೇಕಾಗಿದ್ದರೆ ಮಾತ್ರ ಮೂಲ ಬೆಲೆಗೇ (ಅಂಚೆವೆಚ್ಚ ಪೂರ್ಣ ನಾವು ವಹಿಸಿ) ರವಾನಿಸುತ್ತೇವೆ.

### ಪ್ರಕಟವಾದ ನಾಲ್ಕನೇ ವರ್ಷದ ಗ್ರಂಥಗಳು.

೧ ಕಾಲಯಾನ (ವೈಜ್ಞಾನಿಕ ಕಾದಂಬರಿ)
೨ ಮಾಧವಲೀಲೆ (ಸಾಮಾಜಿಕ)
೩ ಕರೀಬೆಕ್ಕು (ಪತ್ತೇದಾರಿ)
೪ ಕೊಂದವರು ಯಾರು ? (ಪತ್ತೇದಾರಿ)
೫ ನೂರಜಹಾನ (ಐತಿಹಾಸಿಕ)
೬ ದಲಿತಕುಸುಮ (ಸಾಮಾಜಿಕ)
೭-೮ ಇಂದ್ರಜಾಲ (ಅಚ್ಚಿನಲ್ಲಿ) (೩೬೦ ಪುಟಗಳು)

೧೯೪೭ ಡಿಸೆಂಬರ ೧೫ರ ನಂತರ ಬರುವ ಹಣವನ್ನು ಹೊಸವರ್ಷದ (೫ನೇ ವರ್ಷದ) ಚಂದಾಲೆಕ್ಕಕ್ಕೆ ತೆಗೆದುಕೊಳ್ಳಲಾಗುವದು.

# ದಲಿತ ಕುಸುಮ

---

## ವಿಯೋಗ

ಮುಂಬಯಿಲ್ಲಿ 'ಪಾರ್ಲೆ' ಎಂಬ ಬೆಟ್ಟವಿದೆ. ಆ ಬೆಟ್ಟದ ತುದಿಯಲ್ಲಿ ಒಂದು ಮನೆ. ಆ ಮನೆಯ ಕೋಣೆಯೊಂದರೊಳಗೆ ಒಬ್ಬ ಹೆಣ್ಣುಮಗಳು ಹಾಸುಗೆ ಹಿಡಿದಿದ್ದಾಳೆ. ಅವಳು ಜೇನೆ ಬಿದ್ದು ಬಹಳ ದಿನಗಳಾದವು. ಸನಿಹದಲ್ಲಿಯೇ ಅವಳ ತಂಗಿ ಸುಶೀಲಾ ಕುಳಿತುಕೊಂಡಿದ್ದಾಳೆ.

ಬೆಳಗಿನ ವೇಳೆ. ಬೆಟ್ಟದಡಿಯಲ್ಲಿ ಸ್ವಲ್ಪ ದೂರದಲ್ಲಿ ಸಮುದ್ರವಿದೆ. ಸಮುದ್ರದೊಡಲಿನಲ್ಲಿ ಅನೇಕ ನಾವೆಗಳು ಓಡಾಡುತ್ತವೆ. ಬೆಳಗಿನ ಗಾಳಿ ಅವನ್ನು ಅಪ್ಪಳಿಸಿ ಅಲ್ಲಾಡಿಸುತ್ತಿದೆ. ಹಡಗವು ಮುಳುಗದ್ದುವುದರಿಂದ ಏರಿವವರು ಜಗತ್ತು ಅಸ್ಥಿರ, ಜೀವನವು ಕ್ಷಣಭಂಗುರವೆಂದು ಉಸಿರ್ಗರೆಯುತ್ತಾರೆ. ಸೂರ್ಯನಾರಾಯಣನು ಬನದ ಪಣಿವನ್ನಾರಿಸಿಕೊಂಡು ಈಗ ಪೂರ್ವ ದಿಕ್ಕಿನಲ್ಲಿ ಇಣಿಕಿ ನೋಡುತ್ತಿದ್ದಾನೆ. ಸೂರ್ಯನ ಕಿರಣಗಳು ಸಮುದ್ರದ ಮೇಲೆ ಬಿದ್ದು ಹೊಳೆಯುತ್ತಿವೆ. ಗಿಡ-ಮರಗಳ ಮೇಲೆ, ಗುಡ್ಡ-ಬೆಟ್ಟಗಳ ಮೇಲೆ, ಬಿದ್ದಲ್ಲೆಲ್ಲ ದೂರದಿಂದ ನೋಡುವವರಿಗೆ ಅದೊಂದು ಅಪೂರ್ವವಾದ, ಕಲಾ ಪೂರ್ಣವಾದ ಸುಂದರ ದೃಶ್ಯವೇ ಆಗಿತ್ತು. ಪಟ್ಟಿನಮನೆ ಮುಂಬಯಿ ಪಟ್ಟಣವಿದೆ. ಬೆಟ್ಟದ ಮೇಲೇರಿ ನಗರವನ್ನು ನೋಡಿದರೆ, ನಗರದ ಶೋಭೆ ಮತ್ತಷ್ಟು ಹೆಚ್ಚು ಸುಂದರವಾಗಿ ಕಾಣಿಸುತ್ತದೆ. ಇನ್ನೂ ನಿದ್ರಾದೇವಿಯ ಬಾಹುಪಾಶಕ್ಕೆ ಬಹಳ ಜನರು ಬಲಿಬಿದ್ದಿದ್ದಾರೆ, ಗೊರಕೆ ಹೊಡೆಯುತ್ತಿದ್ದಾರೆ; ವ್ಯಾಪಾರದ ಗದ್ದಲವಿನ್ನೂ ಇಲ್ಲ. ಈ ಎಲ್ಲಕಾರಣಗಳಿಂದ ಸೃಷ್ಟಿಯ ಸೌಂದರ್ಯವು ಹೆಚ್ಚು ಅನುಭವಕ್ಕೆ ಬರಹತ್ತಿದೆ.

ಸುಶೀಲಾ ಅಕ್ಕನ ಕಂದಿ-ಕುಂದಿನ ದೇಹವನ್ನು ನೋಡಿ ನಡುಗಿದಳು. ತುಸು ದಿವಸಗಳಲ್ಲಿಯೇ ಅವಳು ಎಲುಬಿನ ಹಂದರವಾಗಿದ್ದಳು. ಅಕ್ಕ-ತಂಗಿಯರಿಬ್ಬರೂ ಮಾತನಾಡುತ್ತಿದ್ದರು. ಸುಶೀಲಾನ ನೇತ್ರಗಳಲ್ಲಿ ನೀರೂರಿತ್ತು.

ಅವಳ ಎದುರಿಗೆಯೋ ಒಂದು ಕಿಡಕಿಯಿತ್ತು; ಅವರ ಬಾಗಿಲನ್ನು ತೆರೆದಿದ್ದರು. ಆಗಾಗ ಸುಶೀಲೆ ಆ ಕಿಡಕಿಯೊಳಗಿಂದ ಹೊರಗೆ ನೋಡುತ್ತಿದ್ದಳು. ಸುಶೀಲೆಗೇನೂ ಬಹಳ ವಯಸ್ಸಾಗಿಲ್ಲ. ಈಗ ಇಪ್ಪತ್ತೆರಡು ನಡೆಯುತ್ತಿದೆ. ಚೆಲುವೆ, ಕಮಲದಂಥ ಕಣ್ಣು, ಸಂಪಿಗೆ ಹೂವಿನಂಥ ಮೂಗು, ತೊಂಡೆ ಹಣ್ಣಿನಂಥ ತುಟಿ; ಎಲ್ಲವೂ ಒಂದಕ್ಕಿಂತ ಒಂದು ಹೆಚ್ಚು ಸುಂದರವಾಗಿವೆ; ಆದರೆ ಪಾಪ ವಿಧವೆ. ಉಡುಗೆಯೂ ವಿಧವೆಗೆ ಸರಿಯಾದುದೇ ಇದೆ. ಆದುದರಿಂದ ಅವಳ ಸೌಂದರ್ಯವು ಯಾರ ಮನಸ್ಸನ್ನೂ ಆಕರ್ಷಿಸಲು ಅಸಮರ್ಥವಾಗಿದೆ. ಈ ಇಬ್ಬರೂ ಅಕ್ಕ-ತಂಗಿಯರು ಅಲಾಹಾಬಾದದ ಪಂಡಿತ ತಾರಾನಾಥ ಮುಖ್ಯೋಪಾಧ್ಯಾಯರ ಮಕ್ಕಳು. ಪಂಡಿತ ತಾರಾನಾಥರು ಬಹಳ ದೊಡ್ಡ ಮನುಷ್ಯರೂ, ಧನಾಢ್ಯ ಬ್ರಾಹ್ಮಣರೂ ಇದ್ದರು. ಅವರಿಗೆ ಈ ನಿಸ್ಸಾರ ಜಗತ್ತು ಸರಿಬರಲಿಲ್ಲ. ಅದರಿಂದ ಅವರು ಸ್ವಲ್ಪ ದಿನಗಳ ಹಿಂದೆ ಪರಲೋಕಕ್ಕೆ ಪ್ರಯಾಣ ಮಾಡಲು ತಿಕೀಟು ತೆಗೆಯಿಸಿದರು. ಚಾರುಶೀಲೆಯ ಮದುವೆಯಾಯಿತು. ಅವಳು ತನ್ನ ಗಂಡನ ಕೂಡ ಮುಂಬಯಿಗೆ ಬಂದಿದ್ದಳು. ಅಂದಿನಿಂದ ಅವಳು ಇಲ್ಲಿಯೋ ಇರುತ್ತಿದ್ದಳು. ಚಾರುಶೀಲೆಯ ಪತಿದೇವನು ವ್ಯಾಪಾರ ಮಾಡುತ್ತಿದ್ದ. ಸೋಲುಗೆಲುವು ದೈವಾಧೀನ. ಅವನಿಗೆ ಒಮ್ಮೆಲೆ ವ್ಯಾಪಾರದಲ್ಲಿ ಒಂದು ದೊಡ್ಡ ಪೆಟ್ಟು ಬಿದ್ದಿತು. ಹೃದಯಕ್ರಿಯೆ ನಿಂತು ತೀರಿಕೊಂಡ! ಆಗಿನಿಂದ ಚಾರುಶೀಲೆಯ ಪ್ರಕೃತಿ ನೆಟ್ಟಗಿಲ್ಲ. ಈ ಸುದ್ದಿ ಸುಶೀಲೆಗೆ ಬಡಿಯಿತು. ಅವಳಿಗೆ ಆಕಾಶವೇ ಕಡಿದುಕೊಂಡು ಬಿದ್ದಂತಾಯಿತು. ಪಾಪ, ಅವಳಾದರೂ ಏನು ಮಾಡುವಳು? ಮುಂಬಯಿಗೆ ಹೋಗಲು ಚಡಪಡಿಸುತ್ತಿದಳು. ಆದರೆ ಒಬ್ಬಳೆ ಮಾಡಬೇಕೇನು? ಮನಸ್ಸಿನೊಳಗೆಯೋ ಮರುಗುತ್ತಿದ್ದಳು, ಕೊರಗುತ್ತಿದ್ದಳು; ಮುಂಬಯಿಗೆ ಹೋಗುವವರು ಯಾರೂ ಸಿಗುತ್ತಿದ್ದಿಲ್ಲ. ಸುಶೀಲೆಯ ಪರಿವಾರದವರು ಈಗ ಯಾರೂ ಇಲ್ಲ. ಎಲ್ಲರೂ ತೀರಿಕೊಂಡಿದ್ದಾರೆ. ದೇವರ ಲೀಲೆ ಬಹಳ ವಿಚಿತ್ರವಿದೆ. ಅವನು ತಿಪ್ಪೆಯನ್ನು ಉಪ್ಪರಿಗೆ ಮಾಡಬಲ್ಲ, ಉಪ್ಪರಿಗೆಯನ್ನು ತಿಪ್ಪೆ ಮಾಡಬಲ್ಲ. ಒಬ್ಬರು ಮಾತ್ರ ಉಳಿದಿದ್ದರು, ಅವರು ದೂರದಿಂದ ಸುಶೀಲೆಗೆ ಮೈದುನ ಆಗಬೇಕು. ಅವರು ದಸರೆಯ ಬಿಡುವಿನಲ್ಲಿ ಮುಂಬಯಿಗೆ ಹೋಗುವವರಿದ್ದರು. ನೀರಿನಲ್ಲಿ ಮುಳುಗುವವನಿಗೆ ಹುಲ್ಲುಕಡ್ಡಿಯೇ ಒಂದು ಆಸರ. ಈಗ ಸುಶೀಲೆಗೆ ಜೀವದೊಳಗೆ ಜೀವ ಬಂದಂತಾಯಿತು. ನಿರಾಶೆಯಲ್ಲಿ ಆಶೆ ಅಂಕುರಿಸಿತು. ಹಿರಣ್ಯ

ಕುಮಾರರಾದರೂ ಸುಶೀಲೆಯನ್ನು ತಮ್ಮ ಕೂಡ ಕರೆದುಕೊಂಡು ಹೋಗಲು ನಿರಾಕರಿಸಲಿಲ್ಲ. ಅವಳು ಸಂಕಟವಲ್ಲಿದ್ದುದು ಅವರಿಗೆ ತಿಳಿದಿತ್ತು.

ಅಕ್ಕ-ತಂಗಿ ಕೂಡದೆ ಎಷ್ಟೋ ದಿನಗಳಾಗಿದ್ದುವು, ಇಂದು ಕೂಡಿದ್ದಾರೆ. ಚಾರುಶೀಲೆಯ ಮದುವೆಯಾದಾಗ ಅವಳಿಗೆ ಹದಿನಾಲ್ಕರಲ್ಲಿ ನಡೆಯುತ್ತಿತ್ತು, ಅಂದಿನಿಂದ ಅವಳು ತವರು ಮನೆಗೆಯೇ ತಿರುಗಿ ಬಂದಿದ್ದಿಲ್ಲ. ಆಗ ಸುಶೀಲೆ ಕೇವಲ ಹತ್ತು ವರುಷದವಳಿದ್ದಳು. ಈ ಮಧ್ಯೆ, ಇಬ್ಬರ ಜೀವನದಲ್ಲಿಯೂ ಎಂಥೆಂಥ ಅದ್ಭುತ ಘಟನೆಗಳು ಘಟಿಸಿದುವಲ್ಲ, ಎಂಥ ವಿಪರೀತ ಬದಲಾವಣೆಗಳಾದುವಲ್ಲ. ಅದೇ ಹರಯವು ಹೊಸದಾಗಿ ಜೀವನದಲ್ಲಿ ಅಡಿಯಿಟ್ಟಾಗ ಮನಸ್ಸಿನೊಳಗೆ ಎಷ್ಟು ತರಹದ ಹಂಬಲಗಳು ಹುದುಗಿಕೊಂಡಿದ್ದುವಲ್ಲ! ಆದರೇನು? ಇಷ್ಟು ಅಲ್ಪಾವಧಿಯಲ್ಲಿಯೇ ಎಲ್ಲ ಆಶೆ-ಆಕಾಂಕ್ಷೆಗಳು ಆರಿದುವು, ಮನಸ್ಸಿನೊಳಗಿನ ಇಚ್ಛೆಗಳು ಮನದಲ್ಲಿಯೇ ಇಂಗಿದುವು! ಆಶೆಯ ದೀಪವೇ ಆರಿತು, ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅಕ್ಕ-ತಂಗಿಯರಿಬ್ಬರೂ ಬಳೆ ತೆಗೆದರು, ವಿಧವೆಯಾದರು. ಇಂಥ ಸ್ಥಿತಿಯಲ್ಲಿ ಇಬ್ಬರೂ ಕೂಡಿದ್ದಾರೆ. ಯಾವ-ಯಾವಾಗಿನವೊ ಮಾತುಗಳನ್ನು ನೆನಪು ಮಾಡಿಕೊಂಡು ಅಳುತ್ತಿದ್ದರು, ಮನೆ ಹಾರಿ ಬೀಳುವಂತೆ, ಗಂಟಲು ಹರಿಯುವಂತೆ ಅಳುತ್ತಿದ್ದರು. ಅತ್ತು-ಅತ್ತು ಮನಸ್ಸನ್ನು ಹಾಯಾಗಿ ಮಾಡಿಕೊಂಡರು.

ಕಣ್ಣೀರನ್ನೊರೆಸಿಕೊಳ್ಳುತ್ತಾ ಸುಶೀಲೆ ಹೊರಗೆ ನೋಡಿದಳು. ಹತ್ತಿರದಲ್ಲಿಯೇ ಒಂದು ಹೂದೋಟವಿತ್ತು. ಅಲ್ಲಿ ಇಬ್ಬರು ಬಾಲಕ-ಬಾಲಿಕೆಯರು ಆಡುವುದು ಕಣ್ಣಿಗೆ ಬಿದ್ದಿತು. ಅವರ ಸನಿಹದಲ್ಲಿಯೇ ಹಿರಣ್ಯ ಕುಮಾರ ನಿಂತುಕೊಂಡು ಅವರ ಆಟವನ್ನು ನೋಡುತ್ತಿದ್ದರು. ಅವರಿಗೀಗ ಹದಿನೆಂಟ ವರುಷ. ಮೈಬಣ್ಣ ಕೆಂಪು, ದೊಡ್ಡ ದೊಡ್ಡ ಕಣ್ಣು, ಶಾಂತ ದೃಷ್ಟಿ, ಮೋರೆಯ ಮೇಲೆ ಕಳೆಯಿತ್ತು; ಒಟ್ಟಿನಲ್ಲಿ ಮೋರೆ ಮುದ್ದು ಬರುವಂತೆ ಇತ್ತು.

ಹುಡುಗನು ಒಮ್ಮೆ ಗುದ್ದಲಿಯಿಂದ ತೋಟದೊಳಗೆ ನೆಲವನ್ನು ಕಡಿಯುತ್ತಿದ್ದ. ಮತ್ತೊಮ್ಮೆ ಹೂಗಿಡಗಳಿಗೆ ನೀರೆರೆಯುತ್ತಿದ್ದ. ಇದನ್ನು ಹಿರಣ್ಯಕುಮಾರ ತನ್ಮಯರಾಗಿ ನೋಡುತ್ತಿದ್ದರು. ಹುಡುಗನಿಗೆ ಈಗ ಹತ್ತು ವರುಷಗಳಾಗಿರಬಹುದು; ಆದರೂ ಅವನ ಮೈ ಹುರಿಕಟ್ಟಾಗಿತ್ತು, ಸೌಂದರ್ಯವು ಅಂಗಾಂಗಗಳಲ್ಲಿ ಎದ್ದು ಹರಿಯುತ್ತಿತ್ತು. ಮುಖಮಂಡಲವು ಸುಂದರವಾಗಿತ್ತು. ಕಪ್ಪು ಬಣ್ಣದ ಹುಬ್ಬು, ಕೆಳಗೆ ಎರಡೂ ಕಣ್ಣುಗಳು ಎರಡು ದೀಪಗಳಂತೆ ಹೊಳೆಯು

ತ್ತಿವೆ, ಉಬ್ಬಿದ ಹಣೆ ಅವನ ಮೋರೆಗೆ ಒಂದು ಬಗೆಯ ಶೋಭೆಯನ್ನುಂಟು ಮಾಡಿದೆ. ಹುಡುಗನ ಮುಖಾರವಿಂದವನ್ನು ಯಾರೇ ನೋಡಲಿ, ಇವನು ಸಾಹಸಿಯೂ, ದಿಟ್ಟನೂ ಎಂದು ಅವನ ಸ್ವಭಾವವನ್ನು ಹೇಳುವರು. ಇನ್ನು ಹುಡುಗಿ. ಅವಳು ಹುಡುಗನಿಗಿಂತ ತೆಳ್ಳಗಿದ್ದಾಳೆ. ಹೆಚ್ಚು ಚೆಲುವೆಯಿದ್ದಾಳೆ. ಗುಲಾಬಿ ಮೊಗ್ಗೆಗಳಿಗೆ ಕಪ್ಪು ಬಣ್ಣದ ಭ್ರಮರಗಳು ಸುಳಿದಾಡುವಂತೆ, ಅವಳ ಕಪ್ಪು ಬಣ್ಣದ ಮುಂಗುರುಳು ಝಾಲರಿಯಂತೆ ತೂಗಾಡುತ್ತಿರುತ್ತಿವೆ. ಅದರಿಂದ ಅವಳ ಮೊಗವು ಮತ್ತಿಷ್ಟು ಸುಂದರವಾಗಿ ತೋರುತ್ತದೆ. ಅವಳ ನೀಲಿ ಬಣ್ಣದ ನೇತ್ರಗಳಲ್ಲಿ ಶಾಂತಿ, ಅಂತಃಕರಣಗಳು ನೆಲೆಗೊಂಡಿವೆ. ಅವಳ ದೃಷ್ಟಿಯಲ್ಲಿ ಸಂಕೋಚ. ಸಂಶಯಗಳು ಹುದುಗಿಕೊಂಡಿವೆ. ಎವೆಗಳು ಎಷ್ಟು ಯತ್ನಿಸಿದರೂ ಕಣ್ಣುಗಳನ್ನು ಮುಚ್ಚಿಡಲು ಅಸಮರ್ಥವಾಗಿವೆ. ನೇತ್ರಗಳೇನೊ ದೊಡ್ಡವಿದ್ದುವು, ಆದರೂ ಪೂರ್ಣ ತೆಗೆಯಲಾಗುತ್ತಿದ್ದಿಲ್ಲ. ಮೋರೆಯ ಮೇಲೆಯೂ ಬಾಲ್ಯ ಕಾಲದ ಕೋಮಲ ಭಾವವೂ ಕಾಣಿಸುತ್ತಿದ್ದಿಲ್ಲ. ಎಂಥ ವಿಷಣ್ಣವಾದ ಮೋರೆಯೋ ಏನೊ. ಥಳಥಳ ಹೊಳೆಯುವ ಪೂರ್ಣಿಮೆಯ ಚಂದ್ರನನ್ನು ಮೇಘಗಳು ಮುತ್ತಿದಾಗ, ಒಂದು ಬಗೆಯ ಭಯ, ವಿಷಾದ, ಕರುಣೆಗಳು ತೋರುವಂತೆ ಈ ಹುಡುಗಿಯ ಮೋರೆಯ ಮೇಲೆಯೂ ಕಾಣಿಸುತ್ತಿದ್ದುವು.

ಆಡ-ಆಡುತ್ತ ಹುಡುಗನು ಬಂದು ಹುಡುಗಿಗೆ ಹೇಳಿದ— "ಕನಕ, ನಡೆ, ನಡೆ, ಅಲ್ಲಿ ನೋಡು ಎಷ್ಟು ಸುಂದರವಾದ ಹೂ ಅರಳಿವೆ."

ಹುಡುಗಿ ನಸುನಗೆಯನ್ನು ಬೀರಿದಳು. ಆದರಿಂದ ಅವಳ ತುಟಿಗಳ ಮೇಲೆ ಮಿಂಚೊಂದು ಮಿಂಚಿ ಹೋದಂತಾಯಿತು.

ಅವಳು "ಎಲ್ಲಿ?" ಎಂದಳು.

"ಅಲ್ಲಿ" ಎಂದು ಅವನು ಕನಕನ ಕೈಯನ್ನು ಹಿಡಿದು ಆ ಕಡೆಗೆಯೇ ಓಡಹತ್ತಿದ. ಪಾಪ ಹುಡುಗಿಗೆ ಅಣ್ಣನ ಕೂಡ ಓಡುವುದಾಗುತ್ತಿದ್ದಿಲ್ಲ. ಹಾಗೂ ಹೀಗೂ ಮಾಡಿ ಅಣ್ಣನನ್ನು ತುಸು ದೂರ ಹಿಂಬಾಲಿಸಿದಳು. ಅವಳ ಈ ಸ್ಥಿತಿಯನ್ನು ಅವನು ನೋಡಿ ಕೈಯನ್ನು ಬಿಟ್ಟ. "ನಿನಗೆ ಓಡುವುದಾಗುವುದಿಲ್ಲ. ನೀನಿಲ್ಲಿಯೇ ಇರು, ನಿನ್ನ ಸಲುವಾಗಿ ನಾನು ಎಷ್ಟು ಹೊತ್ತು ನಿಲ್ಲಲಿ." ಎನ್ನುತ್ತ ಅವನು ಹೂಬಿಟ್ಟ ಗಿಡಗಳ ಕಡೆಗೆ ಭರದಿಂದ ಓಡಹತ್ತಿದ.

ಕನಕನಿಗೆ ಈಗ ಏಳು ವರುಷ. ಒಂದು ತಾವದಲ್ಲಿ ನಿಂತುಕೊಂಡು

ಸಮುದ್ರವನ್ನು ನೋಡುತ್ತಿದ್ದಳು, ಏನೇನನ್ನೋ ಆಲೋಚಿಸುತ್ತಿದ್ದಳು. ದಿನ ದಂತೆ ಇಂದಾವರೂ ಅವಳ ನೋಟವು ಅತ್ತ ಹೊರಳಿತು. ಅಲ್ಲಿಯೇ ಒಂದು ಹೂವಿನ ಗಿಡದಲ್ಲಿ ಒಂದು ಸುಂದರವಾದ ಹೂ ಅರಳಿತ್ತು. ಅದರ ಮೇಲೆ ಒಂದು ಪಾತರಗಿತ್ತಿ ಕುಳಿತಿತ್ತು. ಕನಕನು ಅದನ್ನು ನೋಡಿದಳು. ಪಾತರಗಿತ್ತಿಯಂತೆ ಹಾರುತ್ತ ಅವಳು ಅದರ ಕಡೆಗೆ ಸಾಗಿದಳು. ಹತ್ತಿರ ಹೋಗಿ ಅದನ್ನು ಎವೆ ಯಿಕ್ಕದೆ ನೋಡಹತ್ತಿದಳು. ತುಸು ಹೊತ್ತು ಏನೇನನ್ನೋ ವಿಚಾರ ಮಾಡುತ್ತ ನಿಂತಿದ್ದಳು. ಆ ಮೇಲೆ ತನ್ನ ಕೈಯನ್ನು ಪಾತರಗಿತ್ತಿಯ ಕಡೆಗೆ ಚಾಚಿದಳು. ಪಾತರಗಿತ್ತಿ ಹಾರಿತು, ಮತ್ತೊಂದು ಮಗದ ಮೇಲೆ ಕುಳಿತುಕೊಂಡಿತು. ಹುಡುಗೆಯ ಮೋರೆ ಮಲಿನವಾಯಿತು. ಅವಳು ಮನಸ್ಸಿನೊಳಗೆಯೇ ಎನ್ನು ತ್ತಿದ್ದಳು—"ಎಲೆ ಪಾತರಗಿತ್ತಿ, ನೀನೇಕೆ ಹಾರಿಹೋದೆ? ನಾನು ನಿನ್ನನ್ನು ಪ್ರೀತಿ ಮಾಡಬೇಕೆನ್ನುತ್ತಿದ್ದೆ; ಆದರೆ ನೀನು ನಿಷ್ಠುರತನದಿಂದ ಹಾರಿಹೋದೆ!" ಪಾಪ ಹುಡುಗೆ ಹತಾಶಳಾದಳು. ಒಂದು ಗುಲಾಬಿ ಹೂವಿನ ಗಿಡದ ಹತ್ತಿರ ಬಂದು ನಿಂತಳು. ಅದರೊಳಗೊಂದು ಹೂವರಳಿ ತನ್ನ ಕಲಾಪೂರ್ಣ ಸೌಂದರ್ಯ ವನ್ನು ತೋರಿಸುತ್ತಿತ್ತು. ಅಲ್ಲಿಯೇ ನಿಂತು ಅದರ ಸೌಂದರ್ಯವನ್ನು ನಿಟ್ಟಿಸುತ್ತಿ ದ್ದಳು. ಆದರೆ ನೋಡಲು ಅವಳು ಹೆದರುತ್ತಿದ್ದಳು. ಈಗ ಒಂದು ವ್ಯಕ್ತಿ ಬರು ವುದು, ಅವಳಿಗೆ ಈ ಸೌಂದರ್ಯವನ್ನು ನೋಡಕೊಡುವುದಿಲ್ಲ. ಮುಂದೆ ಬಂದು ಈ ಹೂವನ್ನು ಹರಿದುಕೊಂಡರೆ ಹೇಗೆ, ಎಂದು ವಿಚಾರ ಮಾಡುತ್ತ ಅವಳು ತನ್ನ ಕೋಮಲಕರಗಳಿಂದ ಅದನ್ನು ಹರಿದುಕೊಂಡಳು. ಹೂವನ್ನು ಕೈಯ ಲ್ಲಿಟ್ಟುಕೊಂಡು ಅವಳು ಸತೃಷ್ಣ ನೇತ್ರಗಳಿಂದ ನೋಡಹತ್ತಿದಳು. ಹುಡುಗನು ಕನಕನು ಹೂವು ಕೊಯ್ಯುವಾಗ ನೋಡಲಿಲ್ಲ; ಆದರೆ ಅವನು ತುಸು ಹೊತ್ತಿ ನಲ್ಲಿಯೇ ಮರಳಿ ಬಂದು ನೋಡಿದ. ಆಗ ಅವನು ಬೆದರಿಸಿ—"ನನ್ನ ಹೂವನ್ನು ನೀನೇಕೆ ಹರಿದೆ?" ಎಂದ.

ಪಾಪ ಕನಕ ಮುಂದುಗಾಣದಾದಳು. ಅಣ್ಣನ ಮೋರೆಯನ್ನು ನೋಡಿ ಏನೋ ಹೇಳಬೇಕೆನ್ನುತ್ತಿದ್ದಳು; ಆದರೆ ಬಾಯಿಂದ ಮಾತೇ ಹೊರಡಲಿಲ್ಲ.

"ನೀನು ಬಹಳ ಕೆಟ್ಟವಳು, ಆ ಹೂವು ನನ್ನದು, ಏಕೆ ಹರಿದೆ?" ಸಿಟ್ಟಿನಲ್ಲಿ ಬಂದು ಹುಡುಗನೆಂದ.

ಹುಡುಗೆ ಸಕರುಣ ನೇತ್ರಗಳಿಂದ ಅಣ್ಣನ ಕಡೆಗೆ ನೋಡಿ ಸುಮ್ಮ ನಾದಳು. ಸುಮ್ಮನೆ ಅವಳು ಕ್ಷಮೆಯನ್ನು ಯಾಚಿಸುವಂತಿದ್ದಳು, ಆದರೆ

ಬಾಯಿಂದ ಮಾತು ಹೊರಡುತ್ತಿದ್ದಿಲ್ಲ. ಹುಡುಗೆ ಸುಮ್ಮನಾದುದರಿಂದ ಹುಡುಗನು ಮತ್ತಿಷ್ಟು ಚಿಂಕಿಯಾದ. "ಹೂವನ್ನೇಕೆ ಹರಿದೆ ?"—ಎಂದು ಅವನು ಹುಡುಗೆಯನ್ನು ಹೊಡೆಯಲು ಕೈ ಎತ್ತುವವನಿದ್ದ. ಇಷ್ಟರೊಳಗೆ ಒಬ್ಬ ಅಪರಿಚಿತ ವ್ಯಕ್ತಿ ಹಿಂದಿನಿಂದ ಬಂದು ಅವನ ಕೈ ಹಿಡಿದರು.

ವಾಚಕ ಮಹನೀಯರೆ, ಈ ಅಪರಿಚಿತ ವ್ಯಕ್ತಿ ಮತ್ತೆ ಯಾರೂ ಅಲ್ಲ. ಇವನು ನಮಗೆ ಪೂರ್ವ ಪರಿಚಿತರಾದ ಹಿರಣ್ಮ ಕುಮಾರ. ಇವರು ಈ ವರೆಗೆ ದೂರದಲ್ಲಿ ನಿಂತುಕೊಂಡು ಇಬ್ಬರ ಆಟವನ್ನೂ ನೋಡುತ್ತಿದ್ದರು. ಹುಡುಗನು ಹೊಡೆಯಲನುವಾದ ಕೂಡಲೇ ಅವರಿಗೆ ಸುಮ್ಮನಿರುವುದಾಗಲಿಲ್ಲ. ಕೂಡಲೆ ಬಂದು ಅವನ ಕೈ ಹಿಡಿದರು. ಇದು ಹುಡುಗನ ಮನಸ್ಸಿಗೆ ಬರಲಿಲ್ಲ. ಅವನಿಗೆ ಹೀಗೆ ಎಂದೂ ಯಾರೂ ಅಡ್ಡ ಬಂದಿದ್ದಿಲ್ಲ. ಮನಸ್ಸಿಗೆ ಬಂದಾಗ ಬೇಕಾದ ಕೆಲಸವಿರಲಿ, ಮಾಡಿಬಿಡುತ್ತಿದ್ದ. ಹೀಗೆ ಒಮ್ಮೆಲೇ ಅಡ್ಡ ಬಂದುದ ರಿಂದ ಅವನಿಗೆ ಅಪಮಾನವೆನಿಸಿತು. ಅಪಮಾನವು ನೆನಪಿಗೆ ಬರುತ್ತಲೇ ಸಿಟ್ಟು ನೆತ್ತಿಗೇರುತ್ತಿತ್ತು. ಸಿಟ್ಟಿನಿಂದ ಮೈಯೆಲ್ಲ ಕಾಯಿತು, ಕಂಪಿಸಹತ್ತಿದ. ಈಗ ಕೈ ಬಿಡಿಸಿಕೊಳ್ಳಲು ಯತ್ನಿಸಹತ್ತಿದ. ಆದರೆ ಅವನಿಗೆ ಗೆಲವು ಸಿಗಲಿಲ್ಲ. ಆದರಿಂದ ಮನಸ್ಸಿನೊಳಗೆಯೇ ತಳಮಳಿಸಿಕೊಂಡು ಸುಮ್ಮನಾದ. ಅವನಿಗೆ ಯಾರ ಹಿರಿತನವೂ ಸೇರುವುದಿಲ್ಲ. ಅಡೆ-ತಡೆಗಳು ಅಡ್ಡಾದರೆ ಅವನನ್ನು ಯಾರೂ ಮಾತನಾಡಿಸಿ ಬದುಕಲಾರರು. ಸವಿಮಾತನಾಡಿ ಅವನಿಂದ ಬೇಕಾದ ಕೆಲಸ ಮಾಡಿಸಿಕೊಳ್ಳಿರಿ, ಮಾಡುವನು; ಆದರೆ ಹಠಪೂರ್ವಕವಾಗಿ ಅವನಿಂದ ಏನು ಮಾಡಿಸಲೂ ಸಾಧ್ಯವಿಲ್ಲ. ಸಣ್ಣಪುಟ್ಟ ಮಾತಿಗೇ ಅವನು ರೇಗಿಗೇಳುತ್ತಾನೆ; ಆದರೆ ಆ ಸಿಟ್ಟಾದರೂ ಸ್ವಲ್ಪ ಹೊತ್ತು ಮಾತ್ರ ಇರುವುದು. ಅವನು ತಾಯಿ-ತಂದೆಗಳಿಗೆ ಪ್ರೀತಿಯ ಮಗ. ಅದರಿಂದ ಅವನ ಉದ್ಧಟ ತನವು ಎಲ್ಲೆ ಮೀರಿತ್ತು. ತಾಯಿ-ತಂದೆಗಳು ಆಗಾಗ ಗುಡುಗು ಹಾಕುತ್ತಿದ್ದರೆ ಅವನೂ ವಿನಯಿಯಾಗುತ್ತಿದ್ದ, ಅವನ ಸ್ವಭಾವವೂ ನಮ್ರವಾಗುತ್ತಿತ್ತು. ಅಪರಿಚಿತ ವ್ಯಕ್ತಿ ಹೀಗೆ ಅವನಿಗೆ ಅಪಮಾನ ಮಾಡುವುದು ಅವನ ಮಾನಕ್ಕೆ ಸರಿ ಬರಲಿಲ್ಲ. ಅವನ ಸಿಟ್ಟು ತಲೆಗೇರಿತು. ಕೈ ಬಿಡಿಸಿಕೊಳ್ಳಲು ಅವನು ಅಸಮರ್ಥನಾದ. ಆಗ ಕೆಂಗಣ್ಣಿನಿಂದ ಹಿರಣ್ಮನನ್ನು ನೋಡಹತ್ತಿದ. ಕೈ ಬಿಟ್ಟರೆ ಮತ್ತೆ ಹುಡುಗೆಯನ್ನು ಹೊಡೆಯುವನೆಂಬ ಹೆದರಿಕೆ ಅವರಿಗಿತ್ತು.

ಅದರಿಂದ ಅವನ ಕೈಯನ್ನು ಬಿಡಲಿಲ್ಲ. " ಇನ್ನು ಹೊಡೆಯುವುದಿಲ್ಲವೆಂದು ಹೇಳು, ಎಂದರೆ ನಿನ್ನ ಕೈ ಬಿಡುವೆ. " ಎಂದರು.

ಈ ಪ್ರಶ್ನೆಯನ್ನು ಕೇಳಿದಾಗಂತೂ ಹುಡುಗನ ಸಿಟ್ಟು ಕಟ್ಟನ್ನೊಡೆಯಿತು. ಸಿಟ್ಟಿನಿಂದ ಗದರಿಸಿದ— " ಹೊಡೆಯುವೆ. "

ಹಿರಣ್ಯ— " ಹಾಗಾದರೆ ನಾನೂ ನಿನ್ನ ಕೈ ಬಿಡುವುದಿಲ್ಲ. "

ಹುಡುಗ— " ಕೈ ಬಿಡಿರಿ. ನನ್ನ ಕೈಯನ್ನೇಕೆ ಹಿಡಿದಿರುವಿರಿ? ನೀವೇನು ಸಂಬಂಧ? "

" ಒಳ್ಳೇದು, ಇನ್ನು ಹೊಡೆಯುವುದಿಲ್ಲವೆಂದು ಹೇಳು, ಈಗಲೇ ಕೈ ಬಿಡುವೆ. " ಮತ್ತೆ ಹೇಳಿದರು ಹಿರಣ್ಯ ಕುಮಾರರು.

ಬಾಲಕನು ಮತ್ತೆ ಕೈ ಬಿಡಿಸಿಕೊಳ್ಳಲೆತ್ನಿಸಿದ; ಆದರೂ ಅವನಿಗೆ ಸೋಲಾಯಿತು. ಕಣ್ಣುಗಳಲ್ಲಿ ನೀರೂರಿತು. " ನಮ್ಮ ತಂಗಿ–ನಾನು ಹೊಡೆಯುತ್ತೇನೆ, ನೀವೇಕೆ ನನ್ನನ್ನು ಹಿಡಿಯುತ್ತೀರಿ? " ಎಂದ.

ಬಾಲಕನ ಮಾತನ್ನು ಕೇಳಿ ಹಿರಣ್ಯಕುಮಾರರಿಗೆ ನಗೆ ಬಂದಿತು.

ಹುಡುಗಿ ಹೆದರಿದ್ದಳು. ಒಂದೆಡೆ ಅಪರಾಧಿನಿಯಂತೆ ನಿಂತುಕೊಂಡಿದ್ದಳು. ಹಿರಣ್ಯಕುಮಾರರು ನಗುತ್ತಿದ್ದರು. ಅವಳಿಗೆ ಆಗ ಧೈರ್ಯ ಬಂದಿತು. ಹತ್ತಿರ ಬಂದು ಅವಳು " ಅಣ್ಣನ ಕೈ ಬಿಡಿರಿ " ಎಂದಳು. ಹಿರಣ್ಯ ಕೈ ಬಿಟ್ಟರು. ಹುಡುಗನು ಮರುಮಾತನಾಡದೆ ಅಲ್ಲಿಂದ ಹೊರಟು ಹೋದ. ದಿನದಂತೆ ಆಗಿದ್ದರೆ ಅವನು ಹೋಗಿ ತಾಯಿಯ ಮುಂದೆ ಎಷ್ಟು ಚಾಡಿ ಹೇಳುತ್ತಿದ್ದನೋ ಏನೋ; ಆದರೆ ಇಂದು ಏಕೋ ಏನೋ ಹಾಗೆ ಮಾಡಲಿಲ್ಲ. ಹಿರಣ್ಯ ಕುಮಾರರು ಹುಡುಗಿಯನ್ನೆತ್ತಿಕೊಂಡು ಮನೆಯ ಕಡೆಗೆ ಹೊರಟರು. " ನೀವು ಅಣ್ಣನ ಕೈಯನ್ನೇಕೆ ಹಿಡಿದಿದ್ದಿರಿ? " ಹಾದಿಯಲ್ಲಿ ಹುಡುಗಿ ಕೇಳಿದಳು. ಆದರೆ ಅವರು ಅದಕ್ಕೆ ಉತ್ತರ ಕೊಡಲಿಲ್ಲ.

ಮೇಲಿನ ಸಂಗತಿ ನಡೆದು ಸ್ವಲ್ಪ ಹೊತ್ತಾಗಿತ್ತು. ಅಣ್ಣ-ತಂಗಿಯರಿಬ್ಬರೂ ಜೇನೆ ಬಿದ್ದ ತಾಯಿಯ ಹತ್ತಿರ ಹೋದರು. ಹುಡುಗನು ಎಂದಿನಂತೆ ಉಲ್ಲಾಸದಿಂದ ಇದ್ದಿಲ್ಲ. ಅವನ ಮುಖಾರವಿಂದವು ಬಾಡಿತ್ತು. ತಾಯಿ ನೋಡಿದಳು. ಪ್ರೀತಿಯಿಂದ ಮಗನನ್ನು ಹತ್ತಿರ ಕರೆದಳು, ಹತ್ತಿರ ಕುಳ್ಳಿರಿಸಿಕೊಂಡು ದುರ್ಬಲವಾದ ಕರಗಳಿಂದ ಮೈದಡವಿದಳು, ಸಂತೈಸಿದಳು—"ಅಪ್ಪಾ

ಮಗು ಪ್ರಮೋದ, ಇಂದೇಕೆ ನಿನ್ನ ಮೋರೆ ಬಾಡಿದೆ ?" ಹುಡುಗನು ಮಾತ ನಾಡಲಿಲ್ಲ. ಸುಮ್ಮನೆ ಕುಳಿತುಕೊಂಡಿದ್ದ. ಹುಡುಗಿ ಕನಕಲತೆ ಹೆದರಿಕೊಂಡು ಒಂದು ಮೂಲೆಯಲ್ಲಿ ನಿಂತಿದ್ದಳು. ತಾಯಿ ಅವಳನ್ನು ಮಾತನಾಡಿಸಲೇ ಇಲ್ಲ. ಅವಳನ್ನು ಕತ್ತೆತ್ತಿ ಒಮ್ಮೆಯೂ ನೋಡಲಿಲ್ಲ. ತಾಯಿಯ ಈ ಪಕ್ಷ ಪಾತವು ಸುಶೀಲೆಗೆ ಸರಿ ಕಾಣಲಿಲ್ಲ. ಮಗಳನ್ನು ಹತ್ತಿರ ಕರೆದು ಎತ್ತಿ ಕೊಂಡಳು. "ಅಕ್ಕ, ಇವಳೇನು ನಿನ್ನ ಹೊಟ್ಟೆಯ ಮಗಳಲ್ಲವೆ, ತೌಡು ಕೊಟ್ಟು ಕೊಂಡಿರುವೆಯೇನು ?" ಎಂದಳು ಸುಶೀಲೆ.

ತಂಗಿಯ ಮಾತನ್ನು ಕೇಳಿ ಚಾರುಶೀಲೆಯ ದುರ್ಬಲವಾದ ತುಟಿಗಳ ಮೇಲೆ ಮಿಂಚಿನಂತೆ ನಸುನಗೆಯ ರೇಖೆಯೊಂದು ಮೂಡಿ ಮಾಯ ವಾಯಿತು.

× × × ×

ಚಾರುಶೀಲೆ ಹಾಸುಗೆಯನ್ನೇನೂ ಬಹಳ ದಿನ ಹಿಡಿಯಲಿಲ್ಲ. ತನ್ನ ಇಬ್ಬರೂ ಮಕ್ಕಳನ್ನು ಸುಶೀಲೆಯ ಕೈಗೆ ಕೊಟ್ಟು ಪರಲೋಕಕ್ಕೆ ಪ್ರಯಾಣ ಬೆಳಿಸಿದಳು. ಯಾರೇನು ಮಾಡುವುದು; ಬಂದುದನ್ನು ಭೋಗಿಸಲೇಬೇಕಲ್ಲವೆ? ಕಾಲ ಪುರುಷನು ಬಲವಂತ. ಅವನ ಮುಂದೆ ಯಾರ ಆಟ ನಡೆಯುವುದು !

## ಹಾದಿ ತಪ್ಪಿದರು

ಹತ್ತು ವರುಷಗಳಾದುವು. ಈಗ ಶರದ ಋತು ಬಂದಿದೆ ತುಂಬಿದ ಹರಿಯುವ ಹೆಣ್ಣಿನಂತೆ ಜಾಹ್ನವಿ ಉಲ್ಲಾಸದಿಂದ ಕಲ-ಕಲ ಸಪ್ಪಳ ಮಾಡುತ್ತ ಹರಿಯುತ್ತಿದ್ದಾಳೆ. ದಂಡೆಯ ಮೇಲೆ ಕಾನಪುರವಿದೆ.

ಸಂಜೆಯ ಸಮಯ. ಸೂರ್ಯನಾರಾಯಣನು ಪಶ್ಚಿಮ ದಿಗಂಗನೆಯನ್ನು ಚುಂಬಿಸಲು ಭರದಿಂದ ಸಾಗಿದ್ದಾನೆ. ಸೂರ್ಯನ ಕಿರಣಗಳು ಮೋಡಗಳ ಛಾಯೆಯಲ್ಲಿ ಹಾಯ್ದು ಹೊರಬೀಳುವುದರಿಂದ ಅದು ನೀರಿನಲ್ಲಿ ಬಣ್ಣ ಬಣ್ಣದ ರೂಪವನ್ನು ತೋರಿಸುತ್ತಿದೆ. ಒಂದು ದಂಡೆಯ ಮೇಲೆ ಕಾನಪುರ ನಗರವು ಮೆರೆಯುತ್ತಿದೆ. ಇನ್ನೊಂದು ದಂಡೆಗೆ ಒಂದು ವಿಶಾಲವೂ, ವಿಸ್ತೃತವೂ ಆದ ಅಡವಿಯಿದೆ. ಅಡವಿ ಕೆಲವು ಕಡೆ ಇಕ್ಕಟ್ಟಾಗಿದೆ, ಒಂದೆಡೆ ವಿಸ್ತೃತ

ವಾಗಿದೆ, ಮತ್ತೊಂದೆಡೆ ಅತ್ಯಂತ ದಟ್ಟವಾಗಿದೆ. ಒಂದು ವಟವೃಕ್ಷದ ಮೇಲೆ ಬಣ್ಣ-ಬಣ್ಣದ ಪಕ್ಷಿಗಳು ಚಿಲಿಪಿಲಿ ದನಿ ಮಾಡುತ್ತಿವೆ. ಮೆಳೆಗಳೊಳಗಿಂದ ಒಂದೆರಡು ಚಿಗರೆ, ಶೃಗಾಲ ಮೊದಲಾದ ಕಾಡು ಮೃಗಗಳು ಹೊರಬಿದ್ದು ಒಂದೆಡೆಯಿಂದ ಇನ್ನೊಂದೆಡೆಗೆ ಓಡಾಡುತ್ತಿವೆ. ಸಮೀಪದಲ್ಲೆಲ್ಲಿಯೂ ಮನುಷ್ಯರಿರುವ ಸುಳಿವು ಕಾಣುವುದಿಲ್ಲ. ದೃಷ್ಟಿಯನ್ನೋಡಿಸಿದತ್ತೆಲ್ಲ ಅಡವಿಯೋ ಅಡವಿ ಕಾಣಿಸುತ್ತದೆ. ಒಮ್ಮೆಲೇ ಈ ಅಡವಿಯಲ್ಲಿ ಬಂದೂಕಿನ ಸಪ್ಪಳ ವಾಯಿತು. ಒಂದೆರಡು ಮೃಗಗಳು ಈಗ ಹೊರಬಿದ್ದು ಮೈಮರೆತು ತಿರುಗಾಡುತ್ತಿದ್ದುವು, ಅವೂ ಹೆದರಿ ಸಿಕ್ಕ ಹೊದರಿನಲ್ಲಿ ಮರೆಯಾದುವು. ಪಾಪ, ಪಕ್ಷಿಗಳು ಈ ವೃಕ್ಷದಿಂದ ಹಾರಿ ಇನ್ನೊಂದು ವೃಕ್ಷದ ಮೇಲೆ ಕುಳಿತುಕೊಂಡವು.

ಒಂದು ಗಿಡದ ಹರಿಯ ಮೇಲೆ ಎರಡು ಹಕ್ಕಿ ಕುಳಿತುಕೊಂಡಿದ್ದುವು. ನೋಡು-ನೋಡುವಷ್ಟರಲ್ಲಿ ತರಗೆಲೆ ಮರದಿಂದುದುರುವಂತೆ ಒಂದು ಹಕ್ಕಿ ಕೆಳಗೆ ಬಿದ್ದು ನೆಲದ ಮೇಲೆ ಉರುಳಾಡಹತ್ತಿತು. ಇನ್ನೊಂದು ಜೀವಕ್ಕೆ ಹೆದರಿಕೊಂಡು ಬೇರೆ ಮರದ ಮೇಲೆ ಹೋಗಿ ಕುಳಿತುಕೊಂಡಿತು. ಹಕ್ಕಿಯನ್ನು ಇಬ್ಬರೂ ಬೆನ್ನು ಹತ್ತಿದ್ದರು. ತರುಣರಿಬ್ಬರ ಕರದೊಳಗೂ ಬಂದೂಕು ಇದ್ದುವು. ಹಕ್ಕಿಯ ಹತ್ತಿರ ಬಂದು ಇಬ್ಬರೂ ಗುರಿಯಿಡಹತ್ತಿದರು. ತರುಣರಿಬ್ಬರಲ್ಲಿ ಒಬ್ಬನು "ಪ್ರಮೋದ, ನೋಡು, ಈ ಸಾರೆಯೂ ಹುಸಿಗುಂಡನ್ನು ಮಾತ್ರ ಹಾರಿಸಬೇಡ" ಎಂದ.

ವಾಚಕರೇ ಹತ್ತು ವರುಷಗಳ ಹಿಂದೆ ತೋಟದಲ್ಲಿ ಆಡುವಾಗ ಈ ಹುಡುಗನನ್ನು ನೋಡಿದ್ದೀರಿ. ಆ ಪ್ರಮೋದನೇ ಈಗ ದೊಡ್ಡವನಾಗಿ ಕಾನಪುರದ ಅಡವಿಯಲ್ಲಿ ಬೇಟೆಯಾಡಲು ಬಂದಿದ್ದಾನೆ. ಚಿಕ್ಕಂದಿನಲ್ಲಿದ್ದ ಸೌಂದರ್ಯವು ಈಗ ಸಂಪೂರ್ಣವಾಗಿ ವಿಕಸಿತವಾಗಿದೆ. ಅಭಾವವಿದ್ದುದನ್ನು ಹರಯವು ತುಂಬಿದೆ. ಆದರೆ ಚಂಚಲ ಸ್ವಭಾವದಲ್ಲಿ ಮಾತ್ರ ಅಣುಮಾತ್ರವೂ ಹೆಚ್ಚು-ಕಡಮೆಯಾಗಿಲ್ಲ. ಚಿಕ್ಕಂದಿನಂತೆ ಹೂವನ್ನು ಹರಿದರೆ ತಂಗಿಯನ್ನು ಹೊಡೆಯುವುದಿಲ್ಲ. ಆದರೂ ಅವನು ಚಂಚಲ ಪ್ರಮೋದನಾಗಿಯೇ ಉಳಿದಿದ್ದಾನೆ ಹಿಂದಿನ ಗುಣಗಳನ್ನೀಗ ಅವನು ಬಿಟ್ಟಿದ್ದಾನೆ. ಈಗ ಅವನು ಆಟ, ಬೇಟೆ, ಕಾಲೇಜದಲ್ಲಿ ಜಗಳ ಮಾಡಲು ಬಹಳ ನಿಪುಣನಾಗಿದ್ದಾನೆ. ಕಾಲೇಜದಲ್ಲಿ ಪ್ರಮೋದನನ್ನು ಸರಿಗಟ್ಟುವವರು ಯಾರೂ ಇಲ್ಲ. ಉಡಾಳ ವಿದ್ಯಾರ್ಥಿಗಳು ಕೂಡ ಪ್ರಮೋದನಿಗೆ ಯಮನಂತೆ ಹೆದರುತ್ತಾರೆ.

ಕಲಕತ್ತೆಯ ಕಾಲೇಜಿನಲ್ಲಿ ಪ್ರಮೋದನು ಓದುತ್ತಾನೆ. ಬಿಡುವಿನ ದಿನಗಳಲ್ಲಿ ಆಗಾಗ ಅಲಾಹಾಬಾದಕ್ಕೆ ಬರುತ್ತಾನೆ. ಚಾರುಶೀಲೆ ತೀರಿಕೊಂಡಾಗಿನಿಂದ ಸುಶೀಲೆ, ಕನಕ, ಪ್ರಮೋದರನ್ನು ಕಟ್ಟಿಕೊಂಡು ಬಂದು ಅಲಾಹಾಬಾದಪಲ್ಲಿಯೇ ಇರಹತ್ತಿದ್ದಳು. ಈ ಸಾರೆ ದಸರೆಯ ಬಿಡುವಿನಲ್ಲಿ ಪ್ರಮೋದ ಊರಿಗೆ ಹೋಗಲಿಲ್ಲ. ಒಬ್ಬ ಮಿತ್ರನ ಕೂಡ ಕಾನಪುರಕ್ಕೆ ಬಂದಿದ್ದಾನೆ.

ಬೇಟೆಯೆಂದರೆ ಪ್ರಮೋದ ಒಂದು ಹೊಡೆ ಉಬ್ಬುತ್ತಿದ್ದ. ಆದರೆ ಮೃಗಗಳು ಅವನಿಗೆ ಈ ಅಡವಿಯಲ್ಲಿ ಸಿಗಲೇ ಇಲ್ಲ. ಅದರಿಂದ ಹಕ್ಕಿಗಳನ್ನು ಬೇಟೆಯಾಡಿಯೇ ಸುಮ್ಮನಿರಬೇಕಾಯಿತು. ಅವನು ಓಡಿ ಬಂದು ಒಂದು ಗಿಡವಡಿಯಲ್ಲಿ ನಿಂತುಕೊಂಡ. ಅದೇ ಗಿಡದ ಮೇಲೆ ಪಕ್ಷಿ ಕುಳಿತುಕೊಂಡಿತ್ತು. ಪ್ರಮೋದನು ಗುರಿಯಿಟ್ಟು ಬಂದೂಕು ಹಾರಿಸಿದ. ಆದರೇನು, ಗುಂಡು ಹಾರುವ ಮುನ್ನವೇ ಹಕ್ಕಿ ಹಾರಿಹೋಗಿ ಬಿಟ್ಟಿತು. ಪ್ರಮೋದನು ನಾಚಿದ. ಜೋಲು ಮೋರೆ ಮಾಡಿಕೊಂಡು ಬೇರೆ ಕಡೆಗೆ ಹೋದ. ಇಬ್ಬರೂ ಗೆಳೆಯರು ಕೂಡಿ ಬಹಳ ಹಕ್ಕಿಗಳನ್ನು ಬೇಟೆಯಾಡಿದರು; ಆದರೆ ಆ ಬೇಟೆಯಿಂದ ತೃಪ್ತಿಯಾಗಲಿಲ್ಲ. ಮತ್ತೆ ಅವರು ಬೇರೆ ಕಡೆಗೆ ಹೊರಟು ಹೋದರು. ಹೋಗ-ಹೋಗುತ್ತ ಪ್ರಮೋದನು ಇದೇ ಈಗ ಹಾರಿ ಹೋದ ಹಕ್ಕಿಯನ್ನು ನೋಡಿದ. ಅದನ್ನು ಹೊಡೆಯಬೇಕೆಂದು ಎರಡು ಸಾರೆ ಗುರಿಯಿಟ್ಟ. ಆದರೂ ಗುಂಡು ತಾಕಲಿಲ್ಲ. ಅದರಿಂದ ಅವನು ನಾಚಿದ, ನೊಂದುಕೊಂಡ, ಇಚ್ಛೆಯನ್ನು ಕೈಗೂಡಿಸಿಕೊಳ್ಳಲು ಪ್ರಮೋದನು ಕೂಡಲೆ ಅದೇ ಮರದ ಕಡೆಗೆ ಹೊರಟ. ಆದರೆ ಮರಣ ಕಾಲವು ಸಮೀಪಿಸಬೇಕಲ್ಲ. ಮರಣವು ತುಂಬದೆ ಯಾರಾದರೂ ಸಾಯುವರೆ? ಪಕ್ಷಿ ಈಗಲೂ 'ಫುರ್' ಎಂದು ಹಾರಿಹೋಯಿತು. ಈ ಸಾರೆ ಪ್ರಮೋದನಿಗೆ ಸಿಟ್ಟು ಬಂದಿತು. ಹಕ್ಕಿಯ ಹಿಂದೆ ಹಿಂದೆ ಓಡಿದ. ಇಷ್ಟು ಹೊತ್ತಿಗೆ ಕತ್ತಲೆಯೂ ಬೀಳಹತ್ತಿತು. ಕತ್ತಲೆಯೊಳಗೆಲ್ಲಿಯೋ ಹಕ್ಕಿ ಮಾಯವಾಯಿತು. ಪ್ರಮೋದನಿಗೆ ಗೊತ್ತೇ ಆಗಲಿಲ್ಲ. ಪ್ರಮೋದನ ಈ ಉತ್ಸಾಹವನ್ನು ನೋಡಿ ಯಾಮಿನೀನಾಥನು ಪ್ರಮೋದನಿಗೆ, "ಮಹಾರಾಯಾ ಇನ್ನು ತಿರುಗು"— ಎಂದು ಎಷ್ಟೋ ಸಾರೆ ಹೇಳಿದ. ಆದರೆ ಅವನ ಮಾತನ್ನು ಪ್ರಮೋದನು ಕೇಳಬೇಕಲ್ಲ. ಇಬ್ಬರೂ ಬಹಳ ದಣಿದಿದ್ದರು. ಕತ್ತಲೆಯೂ ಕವಿದಿತ್ತು. ಒಂದು ಗಿಡದಡಿಯಲ್ಲಿ ಇಬ್ಬರೂ ಕುಳಿತುಕೊಂಡರು. ಕ್ಷಣ ಹೊತ್ತಿನಲ್ಲಿ ಆಗಸದಲ್ಲಿ ತಾರೆಗಳು ಮಿನುಗಹತ್ತಿದವು. ಗಿಡಗಳ ಕಂಟೆ

ಯಲ್ಲಿ ದೀಪದ ಹುಳಗಳು ಮಿನಿ-ಮಿನಿ ಎನ್ನುತ್ತ ಹಾರಾಡಹತ್ತಿದುವು. ಹೊತ್ತು ಮುಳುಗಿತೆಂದು ತಿಳಿದು ಮಿತ್ರರಿಬ್ಬರೂ ಎದ್ದರು. ಕಾನಪುರಕ್ಕೆ ಬಂದಮೇಲೆ ಅವರು ಒಂದು ಮನೆಯನ್ನು ಬಾಡಿಗೆ ಹಿಡಿದಿದ್ದರು. ಅದು ನದಿಯ ದಂಡೆಯ ಮೇಲೆ ಇತ್ತು. ಕತ್ತಲೆ ದಟ್ಟವಾಗಿತ್ತು. ಅದರಿಂದ ಬಹಳ ಹೊತ್ತು ಅಡ್ಡಾಡುವುದಾಗಲಿಲ್ಲ. ಈ ಅಡವಿಯೊಳಗಿಂದ ಪಾರಾಗಲು ದಾರಿ ಸಿಗುವುದಿಲ್ಲವೆಂದು ಅವರಿಗೆ ಮನವರಿಕೆಯಾಯಿತು. ಹತಾಶನಾಗಿ ಪ್ರಮೋದನು— "ಗೆಳೆಯ, ಈಗ ನಮ್ಮ ಮುಂದೆ ದೊಡ್ಡ ಸಂಕಟವಿದೆ, ಕತ್ತಲೆಯೂ ಹೆಚ್ಚುತ್ತಾ ನಡೆದಿದೆ, ಪಾರಾಗಲು ದಾರಿಯೂ ನಮಗೆ ಗೊತ್ತಿಲ್ಲ. ಹೇಗೆ ಪಾರಾಗುವುದು? ರಾತ್ರಿಯನ್ನಿಲ್ಲಿಯೇ ಕಳೆಯದೆ ಗತಿಯಿಲ್ಲ" ಎಂದ.

"ಸಹೋದರ, ನಾನಂತೂ ಇನ್ನು ನಡೆಯಲಾರೆ. ನೀನು ಹುಚ್ಚನಂತೆ ಹೀಗೆ ಬೇಟೆಯಾಡದಿದ್ದಿದ್ದರೆ, ನಮಗೆ ಇಂಥ ಹೊತ್ತು ಬರುತ್ತಿದ್ದಿಲ್ಲ." ಯಾಮಿನೀನಾಥನೆಂದ.

ಮಾತನಾಡುತ್ತಿದ್ದರು. ಇಷ್ಟರಲ್ಲಿ ಕಾಡು ಮೃಗಗಳು ಗರ್ಜನೆ ಮಾಡುವುದು ಕೇಳಿಸಿತು. ಕತ್ತಲೆಯಲ್ಲಿ ಒಂದೆರಡು ಅಡವಿ ಮೃಗಗಳು ಅವರ ಹತ್ತಿರ ಹಾಯ್ದು ಹೋದುವು. ಮತ್ತೆ ಪ್ರಮೋದನ ಮನಸ್ಸಿನೊಳಗೆ ಬೇಟೆಯ ಲಾಲಸೆ ಹೆಚ್ಚಿತು. ಅಂಥ ಕತ್ತಲೆಯಲ್ಲಿಯೇ ಗುರಿಯಿಟ್ಟು ಮತ್ತೆ ಬಂದೂಕಿನ ಕುದುರೆಯನ್ನು ಮೀಟಿದ. ಬಂದೂಕು 'ಢಮ' ಎಂದಿತು. ಪಶು-ಪಕ್ಷಿಗಳು ಅತ್ತಿತ್ತ ಓಡಾಡಹತ್ತಿದುವು. ಪಕ್ಷಿಗಳ ಪಡಪಡಾಟ, ಮರಗಳ ಎಲೆಗಳ ಸರಬರ ಸಪ್ಪಳ ಎಲ್ಲವೂ ಕೂಡಿ ಒಂದು ವಿಶೇಷ ಪ್ರಕಾರದ ಕೋಲಾಹಲವೆದ್ದಿತು.

ಇತ್ತ ಅವರು ಹಸಿವೆಯಿಂದ ಕಂಗಾಲಾಗಿದ್ದರು. ಹೆಜ್ಜೆ-ಹೆಜ್ಜೆಗೆ ಕಷ್ಟಪಡುತ್ತಿದ್ದರು. ಆದರೂ ಅವರು ಮುಂದೆ ಸಾಗಿದ್ದರು. ಇಂಥ ಅಂಧಕಾರಮಯವಾದ ಜನಶೂನ್ಯ ವನದಲ್ಲಿ ಇಬ್ಬರೂ ದಾರಿ ತಪ್ಪಿ ಅತ್ತ ಇತ್ತ ಸುತ್ತುತ್ತಿದ್ದರು. ಕೊನೆಗೆ ಇಬ್ಬರೂ ಪೂರ್ಣ ಕಂಗಾಲಾದರು, ಹತಾಶರಾದರು, ಒಂದು ಗಿಡದಡಿಯಲ್ಲಿ ಕುಳಿತುಬಿಟ್ಟರು.

ತುಸು ಹೊತ್ತು ಕುಳಿತಿರಬಹುದು, ಒಂದು ಸಂಗೀತವು ಕೇಳಿಸಹತ್ತಿತು. ಕೇಳಿ ಇಬ್ಬರೂ ಬೆರಗಾದರು. ಇಂಥ ರಾತ್ರಿಯಲ್ಲಿಯೂ ಮನುಷ್ಯನ ದನಿಯನ್ನು ಕೇಳಿ ಇಬ್ಬರಿಗೂ ಜೀವದೊಳಗೆ ಜೀವ ಬಂದಂತಾಯಿತು. ಆ ಸಂಗೀತವು ಕ್ರಮೇಣ ಅವರಿಗೆ ನಿಚ್ಚಳವಾಗಿ ಕೇಳಿಸಹತ್ತಿತು. ಅವರ ಕಡೆಗೆಯೇ

ಬರಹತ್ತಿತು. ಮೊದ-ಮೊದಲು ಕೇವಲ ಸ್ವರ, ಆ ಮೇಲೆ ಅಸ್ಪಷ್ಟವಾಗಿ, ಕೊನೆಗೆ ಸ್ಪಷ್ಟವಾಗಿ ಹಾಡು ಕೇಳಿಸತೊಡಗಿತು :—

ಮರೆಯಲಾರೆನು ನಿನ್ನ ಚೆಲುವು ರೂಪ।
ಸೈರಿಸದು ಮಮಜೀವ ವಿರಹತಾಪ॥
ಕೊರಗುವೆನು ಗೋಪಾಲ ತ್ವರಿತ ನೀ ಬಂದು।
ನೆಲಸೆನ್ನ ಕಂಗಳಲಿ ಹೇ ಧೀನಬಂಧು॥

ಹಾಡು ನಿಂತಿತು. ಕೂಡಲೇ ಕತ್ತಲೆ ಕವಿದ ಅಡವಿಯಲ್ಲಿ ಒಂದು ಬೆಳಕು ಬೆಳಗಲಾರಂಭಿಸಿತು. ಅಂಧಕಾರವು ಮಾಯವಾಗಹತ್ತಿತು. ಆ ಅಸ್ಪಷ್ಟ ವಾದ ಚಂದ್ರಾಲೋಕದಲ್ಲಿ, ತುಸುವೇ ದೂರದಲ್ಲಿ ಒಂದು ಸುಂದರ ಮೂರ್ತಿ ಯನ್ನವರು ಕಂಡರು. ತನ್ನ ರೂಪರಾಶಿಯಿಂದ ಅಡವಿಯೊಳಗಿನ ಕತ್ತಲೆ ಯನ್ನು ಹೋಗಲಾಡಿಸುತ್ತಿದ್ದಳವಳು. ಅವಳೇ ತನ್ನ ಸುಮಧುರ ಆಲಾಪನೆ ಯಿಂದ ರಜನಿಯ ನಿಸ್ತಬ್ಧತೆಯನ್ನೂ, ಅಡವಿಯ ಭೀಷಣತೆಯನ್ನೂ ಕಡಿಮೆ ಮಾಡುತ್ತಿದ್ದಳು.

ರಮಣಿ ಹಾಡುತ್ತ ಅಡವಿಯಲ್ಲಿ ತಿರುಗಾಡಹತ್ತಿದಳು. ತರುಣರಿಬ್ಬರೂ ಅವಳನ್ನು ಎವೆಯಿಕ್ಕದೆ ನಿಟ್ಟಿಸಹತ್ತಿದರು. ಒಮ್ಮೆಲೇ ಅವರ ಮೋಹದ ಕಟ್ಟು ಒಡೆಯಿತು. ಎದ್ದು ನಿಂತರು. ರಮಣಿಯನ್ನು ಏನೋ ಕೇಳಬೇಕೆಂಬ ವಿಚಾರದಿಂದ ಅವಳ ಹತ್ತಿರ ಬಂದರು. ಅಡವಿಯಲ್ಲಿ ಈ ಇಬ್ಬರನ್ನು ನೋಡಿ ಅವಳು ತನ್ನ ಹಾಡನ್ನು ನಿಲ್ಲಿಸಿದಳು.

“ ನಾವು ಬೇಟೆಯಾಡಲು ಬಂದಿದ್ದೆವು. ಹಾದಿ ತಪ್ಪಿದ್ದೇವೆ. ನೀವು ಇಲ್ಲಿಯ ದೇವಿಯರೆಂದು ಕಾಣುತ್ತೀರಿ. ನಮಗೆ ದಾರಿ ತೋರಿಸುವಿರಾ ? ” ಯಾಮಿನೀನಾಥನೆಂದ.

“ ನೀವು ಯಾರು ? ಎಲ್ಲಿಗೆ ಹೋಗಬೇಕು ? ” ತರುಣಿ ಕೋಕಿಲ ಕಂಠದಿಂದ ವಿಚಾರಿಸಿದಳು. ತರುಣಿಯ ಕೋಮಲ ಕಂಠ ಸ್ವರವನ್ನು ಕೇಳಿ ಪ್ರಮೋದನ ಹೃದಯ ತಂತಿ ಕಂಪಿಸಿತು.

“ ನಾವು ದಾರಿ ತಪ್ಪಿದ್ದೇವೆ. ನಾವು ನದಿಯ ದಂಡೆಗೆ ಹೋಗಬೇಕು. ” ಯಾಮಿನೀನಾಥನೆಂದ.

" ನನ್ನ ಕೂಡ ಬನ್ನಿರಿ. " ಎಂದು ತರುಣಿ ಹೇಳಿ ಮುಂದೆ ಮುಂದೆ ಹೊರಟಳು. ಇಬ್ಬರೂ ತರುಣಿಯ ಹಿಂದೆ ಹಿಂದೆ ಹೊರಟರು. ಬೇಗನೇ ನದಿ ದಂಡೆಯನ್ನು ತಲ್ಪಿದರು.

" ಇನ್ನು ನಿಮಗೆ ಹಾದಿ ಸಿಗುವುದೆ? ನಾನಿನ್ನು ಹೋಗುತ್ತೇನೆ. " ತರುಣಿ ದಂಡೆಯನ್ನು ಮುಟ್ಟಿದ ಮೇಲೆ ಕೇಳಿದಳು.

ತರುಣರು ನೋಡಿದರು, ರಾತ್ರಿ ಬಹಳವಾಗಿತ್ತು. ನದಿಯ ದಂಡೆಯಲ್ಲಿ ಒಂದೂ ನಾವೆಯಿದ್ದಿಲ್ಲ. ಅವರಿಗೆ ಪ್ರೂಲಿನ ರಸ್ತೆಯೂ ಗೊತ್ತಿದ್ದಿಲ್ಲ. ಎಂದ ಮೇಲೆ ಅವರು ನದಿಯನ್ನು ದಾಟುವ ಬಗೆ ಹೇಗೆ ?

ಇಬ್ಬರೂ ಚಿಂತೆಗೊಳಗಾದರು ಇದು ತರುಣಿಗೆ ತಿಳಿಯದಿರಲಿಲ್ಲ. " ಇಷ್ಟಾದರೂ ನಿಮಗೆ ದಾರಿ ಸಿಗುವುದಿಲ್ಲವೆ ? " ಎಂದು ಕೇಳಿದಳು.

" ನಮ್ಮ ಹಣೆಯಲ್ಲಿ ಇಂದು ಏನಾಗಬೇಕೆಂದು ಬರೆದಿದೆಯೋ ಏನೊ ! ರಾತ್ರಿಯನ್ನು ಇಲ್ಲಿಯೇ ಕಳೆಯಬೇಕಾಗುವುದು. ಪೂಲಿನ ಹಾದಿಯೂ ಗೊತ್ತಿಲ್ಲ. ನದಿಯಲ್ಲಿ ನಾವೆಗಳೂ ಇಲ್ಲ. ನಾವು ನಿರುಪಾಯರಾಗಿದ್ದೇವೆ. ರಾತ್ರಿಯನ್ನಿಲ್ಲಿಯೇ ಕಳೆಯದೆ ಗತ್ಯಂತರವೇ ಇಲ್ಲ. " ಯಾಮಿನೀನಾಥನೆಂದ.

ಅವರ ಸ್ಥಿತಿಯನ್ನು ಕೇಳಿ ತರುಣಿಯ ಮನಸ್ಸು ಕರಗಿತು. " ನಿಮಗೆ ರಾತ್ರಿಯನ್ನಿಲ್ಲಿಯೇ ಕಳೆಯುವ ಮನಸ್ಸಿದ್ದರೆ, ನನ್ನ ಕೂಡ ಬನ್ನಿರಿ. ರಾತ್ರಿಯನ್ನು ನನ್ನ ಗುಡಿಸಲಿನಲ್ಲಿ ಕಳೆಯಿರಿ " ಎಂದಳು.

ತರುಣಿ ಅವರು ಇಲ್ಲಿಗೆ ಬಂದ ಕಾರಣವನ್ನೂ, ದಾರಿ ಮರೆತುದನ್ನೂ, ಅವರ ಹೆಸರು ಮೊದಲಾದವುಗಳನ್ನೂ ದಾರಿಯುದ್ದಕ್ಕೂ ಕೇಳಿಕೊಂಡಳು. ತರುಣರಿಬ್ಬರೂ ಉತ್ತರ ಕೊಡುತ್ತ ಅವಳ ಹಿಂದೆ ಹೋಗುತ್ತಿದ್ದರು.

## ನಿರ್ಜನವಾದ ಕುಟಿ

ಅಡವಿಯ ಒಂದು ಕಡೆಗೆ ಒಂದು ದೊಡ್ಡ ಗುಡಿಸಲು ಇದೆ. ಆ ಗುಡಿಸಲಿನ ಬಾಗಿಲಲ್ಲಿ ಇಬ್ಬರೂ ತರುಣರು ಬಂದು ನಿಂತರು. ಅವರ ಕೂಡ ಆ ತರುಣಿಯೂ ಇದ್ದಳು ಗುಡಿಸಲಿನ ತುಂಬೆಲ್ಲ ಕತ್ತಲೆಯ ಸಾಮ್ರಾಜ್ಯ. ತರುಣರನ್ನು ಹೊರಗೆ ಬಿಟ್ಟು ತಾನು ಒಳಗೆ ಬಂದು ದೀಪ ಹಚ್ಚಿದಳು.

ಇಬ್ಬರೂ ಒಳಗೆ ಹೋದರು. ದೀಪದ ಬೆಳಕಿನಲ್ಲಿ ಪ್ರಫುಲ್ಲ-ಕುಸುಮ-ಕಾಂತಿ ಯಂತೆ ರಮಣೀ-ಮೂರ್ತಿ ಮನೋಹರವಾಗಿ ಕಂಗೊಳಿಸುತ್ತಿತ್ತು. ಇಬ್ಬರೂ ಕಣ್ಣು, ಮನ ತಣಿಯುವಂತೆ ನೋಡಿದರು. ಇಬ್ಬರೂ ಸುಮ್ಮನೆ ಮಂತ್ರ ಮುಗ್ಧರಂತೆ ಕೇವಲ ಅವಳನ್ನೇ ನಿಟ್ಟಿಸುತ್ತಿದ್ದರು. ತರುಣಿಗೆ ಇದೀಗ ಹದಿ ನಾಲ್ಕು ವರುಷ. ಈ ದೇವಕನ್ಯೆ ಮೃತ್ಯುಲೋಕಕ್ಕೆ ಹೇಗೆ ಬಂದಳೆಂಬುದೇ ಅವರಿಗೆ ದೊಡ್ಡ ಸಮಸ್ಯೆಯಾಗಿತ್ತು.

ಗುಡಿಸಲಿನೊಳಗೆ ಮತ್ತೆ ಯಾರೂ ಇದ್ದಿಲ್ಲ. ಆ ವನದೇವಿ ಗುಡಿಸಲಿನಲ್ಲಿ ಇನ್ನೊಂದು ಕಡೆಗೆ ಹೋಗಿ ತಿನ್ನಲು ಏನೇನನ್ನೋ ತಂದು ಮುಂದಿಟ್ಟಳು. ತರುಣರಿಬ್ಬರೂ ತಿನ್ನಲು ಮೊದಲು ಮಾಡಿದರು; ಆದರೆ ಪ್ರಮೋದನಿಗೆ ಏನನ್ನೂ ತಿನ್ನುವ ಮನಸ್ಸಿಲ್ಲ. ಇದೀಗ ಅವನು ಹಸಿವೆಯಿಂದ ಗಾಸಿಯಾಗಿದ್ದ. ಆದರೆ ಈಗ ಅವನ ಹಸಿವೆ ಹಿಂಗಿತು. ಅವನು ಘೋರ ವಿಸ್ಮಯದಲ್ಲಿ ಬಿದ್ದ. ಬಗೆ-ಬಗೆಯ ವಿಚಾರಗಳಿಂದ ಅವನ ಹೃದಯವು ಪರಿಪೂರ್ಣವಾಗಿತ್ತು. ಈಗ ಅವನಿಗೆ ಹಸಿವೆ-ನೀರಡಿಕೆಗಳಿಲ್ಲ.

ಇಬ್ಬರೂ ಊಟದ ಶಾಸ್ತ್ರ ಮುಗಿಸಿದರು. ತರುಣಿ ತರ-ತರದ ಪ್ರಶ್ನೋತ್ತರಗಳನ್ನು ಮಾಡಿದಳು. ಅವಳ ತಂದೆಗೆ ಔತಣವು ಬಂದಿತ್ತು. ಆತನು ಎಲ್ಲಿಗೋ ಅಡವಿಯಲ್ಲಿ ಹೋಗಿದ್ದ. ಅವನು ಬರುವವರೆಗೆ ತರುಣಿ ದಾರಿ ನೋಡುವಳು. ಇದೆಲ್ಲ ಸಂಗತಿ ಅವಳ ಉತ್ತರದಲ್ಲಿ ಸಿಕ್ಕಿತು. "ನಿಮ್ಮ ಹಾಸುಗೆ ಸಿದ್ಧವಾಗಿವೆ. ಬೇಕಾದರೆ ಹೋಗಿ ಮಲಗಿರಿ." ತರುಣಿ ಎಂದಳು. ಆಗ ನಿದ್ದೆ ಅವರ ಹತ್ತಿರ ಸುಳಿಯುತ್ತಿದ್ದಿಲ್ಲ; ಆದರೂ ಅವರು ಮುಂದುಗಾಣದೆ ಎದ್ದರು.

ಯಾಮಿನಿ ಅರ್ಧಾಗುತ್ತಲೇ ನಿದ್ರಾದೇವಿಯ ಬಾಹುಪಾಶಕ್ಕೆ ಬಲಿಬಿದ್ದ. ಆದರೆ ಪ್ರಮೋದನ ಮನಸ್ಸಿನೊಳಗೆ ತರ-ತರದ ವಿಚಾರಗಳು ಸುಳಿಯುತ್ತಿದ್ದುವು. ಅವನು ಅರ್ಧಾಗಿಯೇ ಆಲೋಚನೆ ಮಾಡಹತ್ತಿದ— "ಈ ದೇವಿ ಯಾರಿರಬಹುದು? ಅಡವಿಯಲ್ಲಿರಲು ಕಾರಣವೇನು? ಉದ್ಯಾನದ ಕುಸುಮವು ಕಲ್ಲು-ಮುಳ್ಳಿನಿಂದ ತುಂಬಿದ ಕಾನನದಲ್ಲಿಯೆ? ಪೃಥ್ವಿಯಲ್ಲಿ ಅರಸಿದರೂ ದೊರೆಯದ ರತ್ನವು ಈ ಕುಟಿಯಲ್ಲಿಯೆ!" ಇಂಥ ಚಿಂತೆಯಲ್ಲಿಯೇ ಬೆಳಗಾಯಿತು. ಬೆಳಗಿನ ಜಾವದಲ್ಲಿ ಆತನಿಗೆ ಜೋಮು ಬಂದಿತು.

ವನ-ವಾಸಿನೀ ದೇವಿಯ ಹೆಸರು ನೀರಜೆ. ಬಹಳ ರಾತ್ರಿಯ ವರೆಗೆ ಅವಳು ತಂದೆಯನ್ನು ನಿರೀಕ್ಷಿಸಿದಳು; ಆದರೆ ಅವಳ ತಂದೆ ಬರಲಿಲ್ಲ. ಆಗ ಹೋಗಿ ಹಾಸುಗೆಯ ಮೇಲೆ ಅಡ್ಡಾದಳು. ನೀರಜಾ ಒಮ್ಮೆ ಮಲಗುತ್ತಿದ್ದಳು. ಮತ್ತೊಮ್ಮೆ ಎದ್ದು ಕುಳಿತುಕೊಳ್ಳುತ್ತಿದ್ದಳು. ಇನ್ನೊಮ್ಮೆ ಹೊರಗೆ ಬಂದು ಹಾಡುತ್ತಿದ್ದಳು. ಆಗ ಮಧುರ ಸಂಗೀತ ಧ್ವನಿಯೊಂದು ಆಯಿತು. ಅದರಿಂದ ಯಾಮಿನೀನಾಥನ ನಿದ್ದೆ ಹರಿಯಿತು. ಹೊರಗೆ ಬಂದು ನೋಡಿದ. ಇನ್ನೂ ಕತ್ತಲೆ ಹಿಂದಿದ್ದಿಲ್ಲ. ಸ್ವಚ್ಛ ಗಗನದಲ್ಲಿ ಶುಕ್ರನಕ್ಷತ್ರವು ನಗುತ್ತಿತ್ತು. ಸುಗಂಧಿತ ವಾದ ಮುಂಜಾಗಿನ ಗಾಳಿ ಬೀಸುತ್ತಿತ್ತು. ಸಂಗೀತ ಧ್ವನಿಯ ಅಲೆಗಳನ್ನೂ, ಮಧುರಪಾಯುವನ್ನೂ, ಹೂವಿನ ಮಕರಂದವನ್ನೂ ಹರಣ ಮಾಡಿಕೊಂಡು ಮೆಲ್ಲ-ಮೆಲ್ಲಗೆ ಸುಳಿಯುತ್ತಿತ್ತು. ಕಪ್ಪು ಮೋಡಗಳು ಆಗಸದಲ್ಲಿ ತೂಗಾಡು ತ್ತಿದ್ದವು. ಅವರೊಳಗೆ ಮರೆಯಾಗಿದ್ದ ತಾರೆಯಂತೆ ಅವಳು ಕತ್ತಲೆಯೊಳಗೆ ಹಾಡುತ್ತ ತಿರುಗುತ್ತಿದ್ದಳು. ಹತ್ತಿರ ಬಂದು ಯಾಮಿನೀನಾಥನು ನಿಂತ.

“ ದಾರಿಕಾರರೆ, ನಿದ್ದೆಯಾಯಿತೆ ? ” ಕೇಳಿದಳು ನೀರಜಾ.

ತರುಣನು ತುಸು ಹೊತ್ತು ಸುಮ್ಮನಿದ್ದ. ಆ ಮೇಲೆ ನಿಟ್ಟುಸಿರು ಬಿಟ್ಟು “ ಹೂಂ— ” ಎಂದ.

ರಮಣಿ ವಿಚಿತ್ರವಾದುದೊಂದು ನಗೆಯನ್ನು ಬೀರಿ “ ನಿದ್ದೆ ಹತ್ತಲಿಲ್ಲ ವೆಂದು ತೋರುತ್ತದೆ ? ” ಎಂದಳು.

ತರುಣನು ಮತ್ತೆ ಸುಮ್ಮಗಿರುವ. ಮನಸ್ಸಿನೊಳಗೆಯೇ ಕಳವಳಗೊಳ್ಳುತ್ತ “ ನಿದ್ದೆಯೇ ! ಈ ರೂಪರಾಶಿಯನ್ನು ನೋಡಿ ನಿದ್ದೆ ಮಾಡಬಹುದೆ ? ” ಎಂದ.

ವನವಾಸಿನಿಗೆ ಈ ಮಾತಿನ ಅರ್ಥವು ಹೊಳೆಯಲಿಲ್ಲ. ರೂಪರಾಶಿಗೂ, ನಿದ್ದೆಗೂ ಸಂಬಂಧವೇನು ? ಅವಳು ತಿಳಿಯದಾದಳು. ಅದರಿಂದ ಸುಮ್ಮನಾಗಿ ಬಿಟ್ಟಳು. ಆದರೆ ಏಕಾಂತ ಪ್ರಸಂಗವನ್ನು ನೋಡಿ ಯಾಮಿನೀನಾಥನು ಮತ್ತೆ ತೊಡಗಿದ— “ ಸುಂದರಿ, ನಿಮಗೆಲ್ಲವನ್ನೂ ಬಿಂಗಡಿಸಿ ಹೇಳಬೇಕಾಗು ವುದೆ ? ನನ್ನ ಮನಸ್ಸು ಈಗ ನನ್ನ ಕೈಯೊಳಗಿಲ್ಲ. ಈಗ........ ” ಅವನ ಮಾತಿನ್ನೂ ಮುಗಿದಿದ್ದಿಲ್ಲ. “ ದಾರಿಕಾರರೆ, ಬೆಳಗಾಯಿತು. ನಿಮ್ಮ ಗೆಳೆಯರೂ ಎದ್ದಿರಬಹುದು, ನಡೆಯಿರಿ ನೋಡುವಾ. ” ಎಂದಳು ನೀರಜಾ.

ಇಷ್ಟು ಹೇಳಿ ನೀರಜಾ ಮನೆಯ ಕಡೆಗೆ ಅಡಿಯಿಟ್ಟಳು. ಯಾಮಿನೀ ನಾಥನು ಅವಳ ಕಡೆಗೇ ನೋಡುತ್ತ ಕಲ್ಲಿನಲ್ಲಿ ಕಟೆದ ಗೊಂಬೆಯಂತೆ ನಿಂತು ಬಿಟ್ಟ. ಹುಡುಗಿ ಮನೆಗೆ ಬಂದು ಮಲಗಿದ್ದ ಪ್ರಮೋದನ ತಲೆದಿಂಬಿನ ಹತ್ತಿರ ನಿಂತಳು. ಅವಳು ನೋಡಿದಳು, ಪ್ರಮೋದನು ನಗುತ್ತಿದ್ದಾನೆ, ಗಾಢ ನಿದ್ದೆ ಯಲ್ಲಿದ್ದಾನೆ; ಆದರೂ ಆವೇಶದಲ್ಲಿದ್ದಾನೆ. ಸುಖ-ಸ್ವಪ್ನವನ್ನು ಕಾಣುತ್ತಿರ ಬಹುದೆಂದು ವನದೇವಿ ಅರ್ಥ ಮಾಡಿಕೊಂಡಳು. ನಿಜವಾಗಿಯೂ ಅವನು ಕನಸು ನೋಡುತ್ತಿದ್ದ. ಅವನಿಗೊಂದು ಕನಸು ಬಿದ್ದಿತ್ತು. ಕನಸಿನಲ್ಲಿ ಒಬ್ಬ ಚೆಲುವೆಯಾದ ಹೆಂಗಸು ಆಗಸದಿಂದಿಳಿದು ಬಂದು ಅವನ ತಲೆದಿಂಬಿನ ಹತ್ತಿರ ನಿಂತಿದ್ದಾಳೆ. ಆಹ್ಲಾದದಿಂದ ಅವಳ ಕೈಯನ್ನು ಹಿಡಿಯಬೇಕೆಂದು ಕೈಯನ್ನು ಚಾಚಿದ. "ಈಗಲೇ ಬೇಡ." ರಮಣಿ ಎಂದಳು. ಇಷ್ಟು ಆಡಿ ಆ ಮೂರ್ತಿ ಅಂತರ್ಧಾನವಾಯಿತು. ಇದೆಲ್ಲ ಸಂಗತಿ ನಡೆಯಿತು. ಪ್ರಮೋದನ ನಿದ್ದೆ ಹರಿಯಿತು, ಕಣ್ಣು ತೆರೆದ. ವಾಸ್ತವ ಜಗತ್ತಿನಲ್ಲಿಯೂ ಅವನ ತಲೆದಿಂಬಿನ ಹತ್ತಿರ ಒಬ್ಬ ದೇವಿ ನಿಂತಿರುವುದನ್ನು ನೋಡಿದ. ಪ್ರಮೋದನಿಗೆ ಸೋಜಿಗ ವಾಯಿತು. ಆ ದೇವಿಯನ್ನು ನೋಡಹತ್ತಿದ. ಇದೇ ಹೊತ್ತಿಗೆ ಯಾಮಿನೀ ನಾಥನೂ ಗುಡಿಸಲಿನೊಳಗೆ ಕಾಲಿಟ್ಟ. ನೀರಜಾ ಎವೆಯಿಕ್ಕದೆ ಪ್ರಮೋದನನ್ನು ನೋಡಹತ್ತಿದ್ದಳು. ಇದು ಅವನ ಕಣ್ಣಿಗೆ ಬಿದ್ದಿತು. ಆ ಮನಮೋಹಿನಿಯ ಸ್ನೇಹಮಯ ಮಧುರಮಯವಾದ ದೃಷ್ಟಿಯನ್ನು ಅವನು ಸುಲಭವಾಗಿ ಪಡೆಯ ಬಹುದೆ? ಯಾಮಿನೀನಾಥನ ಮನಸ್ಸು ಜೀಗುದಿಗೊಳ್ಳಹತ್ತಿತು. ಪ್ರಮೋದನು ಯಾಮಿನಿಯನ್ನು ಕಾಣುತ್ತಲೇ ಸೋಜಿಗಪಟ್ಟುಕೊಂಡು ಎದ್ದು ಕುಳಿತ. "ಬೆಳಗಾಯಿತು." ನೀರಜಾ ಎಂದಳು.

ಇದನ್ನು ಕೇಳಿ ಪ್ರಮೋದನು ಹೊರಗೆ ಬಂದ. "ಈಗ ನಿಚ್ಚಳವಾಗಿದೆ. ನೀವು ಅನಾಯಾಸವಾಗಿ ದಾರಿಯನ್ನು ಕಂಡುಕೊಳ್ಳಬಹುದು?" ನೀರಜಾ ಮತ್ತೆ ಹೇಳಿದಳು.

ಯಾಮಿನೀನಾಥನು ಒಂದು ಮಾತೆ ಎರಡು ಮಾಡಲಿಲ್ಲ. "ಹೂಂ, ಇನ್ನು ನಾವು ಹೋಗುವೆವು. ನಿನ್ನೆ ನೀವು ಸಹಾಯ ಮಾಡದಿದ್ದರೆ, ನಾವು ಬಹಳ ದಿವಾಳಿಯಾಗುತ್ತಿದ್ದೆವು. ನಿನ್ನೆ ನಿಮಗೆ ಬಹಳ ಕಷ್ಟ ಕೊಟ್ಟೆವು. ನಿಮ್ಮ ಉಪಕಾರವನ್ನು ಮರೆಯಬಹುದೆ?" ಉತ್ತರ ಕೊಡುತ್ತ ಪ್ರಮೋದನೆಂದ.

" ಅತಿಥಿಸೇವೆಯಲ್ಲಿ ಕಷ್ಟವೆ? ಅತಿಥಿಸೇವೆಯಲ್ಲಿ ಆನಂದ ಸಿಗುತ್ತದೆ. ಅತಿಥಿಸೇವೆಯೇ ಪಿತನ ಸೇವೆ." ನಾಚಿಕೆಯನ್ನು ತೋರಿಸುತ್ತ ತರುಣಿ ಹೇಳಿದಳು.

ಪ್ರಮೋದ " ನಿಮ್ಮ ತಂದೆ ನಿನ್ನೆ ಬರಲಿಲ್ಲವೇನೊ? ಒಬ್ಬರನ್ನೇ ಬಿಟ್ಟು ಏಕೆ ಹೋಗುತ್ತಾನೆ? "

ನೀರಜಾ— " ಇಲ್ಲ, ನನ್ನನ್ನು ಬಿಟ್ಟು ಒಂದೆರಡು ದಿನಕ್ಕಿಂತ ಹೆಚ್ಚು ಹೋಗುವುದಿಲ್ಲ. ಒಮ್ಮೊಮ್ಮೆ ಮಾತ್ರ ಮೂರುನಾಲ್ಕು ದಿನ ಹೋಗುತ್ತಾನೆ. "

ಪ್ರಮೋದ— " ನಿಮಗೆ ಹೆದರಿಕೆಯಾಗುವುದಿಲ್ಲವೆ? "

ನೀರಜಾ— " ಹೆದರಿಕೆಯೇತರದು? ಮೊದಲನೆಯ ಮಾತು, ತಂದೆ ಬಹಳ ದಿನ ಬಿಟ್ಟು ಹೊರಗೆ ಹೋಗುವುದಿಲ್ಲ. ಇದಲ್ಲದೆ ನನಗೆ ಮತ್ತೆ ಇಲ್ಲಿ ನನ್ನ ಸಂಗಡಿಗರೂ ಇದ್ದಾರೆ. ಒಬ್ಬಿಬ್ಬರು ಕಟ್ಟಿಗೆ ಮಾರುವವರಿದ್ದೇ ಇರುತ್ತಾರೆ. ಅವರ ಹೆಣ್ಣುಮಕ್ಕಳ ಕೂಡ ನನಗೆ ಹೊತ್ತು ಹೋಗುತ್ತದೆ. ತಂದೆ ಹೊರಗೆ ಹೋಗುವಾಗ ಮನೆಯೊಳಗೆ ಯಾರನ್ನಾದರೂ ಇಟ್ಟು ಹೋಗುತ್ತಾನೆ. "

ಪ್ರಮೋದ— " ನಿನ್ನೆಯಂತೂ ಯಾರೂ ಬಂದಿದ್ದಿಲ್ಲ. "

ನೀರಜಾ— " ನಿನ್ನೆ ರಾತ್ರಿ ಅವರ ಮನೆಯೊಳಗೂ ಏನೋ ಸಮಾರಾಧನೆಯಿತ್ತು. ಅದಕ್ಕಾಗಿ ಯಾರೂ ಬರಲಿಲ್ಲ. ಇಂದು ಬರುವರು. ಓಹೊ! ಅದೋ ನೋಡಿರಿ, ಲಕ್ಷ್ಮಿ ಬರುತ್ತಿದ್ದಾಳೆ. "

ತರುಣರಿಬ್ಬರೂ ನೋಡಿದರು. ಹದಿನಾರು ವರುಷದ ಒಬ್ಬ ತರುಣಿ ಬರುತ್ತಿದ್ದಳು. ಮೈ ಬಣ್ಣ ಕಪ್ಪು. " ಒಂದು ಮಾತನ್ನು ಕೇಳಲೆ? ನಾವು ನಿನ್ನೆ ಇಲ್ಲಿದ್ದೆವಲ್ಲ, ಈ ಸಂಗತಿ ನಿಮ್ಮ ತಂದೆಗೆ ತಿಳಿದರೆ? " ಪ್ರಮೋದನು ನೀರಜಾನ ಕಡೆಗೆ ತಿರುಗಿ ಎಂದ.

ನೀರಜಾ— " ಅವನೇನೂ ಎನ್ನುವುದಿಲ್ಲ. ನಿರಾಶ್ರಿತರಿಗೆ ಆಶ್ರಯ ಕೊಟ್ಟೆ. ಇದಕ್ಕೆ ಅವನೇನೆನ್ನುವನು? ಹಾದಿ ತಪ್ಪಿದ ಎಷ್ಟೋ ಮಂದಿಗೆ ನಾನು ಇಲ್ಲಿ ಆಶ್ರಯ ಕೊಟ್ಟಿದ್ದೇನೆ. ಆದರೆ ಅವನು ಎಂದೂ ಏನೂ ಎಂದಿಲ್ಲ. "

"ಒಳ್ಳೇದು, ಹಾಗಾದರೆ ಇನ್ನು ನಾವು ಹೋಗುತ್ತೇವೆ. ಉಪಕಾರವನ್ನೆಂದಿಗೂ ಮರೆಯಲಾರೆವು. ನಮ್ಮಂಥವರಿಗೆ ಆಶ್ರಯ ಕೊಡಬೇಕು. ಆಗ ನಮ್ಮನ್ನೂ ನೆನೆಸಬೇಕು." ನೀರಜೆಯ ಸರಳ ಸ್ವಭಾವಕ್ಕೆ ಪ್ರಮೋದನು ನಗುತ್ತ ಎಂದ. ತರುಣಿ ತಿರುಗಿ ಉತ್ತರವನ್ನು ಕೊಡಲಿಲ್ಲ. ಸ್ಥಿರನೇತ್ರಗಳಿಂದ ಪ್ರಮೋದನನ್ನು ನೋಡುತ್ತಲೇ ಇದ್ದಳು.

"ನಡೆ, ಇನ್ನು ಹೋಗೋಣ." ಯಾಮಿನೀನಾಥನಿಗೆ ಪ್ರಮೋದನು ಹೇಳಿದ.

"ಒಳ್ಳೇದು, ನಡೆ ಬರುತ್ತೇನೆ." ಯಾಮಿನಿ ನೀರಜೆಯ ಕಡೆಗೆ ನೋಡಿ ಎಂದ. ಮುಂದೆ ಆತನ ಬಾಯಿಂದ ಮಾತುಗಳೇ ಹೊರಡಲಿಲ್ಲ. ತರುಣಿಯೂ ಇದಕ್ಕೆ ಉತ್ತರ ಕೊಡದೇ ಹೋದಳು. ಆವಳು ಯಾವ ಭಾವನಾಲೋಕದಲ್ಲಿ ವಿಹರಿಸುತ್ತಿದ್ದಳೋ ಏನೊ.

## ಅಸಂಗನ ಮಂಗನಾಟ

ತರುಣರಿಬ್ಬರೂ ತಿರುಗಿ ಮನೆಗೆ ಬಂದರು; ಆದರೆ ದಿನದಂತೆ ಒಬ್ಬರಿಗೊಬ್ಬರು ಮಾತನಾಡಲಿಲ್ಲ. ಇಬ್ಬರೂ ಸಪ್ಪಳವಿಲ್ಲದೆಯೇ ದಿನಗಳೆದರು. ಇದು ಸೋಜಿಗದ ಸಂಗತಿ. ಮುನ್ನಾ ದಿನದ ಸಂಗತಿಯಿಂದ ಇಬ್ಬರೂ ಮೌನವಾಗಿರಬಾರದಾಗಿತ್ತು; ಹೀಗಿರುವಾಗ ಇಂಥ ನಿಸ್ತಬ್ಧತೆ, ಇಂಥ ಚಿಂತೆಯು! ಯಾರಾದರೂ ಅವರಿಬ್ಬರನ್ನು ಲಕ್ಷ್ಯಗೊಟ್ಟು ನೋಡಿದ್ದರೆ, ಅವರು ಖಂಡಿತವಾಗಿಯೂ ಇಬ್ಬರ ಮುಖದ ಭಾವಗಳೂ ಬೇರೆ ಬೇರೆ ಇವೆಯೆಂದು ಹೇಳುತ್ತಿದ್ದರು. ಪ್ರಮೋದನು ಗಂಭೀರನೂ, ಪ್ರಶಾಂತನೂ ಇದ್ದಾನೆ. ಈಗ ಅವನಿಗೂ ಜಗತ್ತಿಗೂ ಸಂಬಂಧವೇ ಇಲ್ಲ; ದೃಷ್ಟಿ ಶೂನ್ಯವಾಗಿದೆ. ಮೋರೆಯ ಮೇಲೆ ಉಲ್ಲಾಸವು ಹೆಸರಿಗೂ ಇಲ್ಲ. ಯಾಮಿನೀನಾಥನ ನಿಟ್ಟುಸಿರಿನಲ್ಲಿ ಬೆಂಕಿ ಬೆರೆತಿತ್ತು. ಆಗಾಗ ಆತನ ಅಧರಗಳು ಏಕೋ ಆನಂದದಿಂದ ಕಂಪಿಸುತ್ತಿದ್ದುವು. ಒಮ್ಮೊಮ್ಮೆ ಹುಬ್ಬು ಮುದುಡಿಕೊಳ್ಳುತ್ತಿದ್ದುವು. ಇಬ್ಬರ ಚಿತ್ತದಲ್ಲಿಯೂ ಚಿಂತಾಸ್ರೋತವು ಹರಿಯುತ್ತಿತ್ತು; ಆದರೆ ಇಬ್ಬರೂ ಪರಸ್ಪರ ತಮ್ಮ ಮನೋಭಾವಗಳನ್ನು ಅರಿಯದೆ ಹೋದರು. ತಮ್ಮ ಮನೋಭಾವಗಳನ್ನು ಹೊರಗೆಡಹಲು ಉದಾಸೀನರಾಗಿದ್ದರು, ಇಚ್ಛೆಯೂ ಇದ್ದಿಲ್ಲ.

ಇದೇ ಪ್ರಕಾರ ಇಡಿಯ ದಿನವನ್ನು ಕಳೆದರು. ಒಂದೆರಡು ಸಾಮಾನ್ಯ ಸಣ್ಣ-ಪುಟ್ಟ ಮಾತಲ್ಲದೆ, ಅವರು ಮತ್ತೆ ಏನನ್ನೂ ಮಾತನಾಡಲಿಲ್ಲ. ಇಬ್ಬರಲ್ಲಿ ಒಬ್ಬರೂ ಹಿಂದಿನ ದಿನದ ಸಂಗತಿಯನ್ನು ತೆಗೆಯಲಿಲ್ಲ. ಯಾಮಿನೀನಾಥನಿಗೆ ಒಂದೆರಡು ಸಾರೆ ಆ ವಿಷಯವನ್ನು ತೆಗೆಯಬೇಕೆನ್ನಿಸಿತು — ಸುರುವೂ ಮಾಡಿದ; ಆದರೆ ಪ್ರಮೋದ ನಿರುತ್ತರನಾಗಿಯೇ ಇದ್ದ. ಅದರಿಂದ ಅವನು ಸುಮ್ಮನಾದ.

ಆ ದಿನವನ್ನೇನೋ ಹಾಗೂ ಹೀಗೂ ಕಳೆದರು. ಮರುದಿನ ಕಾನಪುರಕ್ಕೆ ಹೋಗಬೇಕಾಗಿತ್ತು: ಆದರೆ ಏಕೋ ಅವರು ಆ ದಿವಸ ಹೋಗುವ ಮಾತನ್ನೇ ಎತ್ತಲಿಲ್ಲ. ಕಾರ್ಯಕ್ರಮವು ರದ್ದಾಯಿತು. ಮೊದಲಿನಂತೆ ಅವರು ಒಬ್ಬರಿಗೊಬ್ಬರು ಮಾತನಾಡಲಿಲ್ಲ. ಪ್ರಮೋದನ ಮನಸ್ಸು ವ್ಯಾಕುಲವಾಗಿತ್ತು. ಅವನು ಸಂಜೆಯ ಮುಂದೆ ಮನಸ್ಸಿನ ಉದ್ವೇಗವನ್ನು ಹೋಗಲಾಡಿಸಿಕೊಳ್ಳಲು ನದಿಯ ದಂಡೆಗೆ ಹೋದ. ದಂಡೆಯ ಮೇಲೆ ನಿಂತು ನೋಡಿದ. ಆಚೆ ಕಡೆ ದಂಡೆಗೆ ಅದೇ ಅಡವಿ ಕಣ್ಣಿಗೆ ಬಿದ್ದಿತು—ಅಲ್ಲಿಯೇ ಆ ವನದೇವಿ ಇರುವುದು ಅಡವಿಯನ್ನು ನೋಡಿದಾಕ್ಷಣವೇ ಅವನ ಮನಸ್ಸು ಕದಡಿತು. ಏನೇನನ್ನೋ ಆಲೋಚನೆ ಮಾಡುತ್ತ ಪೂಲನ್ನು ದಾಟಿದ. ತಾನು ಮೊದಲು ಬಂದಿದ್ದ ಅಡವಿಯ ಹಾದಿಯನ್ನು ಹಿಡಿದ. ಆಯಾಸವಿಲ್ಲದೆಯೇ ಕಾಲು ಕರೆದೊಯ್ಯುತ್ತಿದ್ದುವು. ಮುಂದೆ ಭಯಂಕರವಾದ ಅಡವಿ ಕಂಡಾಗ ಪ್ರಮೋದನಿಗೆ ಮೈಮೇಲೆ ಎಚ್ಚರಿಕೆ ಬಂದಿತು; ಆದರೆ ಅವನ ಕಾಲು ಮರಳಲು ಒಪ್ಪಲಿಲ್ಲ. ಯಾವ ಆಸೆಗೆ ಒಳಪಟ್ಟೋ ಏನೊ ಅವನು ತಿರುಗಹತ್ತಿದ ವನದಲ್ಲಿ. ಸಂಜೆಯಾದರೆ ಮತ್ತೆ ಹಾದಿ ಸಿಗುವುದಿಲ್ಲವೆಂಬ ಮಾತೇ ಅವನ ನೆನಪಿನಲ್ಲುಳಿಯಲಿಲ್ಲ. ಯಾರನ್ನೋ ಹುಡುಕಲು ಅವನು ಅತ್ತ ಇತ್ತ ತಿರುಗಹತ್ತಿದ. ಆದರೆ ಅವನಿಗೆ ಬೇಕಾದ ವಸ್ತುವೇ ಸಿಗಲಿಲ್ಲ. ಹಿಂದೆ ಒಂದು ಸಾರೆ ರಾತ್ರಿ ಗುಡಿಸಲಿಗೆ ಹೋದ ದಾರಿಯಿಂದಲೇ ಹೋದ. ದೂರದಿಂದಲೇ ಗುಡಿಸಲು ಕಾಣಿಸಿತು. ಮಂತ್ರಮುಗ್ಧನಂತೆ ಅದನ್ನೇ ನೋಡಹತ್ತಿದ; ಆದರೆ ಹತ್ತಿರ ಹೋಗಲು ಎದೆಯಾಗಲಿಲ್ಲ. ನಾಚಿಕೆ, ಸಂಕೋಚಗಳು ಹೆಚ್ಚಿದುವು. ಕಾಲು ಹಿಂದೆ ಸೆಳೆಯುತ್ತಿದ್ದುವು. ಹೊತ್ತು ಮುಳುಗಹತ್ತಿತು. ಆದರೆ ಪ್ರಮೋದನಿಗೆ ಅದರ ಅರಿವೇ ಇಲ್ಲ. ವನದೇವಿ ಅದರೊಳಗಿಂದ ಹೊರಬಿದ್ದು ಎಲ್ಲಿಗಾದರೂ ಹೋದರೇನು ಗತಿ ? ಆದುದರಿಂದ ಅವನು ಗುಡಿಸಲನ್ನೇ ನಿಟ್ಟಿಸುತ್ತಿದ್ದ. ದೃಷ್ಟಿಯನ್ನು

ಅವನು ಅಲ್ಲಿಂದ ಹೊರಳಿಸಿದರೆ ಅವನಿಗೆ ದರ್ಶನ ಲಾಭವು ಸಿಗಲಾರದು. ಕತ್ತಲೆಯು ಮೆಲ್ಲಮೆಲ್ಲಗೆ ತನ್ನ ಅಧಿಕಾರವನ್ನು ಆಕಾಶದ ಮೇಲೆ ತೋರಿಸಹತ್ತಿತು. ನೋಡನೋಡುತ್ತಿರುವಾಗ ಗುಡಿಸಲು ಅವನ ಮುಂದೆ ಇದ್ದುದು ಅಂತರ್ಧಾನವಾಯಿತು. ಪಾಪ! ಪ್ರಮೋದನು ಹತಾಶನಾಗಿ ನಿಂತುಬಿಟ್ಟ.

ಸ್ವಲ್ಪ ಸಮಯ ಕಳೆದಿರಬಹುದು. ಹಿಂದಿನ ದಿನದಂತೆ ಇಂದು ಕೂಡ ಆಗಸದಲ್ಲಿ ಸಂಗೀತದ ಮರುದನಿಯೇಳತೊಡಗಿತು. ಪ್ರಮೋದನ ಹೃದಯ ತಂತ್ರಿಯೂ ನಾದ ಮಾಡಿತು. ಪ್ರಮೋದನು ನೋಡಿದ. ಅದೇ ವನದೇವಿ ಅವನ ಮುಂದೆ ಬಂದು ನಿಂತಿದ್ದಾಳೆ. ಆನಂದದಿಂದ ಪ್ರಮೋದನು ಉಬ್ಬಿದ. ಅವನ ಬಾಯಿಂದ ಶಬ್ದಗಳೇ ಹೊರಬೀಳಲಿಲ್ಲ. ಅವನು ಕಲ್ಲಿನ ಮೂರ್ತಿಯಂತೆ ಸುಮ್ಮನೇ ನಿಂತುಬಿಟ್ಟ. ತರುಣಿ ಒಂದು ಮರದಡಿಯಲ್ಲಿ ಕುಳಿತುಕೊಳ್ಳುವ ಇಚ್ಛೆಯಿಂದ ಬಂದಳು; ಆದರೆ ಇಂದೂ ಪ್ರಮೋದನು ಅಲ್ಲಿರುವುದನ್ನು ನೋಡಿ ಅವಳಿಗೆ ಆಶ್ಚರ್ಯವೆನಿಸಿತು. "ಎಲಾ ಇದೇನು, ಮತ್ತೆ ನೀವು ಇಲ್ಲಿಗೆ ಹೇಗೆ ಬಂದಿರಿ?" ಎಂದಳು.

ಪ್ರಮೋದನು ಉತ್ತರ ಹುಡುಕಿದ, ಸಿಗಲಿಲ್ಲ. ತನ್ನ ಈ ಅವಿಚಾರತನಕ್ಕಾಗಿ ತಾನೇ ಹಳಹಳಿಸಹತ್ತಿದ. ಅವನು ಸುಮ್ಮನಾದುದನ್ನು ನೋಡಿ ನೀರಜಾ ಮತ್ತೆ ಕೇಳಿದಳು– "ನಿನ್ನೆಯಂತೆ ಮತ್ತೆ ಇಂದು ಹಾದಿ ತಪ್ಪಿದಿರೇನು? ಗುಡಿಸಲು ಹತ್ತಿರದಲ್ಲಿಯೇ ಇದೆ, ನಡೆಯಿರಿ, ವಿಶ್ರಮಿಸಿರಿ."

"ಬೇಡ, ನಾನು ಈ ದಿನ ದಣಿದಿಲ್ಲ. ಅಡ್ಡಾಡಲು ಬಂದಿದ್ದೆ. ಇನ್ನು ಮನೆಗೆ ಹೋಗುತ್ತೇನೆ." ಪ್ರಮೋದನು ನಾಚಿ ಹೇಳಿದ.

ನೀರಜಾ– "ಆದರೂ ಏನಾಯಿತು? ಗುಡಿಸಲಿಗೆ ನಡೆಯಿರಿ. ಅಪ್ಪ ಇದ್ದಾನೆ ಇಂದು. ಭೆಟ್ಟಿ ಮಾಡಿಸುತ್ತೇನೆ."

ಈ ಮಾತನ್ನು ಕೇಳಿ ಪ್ರಮೋದನ ಮನಸ್ಸು ಹೇಗೆ ಹೇಗೋ ಆಯಿತು.

"ಬೇಡ, ನಾನು ಈಗ ಗುಡಿಸಲಿಗೆ ಬರುವುದಿಲ್ಲ. ಹೋಗುತ್ತೇನೆ. ನೀವು ಹೋಗಿರಿ." ಪ್ರಮೋದನು ಹೇಳಿದ.

ನೀರಜಾ– "ಏಕೆ?"

ಪ್ರಮೋದ– "ಕತ್ತಲೆಯಾಗಿದೆ."

ನೀರಜಾ– "ಕತ್ತಲೆಯಾದರೇನಾಯಿತು? ಸಣ್ಣವಳಿದ್ದಾಗಿನಿಂದ ಇದೇ ಅಡವಿಯೊಳಗೆ ಇರುತ್ತೇನೆ. ನನಗೆ ಇಲ್ಲಿ ತುಸುವಾದರೂ ಹೆದರಿಕೆಯಾಗುವು

ದಿಲ್ಲ. ಅಮಾವಾಸ್ಯೆಯ ಕಾಳ ರಾತ್ರಿಯಲ್ಲಿಯೂ ನಾನು ಒಬ್ಬಳೇ ಇಲ್ಲಿ ಆಡ್ತಾಡುತ್ತೇನೆ. ಅಪ್ಪ ವಿಶೇಷವಾಗಿ ಶಾಸ್ತ್ರಾವಲೋಕನದಲ್ಲಿರುತ್ತಾನೆ. ನಾನು ನನ್ನ ಮನಸ್ಸಿಗೆ ಬಂದಂತೆ ಆಡ್ತಾಡುತ್ತೇನೆ. ಒಮ್ಮೊಮ್ಮೆ ಹಾಡುತ್ತ ನನ್ನ ಮನಸ್ಸನ್ನು ಸಂತೋಷಗೊಳಿಸಿಕೊಳ್ಳುತ್ತೇನೆ. ಅಪ್ಪ ಕರೆದಾಗ ನಾನು ಆತನ ಹತ್ತಿರ ಹೋಗುತ್ತೇನೆ. ನನಗೇತರ ಹೆದರಿಕೆ? ಬನ್ನಿರಿ, ನಾನು ನನ್ನ ಕೈಯಿಂದಲೇ ಹಚ್ಚಿದ ಎಲ್ಲ ಗಿಡ-ಬಳ್ಳಿಗಳನ್ನು ತೋರಿಸುವೆ. ''

ಪ್ರಮೋದ— '' ಇಷ್ಟು ಹೊತ್ತಿಗೆ ನಿಮ್ಮ ತಂದೆ ಕರೆದರೆ ? ''

ನೀರಜಾ— '' ಕರೆದರೆ ಹೋಗುವೆ. ''

ಪ್ರಮೋದ— '' ಇಷ್ಟು ದೂರವಿದೆ, ಹೇಗೆ ಕೇಳುವುದು ? ''

ನೀರಜಾ— '' ನನಗೆಲ್ಲ ಕೇಳಿಸುವುದು. ನಡೆಯಿರಿ, ನೋಡಿರಿ, ಈ ಗೂಡಿನೊಳಗೆ ಎಂಥ ಸುಂದರವಾದ ಬಳ್ಳಿಗಳ ಹಾಸುಗೆಯನ್ನು ಹಾಸಿ, ನಾನು ಕೋಗಿಲೆಯನ್ನು ಮಲಗಿಸಿದ್ದೇನೆ. ''

ಪ್ರಮೋದ— " ನಿಮಗೆ ಕೋಗಿಲೆಯ ಮೇಲೆ ಇಷ್ಟು ಪ್ರೀತಿಯೆ ? "

ನೀರಜಾ— '' ಹೂಂ— ಇಂದೇ ಗಿಡದ ಮೇಲಿಂದ ಬಿದ್ದಿತ್ತು. ಅದ ಕ್ಕಾಗಿಯೇ ಇಷ್ಟು ಜತನದಿಂದ ಕಾಯಬೇಕಾಗಿದೆ ''

ಪ್ರಮೋದ— '' ನಡೆಯಿರಿ: ನಿಮ್ಮ ತಂದೆ ಕರೆದದ್ದು ಕೇಳಿಸದೆ ಇದ್ದರೆ ಹೇಗೆ ಎಂಬುದೊಂದೇ ಭಯ ನನಗೆ. ''

ಪ್ರಮೋದ ನೀರಜಾನ ಕೂಡ ಹೊರಟ. ಅವಳು ಪ್ರಶಾಂತವಾದ ಹಾದಿಯಲ್ಲಿ ಸ್ವಚ್ಛಂದವಾಗಿ ಹಾಡುತ್ತ ಹೊರಟಳು

ಈ ಪರಿಯ ಸೊಬಗಾವ ದೇವರಲಿ ಕಾಣೆ ।
ಗೋಪೀಜನ ಪ್ರಿಯ ಗೋಪಾಲಗಲ್ಲದೆ ॥ ಪಲ್ಲ ॥

ಧೊರೆಯತನದಲಿ ನೋಡೆ ಧರಣಿ ದೇವಿಗೆ ರಮಣ ।
ಸಿರಿಯತನದಲಿ ನೋಡೆ ಶ್ರೀಕಾಂತನು ॥
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ ।
ಗುರುವುತನದಲಿ ನೋಡೆ ಜಗದಾದಿಗುರುವು ॥ ೧ ॥

ಪಾವನತ್ವದಿ ನೋಡೆ ಅಮರ ಗಂಗಾಜನಕ ।
ದೇವತ್ವದಲಿ ನೋಡೆ ದಿವಿಜರೊಡೆಯ ॥
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ ।
ಆವ ಧೈರ್ಯದಿ ನೋಡೆ ಅಸುರಾಂತಕಾ ॥ ೨ ॥

ಪ್ರಮೋದನ ಮನಸ್ಸು ಹರುಷದಿಂದ ವಿಹ್ವಲವಾಯಿತು. ಶರೀರವು ಕಂಪಿಸಹತ್ತಿತು. ಮೈಮೇಲೆ ರೋಮಾಂಚಗಳೆದ್ದುವು. 'ಈ ಅಡವಿಯೊಂದೇ ಇಡಿಯ ಸೃಷ್ಟಿಯೇಕಾಗಲಿಲ್ಲ? ನಮ್ಮಿಬ್ಬರನ್ನುಳಿದು ಉಳಿದ ಜೀವ-ಜಂತು ಗಳನ್ನು ದೇವರು ಏಕೆ ನಿರ್ಮಿಸಿದ?' ಮುಂತಾಗಿ ಮನದಲ್ಲಿ ಆಲೋಚಿಸ ಹತ್ತಿದ. ಅಷ್ಟರಲ್ಲಿ ಹಿಂದೆ ಯಾರೋ ಬರುವ ಸದ್ದಾಯಿತು. ಅವನ ಧ್ಯಾನವು ಭಂಗವಾಯಿತು. ಹೊರಳಿ ನೋಡಿದ-ಒಬ್ಬ ಸನ್ಯಾಸಿ ಬರುತ್ತಿದ್ದ. ನೀರಜಾನ ಹತ್ತಿರ ಅವನು ಬಂದು ಗಟ್ಟಿಯಾಗಿ "ನಾನು ಎಷ್ಟು ಒದರಿದೆ, ನಿನಗೊಂದೂ ಕೇಳಿಸಲಿಲ್ಲವೆ? ಊಟದ ಹೊತ್ತಾಗಿದೆ, ನಡೆ ಮನೆಗೆ." ಎಂದು ಹೇಳಿದ. ಪ್ರಮೋದನಿಗೆ ಬಹಳ ನಾಚಿಕೆಯೆನಿಸಿತು. ಕಟ್ಟಿಗೆಯಂತಾದ. ಚಿವುಟಿದರೂ ಮೋರೆಯ ಮೇಲೆ ಒಂದು ಹನಿ ನೆತ್ತರವು ಬರುವಂತಿದ್ದಿಲ್ಲ. ನೀರಜೆಯೂ ಕಕ್ಕಾಬಿಕ್ಕಿಯಾದಳು.

ನೀರಜೆ ವನಬಾಲೆ. ಆದರೂ ಅವಳು ಸಚೇತಳಾಗಲು ಸ್ವಲ್ಪ ವಿಲಂಬ ವಾಯಿತು. ಸರಳತನದಿಂದ ಅವಳು ಸನ್ಯಾಸಿಗೆ "ಅಪ್ಪ! ಏಕೋ ಇಂದು ನಿನ್ನ ದನಿಯೇ ಕೇಳಲಿಲ್ಲ. ಬಹಳ ಒದರಿದೆಯೇನು?" ಎಂದಳು.

"ಇಲ್ಲ ಮಗು, ಬಹಳ ಹೊತ್ತೇನೂ ಕರೆಯಲಿಲ್ಲ. ಈ ಹುಡುಗನು ಯಾರು?" ಮಗಳು ಗಾಬರಿಯಾದುದನ್ನು ನೋಡಿ ಸನ್ಯಾಸಿ ಮಾತನಾಡಿದ.

"ನಿನ್ನೆ ಇಬ್ಬರು ಹಾದಿ ತಪ್ಪಿ ಬಂದಿದ್ದರೆಂದು ನಿನಗೆ ಹೇಳಿದೆನಲ್ಲ, ಅವರಲ್ಲಿ ಇವರು ಒಬ್ಬರು. ನಾನು ಇವರನ್ನು ನಿನಗೆ ಭೆಟ್ಟಿ ಮಾಡಿಸಲು ಕರೆದುಕೊಂಡು ಬರುವವಳಿದ್ದೆ." ನೀರಜಾ ಎಂದಳು.

"ಮಹಾಶಯರೆ, ಈ ವನದೇವಿ ಅಂದು ನಮಗೆ ನೆರವಾಗದೇ ಹೋಗಿದ್ದರೆ ನಾವು ಬಹಳ ಅನರ್ಥಕ್ಕೆ ಗುರಿಯಾಗುತ್ತಿದ್ದೆವು. ಇಡಿಯ ರಾತ್ರಿಯನ್ನೇ ಅಡವಿ ಅಡವಿ ಅಲೆದು ಕಳೆಯುತ್ತಿದ್ದೆವು. ನಾವು ಇವರಿಗೆ ವಿಶೇಷ ಋಣಿ ಯಾಗಿದ್ದೇವೆ." ಪ್ರಮೋದನೆಂದ.

" ನೀರಜಾ ಒಬ್ಬ ಸನ್ಯಾಸಿಯ ಮಗಳು. ಅತಿಥಿಸೇವೆಯೇ ಸನ್ಯಾಸಿಗಳ ಕೆಲಸ. ಅವಳು ತನ್ನ ಕರ್ತವ್ಯವನ್ನು ಮಾತ್ರ ಕೊನೆಗಾಣಿಸಿದ್ದಾಳೆ, ಬೇರೆಯೇನೂ ಇಲ್ಲ. ಇದರಲ್ಲಿ ಋಣಿಯಾಗುವ ಪ್ರಶ್ನೆಯೇ ಇಲ್ಲ! ಇರಲಿ, ಇಂದೂ ನೀವು ಬೇಟೆಯಾಡಲು ಬಂದಿದ್ದಿರೇನು ? " ಸನ್ಯಾಸಿ ಮಾತನಾಡಿದ.

" ಇಲ್ಲ. ಇಂದು ಆಡ್ಡಾಡಲು ಬಂದಿದ್ದೆ. " ಪ್ರಮೋದನು ನಾಚಿಕೊಂಡು ಮೆಲ್ಲಗೆ ಹೇಳಿದ.

ಸನ್ಯಾಸಿ—" ರಾತ್ರಿಯಾಗಿದೆ ನಡೆಯಿರಿ, ಗುಡಿಸಲಿನಲ್ಲಿ ವಿಶ್ರಮಿಸಿರಿ. "

" ಹೂಂ — ಹೂಂ, ನಡೆಯಿರಿ. ಇಷ್ಟು ರಾತ್ರಿಯಾಗಿದೆ. ಇನ್ನೇನು ತಿರುಗಿ ಹೋಗುತ್ತೀರಿ ? " ನೀರಜೆ ಚಿಂತಿತಳಾಗಿ ಹೇಳಿದಳು.

ಪ್ರಮೋದನು ಇದಕ್ಕೆ ಒಪ್ಪಲಿಲ್ಲ. ಹೀಗೆ ಮಾಡಿದರೆ ಯಾಮಿನೀನಾಥನು ಚಿಂತೆಗೊಳಗಾಗುವನೆಂಬ ಹೆದರಿಕೆಯಿತ್ತು. ಅವನು ರಾತ್ರಿಯೆಲ್ಲ ಹುಡುಕಾಡುವನೆಂಬ ವಿಚಾರ ಬಂದಿತು.

" ಇಷ್ಟು ರಾತ್ರಿಯಾಗಿದೆ. ನಿಮಗೆ ಉಣ್ಣಿಸದೆ ತಿನ್ನಿಸದೆ ನಾನು ಬಿಡುವುದಿಲ್ಲ. ಹೀಗೆ ಮಾಡಿದರೆ ನನ್ನ ವ್ರತವು ಭಂಗವಾಗುವುದು. ಅತಿಥಿಸೇವೆಯೇ ನನ್ನ ವ್ರತ. " ಸಂನ್ಯಾಸಿ ಹೇಳಿದ.

ಪ್ರಮೋದನು ಮರುಮಾತನಾಡದಾದ. ಸುಮ್ಮನೆ ಸಂನ್ಯಾಸಿಯ ಹಿಂದೆ ಹೊರಟ. ನೀರಜಾ ಪ್ರಫುಲ್ಲ - ಚಿತ್ತ – ವಿಹಂಗಿನಿಯಂತೆ ಮುಂದೆ ಮುಂದೆ ಹಾಡುತ್ತ ನಡೆದಳು:—

ಒಗ್ಗುವೆ ಯಾಕೊ। ಈ ದೇಹಕ್ಕೆ। ಕುಗ್ಗುವೆ ಯಾಕೊ ॥ಪಲ್ಲ॥
ಒಗ್ಗುವ ನೆಗ್ಗುವ ಮುಗ್ಗುವ ತಗ್ಗುವ ॥
ಅಗ್ನಿಯೊಳಗೆ ಬಗ್ಗವಾಗುವ ದೇಹಕ್ಕೆ ॥ಅ. ಪ.॥

ಸತಿ-ಪತಿಯರು ಕೂಡಿ ' ರತಿ ಕ್ರೀಡೆಗಳ ಮಾಡಿ ॥
ಪತನವಾದಿಂದ್ರಿಯ । ಪ್ರತಿಮೆಯ ದೇಹಕ್ಕೆ ॥ ೧ ॥

ಹೇಳುತ್ತ ಕೇಳುತ್ತ । ಬಾಳುತ್ತ ಬದುಕುತ್ತ ॥
ಹೇಳದೆ ಹೋಗುವ । ಹಾಳಾದ ದೇಹಕ್ಕೆ ॥ ೨ ॥

# ಪ್ರಸ್ಥಾನವೊ ಅಥವಾ ವಿಯೋಗವೊ !

ನೀರಜಾ ಹಾಡುತ್ತಿದ್ದಳು. ಏಕೊ ಒಮ್ಮೆಲೇ ಹಾಡನ್ನು ನಿಲ್ಲಿಸಿದಳು. ಹತ್ತಿರದಲ್ಲಿಯೇ ಒಂದು ಮರವಿತ್ತು. ಆ ಕಡೆಯಿಂದ ಯಾರೋ ಬರುವ ಸಪ್ಪಳವು ಕಿವಿಗೆ ಬಿದ್ದಿತು. ಸಂನ್ಯಾಸಿ, ಪ್ರಮೋದರಿಬ್ಬರಿಗೂ ಆಶ್ಚರ್ಯ ವಾಯಿತು. ಕುಸು ಹೊತ್ತು ಗಿಡದ ಹತ್ತಿರ ಹುಡುಕಿದರು. ಆದರೆ ಯಾರೂ ಇದ್ದಿಲ್ಲ. ನೀರಜೆಯು ಭ್ರಮವಿರಬೇಕೆಂದು ತಿಳಿದು ಗುಡಿಸಲಿನತ್ತ ಹೊರ ಟರು. ಗುಡಿಸಲು ಮುಟ್ಟಿದರು. ಊಟವಾದ ಮೇಲೆ ಸನ್ಯಾಸಿ ಪ್ರಮೋದನ ಹೆಸರು, ಊರು, ಕುಲ–ಗೋತ್ರಗಳನ್ನೂ ಕಾನಪುರಕ್ಕೆ ಬಂದ ಕಾರಣ ವನ್ನೂ ಕೇಳಿದ.

ಪ್ರ:— " ದಸರೆಯ ಬಿಡುವಿನಲ್ಲಿ ಹೀಗೆಯೇ ಅಡ್ಡಾಡುತ್ತಿರುತ್ತೇನೆ. "

ಸಂ:— " ಇನ್ನೂ ಎಷ್ಟು ದಿವಸ ಇಲ್ಲಿ ಇರುವಿರಿ ? "

" ಇನ್ನು ಮೂರು-ನಾಲ್ಕು ದಿನಕ್ಕೆ ಕಾಲೇಜು ಸುರುವಾಗುವುದು. ಅದರಿಂದ ಹೆಚ್ಚು ಕಾಲ ನಾನು ನಿಲ್ಲಲಾರೆ. ನಾಳೆ ಅವಶ್ಯವಾಗಿ ಇಲ್ಲಿಂದ ಹೊರಡಬೇಕು. ಕಲಕತ್ತೆಗೆ ಹೋಗುವ ಮುನ್ನ ನಾನು ಊರಿಗೂ ಹೋಗ ಬೇಕಾಗಿದೆ. " ಸ್ವಲ್ಪ ತಡೆದು ಪ್ರಮೋದನು ಹೇಳಿದ.

" ಇನ್ನೂ ನೀವು ಕೋಗಿಲೆಯನ್ನು ನೋಡಿಲ್ಲ. ಇನ್ನು ತಿರುಗಿ ಮತ್ತೆ ನೀವು ಬರುವುದಿಲ್ಲವೆ ? " ನಡುವೆಯೇ ಬಾಯಿ ಹಾಕಿದಳು ನೀರಜಾ.

ನೀರಜಾನ ಮಾತನ್ನು ಕೇಳುತ್ತಲೇ ಪ್ರಮೋದನು ನಗುತ್ತ ಅವಳ ಕಡೆಗೆ ನೋಡಹತ್ತಿದ. ಸಂನ್ಯಾಸಿಯೂ ನಗದಿರಲಿಲ್ಲ; ಆದರೆ ಕ್ಷಣ ಹೊತ್ತಿ ನಲ್ಲಿಯೇ ಅವನ ನಗೆ ಮಾಯವಾಯಿತು ಮುಖಾಕೃತಿ ಗಂಭೀರವಾಯಿತು. ಪ್ರಮೋದನು ನೀರಜಾನ ಮೋರೆಯನ್ನು ನೋಡುತ್ತಿದ್ದ. ಅವನಿಗೆ ತಿಳಿಯದಂತೆ ಅವನ ಬಾಯಿಂದ " ಇಂಥ ಸರಳ ಸ್ವಭಾವದ ಬಾಲಿಕೆಯನ್ನಂತೂ ನಾನು ಎಲ್ಲಿಯೂ ನೋಡಿಲ್ಲ. " ಎಂಬ ಶಬ್ದಗಳು ಹೊರಬಿದ್ದುವು.

ಪ್ರಮೋದನ ಬಾಯಿಂದ ಈ ಶಬ್ದಗಳು ಮೆಲ್ಲಗೆ ಹೊರಗೆ ಬಿದ್ದಿದ್ದುವು; ಆದರೆ ಸಂನ್ಯಾಸಿಗೆ ಕೇಳಿಸದೇ ಇರಲಿಲ್ಲ. ಇದಕ್ಕಾಗಿಯೇ ಅವನು ಗಂಭೀರ ನಾಗಿದ್ದ.

" ಇದು ನಿಜ. ಇಂಥ ಸರಳ ಸ್ವಭಾವದ ಹುಡುಗಿ ಸಿಗುವುದು ದುರ್ಲಭ; ಆದರೆ ಇವಳಿಗೆ ಸರಿಯಾದ ವರನೆಲ್ಲಿ? ಅಂಥ ಯೋಗ್ಯ ವರನು ದೊರೆಯ ಬಹುದೆ? ದೊರೆತರೆ ಅವನ ಕೈಗೆ ಒಪ್ಪಿಸಿ ನಾನು ನಿಶ್ಚಿಂತನಾಗುವೆ. ಕನ್ಯೆ ಪರರ ಸೊತ್ತು. ಮದುವೆ ಮಾಡಿಬಿಟ್ಟರೆ ಒಂದು ಭಾರ ಇಳಿಸಿಕೊಂಡಂತಾಗು ವುದು. ಆ ಮೇಲೆ ನಾನು ಕಾಶಿಗೋ ಹರಿದ್ವಾರಕ್ಕೋ ಹೋಗುವೆ?" ಸಂನ್ಯಾಸಿ ಹೇಳಿದ.

" ಅಪ್ಪ, ನನ್ನನ್ನೂ ಹರಿದ್ವಾರಕ್ಕೆ ಕರೆದುಕೊಂಡು ಹೋಗುವುದಿಲ್ಲವೆ? ಇಲ್ಲಿಗೆ ಹರಿದ್ವಾರ ಎಷ್ಟು ಹರದಾರಿಯಾಗುತ್ತದೆ?" ನೀರಜಾ ಗಂಭೀರ ಭಾವದಿಂದ ಕೇಳಿದಳು.

" ಬಹಳ ದೂರ." ಸಂನ್ಯಾಸಿ ಹೇಳಿದ.

ಈ ಮಾತಿನಿಂದ ಅವಳು ವ್ಯಾಕುಲಳಾದಳು. ಪ್ರಮೋದನನ್ನುದ್ದೇಶಿಸಿ " ನೀವು ಎಂದಾದರೂ ಅತ್ತ ಹೋಗಿರುವಿರಾ?" ಎಂದು ಕೇಳಿದಳು.

ಇದು ಸಂನ್ಯಾಸಿಗೆ ಕೇಳಿಸಿತು. ಅವನು ನೀರಜಾನ ಕಡೆಗೆ ನೋಡಿದ. ಈ ಮಾತು ನೀರಜಾನ ಬಾಯಿಂದ ಹೇಗೆ ಹೊರಟಿತು. ಅವಳ ಹೃದಯ ದೊಳಗೆ ಏನು ಹುದುಗಿಕೊಂಡಿದೆ ಮುಂತಾಗಿ ತಿಳಿದುಕೊಳ್ಳಲಿಚ್ಛಿಸುತ್ತಿದ್ದ. ಅದೊಂದೇ ಭಾವಕ್ಕೆ ಜಗತ್ತೇ ಮುಗ್ಧವಾಗಿದೆ. ಅದರ ಶಕ್ತಿಯಿಂದಲೇ ಇಡಿಯ ಜಗತ್ತಿನ ಕಾರ್ಯವು ಸಾಗುತ್ತಿದೆ. ಆ ಭಾವವನ್ನು ನೋಡಲು ಸಂನ್ಯಾಸಿ ಯತ್ನಿಸಿದ. ಅವಳಲ್ಲಿ ಇನ್ನೂ ಆ ಭಾವವು ಅಂಕುರಿಸಿರುವುದೋ ಇಲ್ಲೋ ನೋಡಬೇಕೆನ್ನುತ್ತಿದ್ದ.

" ಹರಿದ್ವಾರವು ಇಲ್ಲಿಗೆ ಎಷ್ಟು ದೂರವಿದೆ?" ನೀರಜಾನ ಮಾತಿಗೆ ಉತ್ತರವಾಗಿ ಪ್ರಮೋದನು ಕೇಳಿದ.

ಈ ವಿಷಯವನ್ನು ಮುಗಿಸುವ ಉದ್ದೇಶದಿಂದ ಸಂನ್ಯಾಸಿ ನುಡಿದ:

" ಮಗು, ನಿನ್ನನ್ನು ಬಿಟ್ಟು ನಾನೊಬ್ಬನೇ ಹರಿದ್ವಾರಕ್ಕೆ ಹೋಗ ಬಹುದೆ? ಮೊದಲು ನಿನ್ನ ಮದುವೆಯಾಗಲಿ, ಆ ಮೇಲೆ ನಾನು ಹೋಗುವೆ. ಮಾಯೆಯ ಪ್ರಭಾವವು ಎಷ್ಟು ಪ್ರಬಲವಾಗಿದೆಯಲ್ಲ! ಸಂಸಾರದಲ್ಲಿ ಎಳ್ಳಷ್ಟು ಸಾರವಿಲ್ಲವೆಂಬುದು ನನಗೆ ಗೊತ್ತಿದೆ. ಆದರೂ ಅದನ್ನು ಬಿಟ್ಟರೆ ಬ್ರಹ್ಮನೂ ದೂರಾಗುವನು."

ಸಂನ್ಯಾಸಿಯ ಕಣ್ಣುಗಳಿಂದ ಒಂದೆರಡು ಹನಿ ಕಣ್ಣೀರು ಸುರಿದುವು.

ಹೀಗೆಯೇ ಕೆಲ ಹೊತ್ತು ಕಳೆದರು. ಆ ಮೇಲೆ ಮನೆಗೆ ಹೋಗಲು ಪ್ರಮೋದನು ಅಪ್ಪಣೆ ಬೇಡಿದ. ಸಂನ್ಯಾಸಿ ಪ್ರಮೋದನನ್ನು ಕಳಿಸಬೇಕೆಂದು ಎದ್ದು ನಿಂತ. ನೀರಜೆಯೂ ಸಂಗಡ ಹೋಗಬೇಕೆನ್ನುತ್ತಿದ್ದಳು; ಆದರೆ ಸಂನ್ಯಾಸಿ "ನೀನು ಹೋಗಿ ಮಲಗಿಕೊ. ನಾನು ತೀರ ನಸುಕಿನಲ್ಲಿ ಹೋಗಬೇಕಾಗಿದೆ. ನೀನು ಬೇಗನೆ ಏಳಬೇಕು." ಎಂದು ಅವಳನ್ನು ಬರಗೊಡಲಿಲ್ಲ.

ನೀರಜೆಗೆ ಈ ಮಾತು ಸರಿ ಬರಲಿಲ್ಲ; ಆದರೆ ತಂದೆಯ ಮಾತನ್ನು ಹೇಗೆ ಮೀರುವಳು. ಸುಮ್ಮನೇ ಹೋಗಿ ಮಲಗಿಕೊಂಡಳು.-

× × × ×

ಪ್ರಮೋದನು ಮನೆಗೆ ಬಂದ. ನೋಡುತ್ತಾನೆ. ಯಾಮಿನೀನಾಥನು ಇರಲಿಲ್ಲ. ನೌಕರನನ್ನು ಕೇಳಿದ. ಅವನು "ಕಲಕತ್ತೆಯಿಂದ ಒಂದು ಅರ್ಜಂಟ ಪತ್ರವು ಬಂದಿತ್ತು. ಅದರಿಂದ ಅವರು ಲಗುಬಗೆಯಾಗಿ ಸಂಜೆಯ ಎಕ್ಸ್‌ಪ್ರೆಸ್ ಗಾಡಿಯಿಂದ ಕಲಕತ್ತೆಗೆ ಹೋದರು." ಎಂದ.

ಮರುದಿನ ಪ್ರಮೋದ ಬಾಬುವೂ ಪ್ರಯಾಗಕ್ಕೆ ಹೊರಟ.

## ಕನಕಲತೆ

ಇಲ್ಲಿ ಕನಕನ ವಿಷಯವಾಗಿ ಸ್ವಲ್ಪ ವಿಚಾರ ಮಾಡುವುದು ಯೋಗ್ಯವೆಂದು ಕಂಡುಬರುತ್ತಿದೆ. ಈಗ ಕನಕನಿಗೆ ಹದಿನೈದು ವರುಷ; ಆದರೆ ಇನ್ನೂ ಮದುವೆಯ ಮಾತೇ ಇಲ್ಲ. ಸುಶೀಲೆ, ಪ್ರಮೋದರಿಬ್ಬರೂ ಬಾಲ ವಿವಾಹಕ್ಕೆ ಕಟು ವಿರೋಧಿಗಳು. ಅದರಿಂದ ಕನಕನ ಮದುವೆ ಇನ್ನೂ ಆಗಿಲ್ಲ. ಸ್ನೇಹದ ಪ್ರತಿ ಮೂರ್ತಿ ಕನಕನಿಗೆ ಪ್ರೇಮವೆಂದರೆ ಗೊತ್ತೇ ಇಲ್ಲ. ಅಪ್ರಕಟವಾಗಿ ಏಕಾಂತದಲ್ಲಿ ಕುಳಿತುಕೊಂಡು ತನ್ನ ಹೃದಯದೊಳಗೆ ಸುಶೀಲೆ ಹಾಗು ಅಣ್ಣ ಪ್ರಮೋದನನ್ನೇ ಪ್ರೇಮದ ದೃಷ್ಟಿಯಿಂದ ಕಾಣುವಳು. ಆ ಅಭಾವವನ್ನು ಪೂರಯಿಸಿಕೊಳ್ಳುವಳು. ಅವಳ ಹೃದಯವು ಚಿಕ್ಕಮ್ಮ ಹಾಗು ಅಣ್ಣನ ಪ್ರೇಮದಲ್ಲಿಯೇ ಪರಿಪೂರ್ಣವಾಗಿದೆ. ಈ ಅತುಲ ಪ್ರೇಮವು ಸೋಜಿಗವಾದುದೇ ಸರಿ! ಪ್ರಮೋದನು ಕಲಕತ್ತೆಗೆ ಹೋದರೆ ಕನಕಲತೆ ಕಷ್ಟದಿಂದ ದಿನಗಳೆಯುತ್ತಾಳೆ. ಬಿಡುವು ಯಾವಾಗ ಆಗುವುದೊ, ಯಾವಾಗ ಅಣ್ಣ ಮನೆಗೆ ಬರುವನೊ, ಇದೇ ಚಿಂತೆಯಲ್ಲಿರುತ್ತಾಳೆ. ಅಣ್ಣನಿಗೆ ಅವಳು ಕಾಲಕುಪ್ಪಸ

ಅವನಿಗಾಗಿ ಬನೀನು ಇತ್ಯಾದಿ ಏನೇನನ್ನೋ ಸಿದ್ಧ ಮಾಡಿಡುತ್ತಾಳೆ. ಆದರೆ ಅವಳ ಪ್ರೇಮವು ಕಲ್ಪನೆಯೊಳಗೇ ಉಳಿಯುತ್ತಿತ್ತು. ಸಲುಗೆಯಿಂದ ಅಣ್ಣನ ಕೂಡ ಅವಳು ಮಾತನಾಡುತ್ತಿದ್ದಿಲ್ಲ. ಕನಕನ ಪ್ರತಿಯೊಂದು ಕೃತಿಯಲ್ಲಿಯೂ ಕಾರ್ಯದಲ್ಲಿಯೂ, ಸಣ್ಣ ಸಣ್ಣ ಮಾತಿನಲ್ಲಿಯೂ--ಸ್ನೇಹ, ಲಜ್ಜೆಗಳು ಒಡೆದು ಕಾಣುತ್ತಿದ್ದುವು. ಕನಕಲತೆ ಅಣ್ಣನಿಗೆ ಮೇಲಿಂದ ಮೇಲೆ ಪತ್ರ ಬರೆಯುತ್ತಿದ್ದಳು; ಆದರೆ ಪ್ರಮೋದನಿಗೆ ಸಮಯನಾಭಾವ, ಅದರಿಂದ ಎಲ್ಲ ಪತ್ರಗಳಿಗೂ ಉತ್ತರ ಕೊಡುತ್ತಿದ್ದಿಲ್ಲ. ಅವಳು ಹತ್ತು ಇಪ್ಪತ್ತು ಪತ್ರ ಬರೆದರೆ, ಅವನು ಒಂದೆರಡಕ್ಕೆ ಮಾತ್ರ ಉತ್ತರ ಬರೆಯುತ್ತಿದ್ದ. ಅಷ್ಟಾದರೂ ಕನಕನ ಆನಂದಕ್ಕೆ ಎಣೆಯೇ ಇರುತ್ತಿದ್ದಿಲ್ಲ.

ಪ್ರಮೋದನಿಗೆ ತಂಗಿಯ ನಿಃಸ್ವಾರ್ಥ ಪ್ರೇಮದ ಬೆಲೆ ತಿಳಿಯುತ್ತಿದ್ದಿಲ್ಲ. ಅವನು ಮೊತ್ತಮೊದಲು ಕಲಕತ್ತೆಗೆ ಓದಲು ಹೋದಾಗ ಭಗಿನೀ ಸ್ನೇಹದ ವಿರಹವು ಗೊತ್ತಾಗಿತ್ತು. ಕಲಕತ್ತೆಗೆ ಬಂದಮೇಲೆ ಅವನಿಗೆ ಹಿಂದಿನ ನೆನಪು ಬರಹತ್ತಿದ್ದುವು. ಇಲ್ಲಿ ಅವನಿಗೆ ಬಾದಾಮುಸ್ನು ಯಾರೂ ಒಡೆದು ಕೊಡುವವರಿಲ್ಲ; ಅವನ ಪುಸ್ತಕಗಳನ್ನು ಓರಣದಿಂದ ಇಡುವವರಿಲ್ಲ. ಅವನು ಚಿಂತೆಯೊಳಗಿದ್ದಾಗ, ಅವನ ಮೋರೆ ಬಾದಿದಾಗ ಯಾರೂ ಅವನನ್ನು ಕಾತರ ದೃಷ್ಟಿಯಿಂದ ಕಾಣುವುದಿಲ್ಲ. ಅವನು ಕಷ್ಟದಲ್ಲಿದ್ದರೆ ಯಾರೂ ಅತ್ತ ತುಸುವಾದರೂ ಲಕ್ಷ್ಯ ಕೊಡುವುದಿಲ್ಲ. ಆಗ ಅವನಿಗೆ ತಂಗಿಯ ಸ್ನೇಹವು ನೆನಪಾಗುತ್ತಿತ್ತು. ಸ್ನೇಹದ, ಮರ್ಮದ ಅರಿವಾಗುತ್ತಿತ್ತು. ಪ್ರಮೋದನ ಮೋರೆ ವಿಷಣ್ಣವಾದಾಗ ಕನಕ ಕಾತರಳಾಗಿ ಸಂತಯಿಸಲು ಬರುತ್ತಿದ್ದಳು. ಆಗ ಅವನು ಬೆದರಿಸಿ ಬಿಡುತ್ತಿದ್ದ. ಸ್ನೇಹದಿಂದ ಕನಕಲತೆ ಊಟಕ್ಕೆ ಹಾಕಲು ಬಂದರೆ, ಪ್ರಮೋದನು ಅವಳ ಕೈಯನ್ನು ಕೊಸರಿ ಒಗೆಯುತ್ತಿದ್ದ. ಅವಳನ್ನು ಅಳಿಸುತ್ತಿದ್ದ. ಹತ್ತಿರವಿದ್ದಾಗ ಇದೆಲ್ಲ ಪ್ರಮೋದನಿಗೆ ಗೊತ್ತೇ ಆಗಲಿಲ್ಲ. ಬಿಸಿಲಿಗೆ ಬಿದ್ದಾಗಲ್ಲವೇ ನೆರಳಿನ ಸುಖ ಗೊತ್ತಾಗುವುದು!

ಪ್ರಮೋದನ ಎಡಬಲದಲ್ಲಿರುವವರೆಲ್ಲರೂ ಅಪರಿಚಿತ ಜನರು. ಈಗ ಅವನಿಗೆ ಎಲ್ಲ ತಿಳಿಯಹತ್ತಿತು. ಎಷ್ಟೋ ಸಾರೆ ಪ್ರಮೋದನಿಗೆ ಗೊತ್ತಾಗದಂತೆಯೇ ಪ್ರಮೋದನ ಅಪರಾಧಗಳನ್ನು ಕನಕ ತಾನು ಒಪ್ಪಿಕೊಂಡಿದ್ದಳು. ಚಿಕ್ಕಮ್ಮನ ಮುಂದೆ ತಾನು ಅಪರಾಧಿಯಾಗಿ ನಿಲ್ಲುತ್ತಿದ್ದಳು. ಕಷ್ಟಗಳನ್ನನುಭವಿಸುತ್ತಿದ್ದಳು— ಇವೆಲ್ಲವೂ ಒಂದೊಂದಾಗಿ ಪ್ರಮೋದನ ಕಣ್ಣಮುಂದೆ

ಕುಣಿಯಹತ್ತಿದುವು. ಒಂದು ದಿನ ಮಳೆ ನಿಂತಮೇಲೆ ಇಬ್ಬರೂ ಆಡಲು ತೋಟಕ್ಕೆ ಹೋಗಿದ್ದರು. ಇತ್ತ ಸುಶೀಲೆ ಒಳಗೆ ನೋಡಿದಳು. ಇವರು ಇದ್ದಿಲ್ಲ. ಸಿಟ್ಟಾಗಿ ಇಬ್ಬರನ್ನೂ ಒದರಿದಳು. ಪ್ರಮೋದನು ಹೋಗಹೋಗುತ್ತ ನಡು ವೆಯೇ ಓಡಿ ಹೋಗಿಬಿಟ್ಟ. ಪ್ರಮೋದ ಓಡಿ ಹೋದಮೇಲೆ ಕನಕ ನಗುತ್ತ ಚಿಕ್ಕಮ್ಮನ ಬಳಿಗೆ ಹೋದಳು. ಸುಶೀಲೆಯ ಕ್ರೋಧಕ್ಕೆ ಕನಕಲತೆಯೊಬ್ಬಳೇ ತುತ್ತಾದಳು. ಸುಶೀಲೆಯ ಸಿಟ್ಟು ಶಾಂತವಾಯಿತು. ಈ ಸಂಗತಿ ಹಿಂದಿನಿಂದ ಅವನಿಗೆ ತಿಳಿಯಿತು. ಪ್ರಮೋದನ ಸಮೀಪಕ್ಕೆ ಚಿಕ್ಕಮ್ಮನ ಕ್ರೋಧಾಗ್ನಿ ಸುಳಿಯಲೇ ಇಲ್ಲ. ತನ್ನ ಪಾಲಿನ ತಪ್ಪನ್ನೂ ಕನಕಲತೆಯೇ ಹೊತ್ತುಕೊಂಡು ಕುಣಿದಾಡುತ್ತಿದ್ದಾಳೆ. ಇದನ್ನು ನೋಡಿ ಪ್ರಮೋದನಿಗೆ ಬಹಳ ಆಶ್ಚರ್ಯ ವೆನಿಸಿತು. ಇದೇ ಪ್ರಕಾರ ಅದೆಷ್ಟೋ ಘಟನೆಗಳನ್ನು ಸ್ಮರಿಸಿಕೊಂಡು ಪ್ರಮೋದನು ಚಿಂತೆ ಮಾಡುತ್ತಿದ್ದ. ಕನಕನ ಸ್ನೇಹವು ಅವನಿಗೆ ಆದರ್ಶ ಸ್ನೇಹವೆಂದು ಕಂಡುಬಂದಿತು. ತಾನು ಅವಳ ಕೂಡ ಕಠೋರತನದಿಂದ ನಡೆದುಕೊಂಡುದನ್ನು ನೆನಸಿಕೊಂಡು ಬೇಗುದಿಗೊಳ್ಳಹತ್ತಿದ. ಇನ್ನು ಕನಕ ನಿಗೆ ಕಷ್ಟ ಕೊಡುವುದಿಲ್ಲವೆಂದು ಆಲೋಚನೆ ಮಾಡಹತ್ತಿದ. ಆದರೆ ದಿನಗಳು ಕಳೆದಂತೆಲ್ಲ ಪ್ರಮೋದನ ಅನುತಾಪವೂ ಕಡಿಮೆಯಾಗಹತ್ತಿತು. ತುಸು ದಿನ ಗಳಲ್ಲಿಯೇ ಅವನಿಗೆ ಕಲಕತ್ತೆಯ ವಾತಾವರಣವು ಒಗ್ಗಿತು. ಇತ್ತ ಕನಕನ ನೆನಪೂ ಕಡಿಮೆಯಾಗಹತ್ತಿತು; ಆದರೆ ಕನಕಲತೆ ಅಣ್ಣನಿಗಾಗಿ ಎಷ್ಟೋ ಚಿಂತೆ ಮಾಡುತ್ತಿದ್ದಳು. ಇಡಿಯ ವರುಷ ಅವನ ದಾರಿ ನೋಡಿ ನೋಡಿ ಕಣ್ಣುಗುಡ್ಡೆ ಬೆಳ್ಳಗಾದಾಗ, ಮನಸ್ಸು ವ್ಯಾಕುಲವಾದಾಗ, ಬಿಡುವಿನಲ್ಲಿ ಪ್ರಮೋದ ಮನೆಗೆ ಬರುತ್ತಿದ್ದ. ಆಗಿನ ಕನಕನ ಆನಂದವನ್ನು ಬಣ್ಣಿಸುವುದು ಅಸದಳ. ಪ್ರಮೋದನು ಮನೆಯಲ್ಲಿರುವವರೆಗೆ ಕನಕ ದಿನಗಳನ್ನು ಮಿನಿಟ ನಂತೆ ಕಳೆಯುತ್ತಿದ್ದಳು. ಹಿಂದಿನಂತೆ ಈಗಲೂ ಇಡಿಯ ವರುಷ ನಿರೀಕ್ಷಣೆ ಮಾಡಿದ ಮೇಲೆ ಈಗ ತಾನೆ ಆಶ್ವಿನ ಮಾಸವು ಆರಂಭವಾಗಿದೆ. ಕನಕ ತುಂಬಾ ಕಷ್ಟದಿಂದ ಅಣ್ಣನ ಹಾದಿಯನ್ನು ನೋಡಹತ್ತಿದಳು. ಆದರೆ ಪಾಪ! " ಈ ಸಾರೆ ಪ್ರಮೋದನು ಕಾನಪುರಕ್ಕೆ ತಿರುಗಾಡಲು ಹೋಗುವನು; ಅಲ್ಲಿ ಕೆಲವು ದಿನ ಇದ್ದು ಇಲ್ಲಿಗೆ ಬರುವನು." ಎಂದು ಅವಳಿಗೆ ತಿಳಿಯಿತು. ಕನಕ ಚಡಪಡಿಸಿ ಸುಮ್ಮನಾದಳು. ಕನಕನಿಗೆ ಅತ್ಯಂತ ಕಷ್ಟವಾಯಿತು. ಆದರೆ ಮಾಡಬೇಕೇನು? ಮತ್ತೆ ಅವಳು ದಿನಗಳನ್ನೆಣಿಸಹತ್ತಿದಳು. ಪ್ರಮೋದನು

ಕಾನಪುರದಿಂದ ಅಲಾಹಾಬಾದಕ್ಕೆ ಬಂದ. ಕನಕನ ಸ್ನೇಹಮಯ ಹೃದಯವು ಆನಂದದಿಂದ ಉಕ್ಕಿ ಬಂದಿತು. ಈ ಸಾರೆ ಪ್ರಮೋದನ ಮುಖವು ಹಿಂದಿನಂತಿದ್ದಿಲ್ಲ ಅದರಲ್ಲಿ ನಗೆ, ಸ್ನೇಹಗಳು ಬೆರೆತಿದ್ದುವು. ಒಂದು ಹೊಸ ಬಗೆಯ ಹುರುಪು ಅವನಲ್ಲಿ ಸೇರಿತ್ತು. ಬಿಡುವಿನ ದಿನಗಳು ಬೇಗನೇ ಮುಗಿದುವು. ಕನಕನ ಆನಂದದ ದಿನಗಳೂ ಮರೆಯಾದುವು.

## ಅಣ್ಣ - ತಂಗಿ

ಪ್ರಮೋದ ಇಂದು ಸಂಜೆಗೆ ಕಲಕತ್ತೆಗೆ ಹೋಗುವವನಿದ್ದಾನೆ. ಅವನು ಒಯ್ಯುವ ಸಾಮಾನುಗಳನ್ನು ಕನಕಲತೆ ಸರಿಪಡಿಸಿ ಇಡುತ್ತಿದ್ದಾಳೆ. ಕನಕನು ಅವನಿಗೆ ಗೊತ್ತಾಗದಂತೆ ಹ್ಯಾಂಡಬ್ಯಾಗಿನಲ್ಲಿ ಸ್ವಲ್ಪ ಬಾದಾಮು, ತಾನು ಹೆಣೆದ ಕಾಲುಚೀಲಗಳನ್ನಿಟ್ಟಳು. ಎಲ್ಲ ಸಾಮಾನುಗಳನ್ನೂ ಓರಣದಿಂದ ಕಟ್ಟಿ ಇಟ್ಟು ಅವಳು ಓದುವ ಕೋಣೆಗೆ ಹೋದಳು. ಓದಬೇಕೆಂದು ಒಂದು ಪುಸ್ತಕವನ್ನು ತೆಗೆದುಕೊಂಡಳು. ಮನಸ್ಸನ್ನು ಆನಂದಗೊಳಿಸಿಕೊಳ್ಳಲೆಳಸಿದಳು. ಭರದಿಂದ ಪುಟಗಳನ್ನು ತಿರುವಹತ್ತಿದಳು. ಅವಳು ಓದಿ ಪಾನುಗಳನ್ನು ತಿರುವುತ್ತಿದ್ದಳೊ, ಅಥವಾ ಕಣ್ಣೀರು ಬಿದ್ದು ತೊಯ್ದು ಕೆಡುವುವೆಂಬ ಭಯದಿಂದ ತಿರುವುತ್ತಿದ್ದಳೊ, ಹೇಳುವುದು ಕಠಿನ. ಕೆಲವು ಕಾಲವನ್ನು ಹೀಗೆಯೇ ಕಳೆದಳು. ಕೊನೆಗೆ ಕನಕಲತೆ ಉದಾಸೀನಳಾಗಿ ಪುಸ್ತಕವನ್ನು ತೆಗೆದು ಒಂದೆಡೆಗಿಟ್ಟಳು. ಸೆರಗಿನಿಂದ ಕಣ್ಣೀರನ್ನೊರೆಸಿಕೊಳ್ಳಹತ್ತಿದಳು. ಇಷ್ಟು ಹೊತ್ತಿಗೆ ಪ್ರಮೋದನು ಅಲ್ಲಿಗೆ ಬಂದ. ಕನಕನ ಹತ್ತಿರ ಕುಳಿತುಕೊಂಡು — " ಏನು ಓದುತ್ತಿ ? " ಎಂದು ಕೇಳಿದ.

" ಅಣ್ಣ, ಇದು ಹಿಂದುಸ್ತಾನದ ಇತಿಹಾಸ. " ಎಂದಳು ಕನಕ.

" ತಾ, ನೋಡೋಣ " ಎಂದು ಪ್ರಮೋದನು ಪುಸ್ತಕವನ್ನು ಕೈಯೊಳಗೆ ತೆಗೆದುಕೊಂಡ. ಅದನ್ನು ನೋಡಿದಾಕ್ಷಣವೇ ಮೇಜಿನ ಮೇಲಿಟ್ಟು " ಹೈಂ ! ಕನಕ ! " ಎಂದ. ಮುಂದೆ ಮಾತೇ ಹೊರಡಲಿಲ್ಲ.

ಅಣ್ಣ ಏನನ್ನೋ ಹೇಳಬೇಕೆನ್ನುತ್ತಿದ್ದ. ಸುಮ್ಮನಾದ ಅವನ ಮಾತನ್ನು ಅರಿತುಕೊಳ್ಳಲು ಕನಕ ಕೇಳಿದಳು. " ಅಣ್ಣ, ಏನೋ ಹೇಳಲು ಹೊರಟಿದ್ದೆ. ನಡುವೆಯೇ ಏಕೆ ಸುಮ್ಮನಾದೆ ? ಹೇಳಬಾರದೆ ? "

ಪ್ರಮೋದ— " ಇಲ್ಲ, ಮತ್ತೇನೂ ಇಲ್ಲ. ನಿನಗೆ ಇತಿಹಾಸವು ಜ್ಞಾಪಕ ವಿದೆಯೋ ಇಲ್ಲೋ ಕೇಳಬೇಕೆನ್ನುತ್ತಿದ್ದೆ. ಇರಲಿ, ಹೇಳು ನೂರಜಹಾಂ ಯಾರು ? "

ಕನಕ— " ಅವಳು ಶೇರ ಅಫಗಾನನ ಮಗಳು. ಕೊನೆಗೆ ಜಹಾಂಗೀರನ ಬೇಗಮ್ ಆದಳು "

ಪ್ರ— " ಜಹಾಂಗೀರನಿಗೂ, ನೂರಜಹಾಂನಳಿಗೂ ಹೇಗೆ ಗೆಳೆತನ ಬೆಳೆಯಿತು ? "

ಕ— " ನೂರಜಹಾಂ ಇನ್ನೂ ಚಿಕ್ಕವಳಿದ್ದಳು. ಆಗ ಅವಳು ತನ್ನ ತಂದೆಯ ಕೂಡ ಅಕಬರನ ದರಬಾರಕ್ಕೆ ಬರುತ್ತಿದ್ದಳು. ಆಗ ಅವರಿಬ್ಬರಲ್ಲಿ ಪರಿಚಯುವಾಯಿತು, ಗೆಳೆತನವಾಯಿತು. "

ಪ್ರ— " ಇರಲಿ, ಒಳ್ಳೇದು, ನೂರಜಹಾಂನಳ ಲಗ್ನವು ಶೇರ ಅಫ ಗಾನನ ಕೂಡ ಆಯಿತು. ಆ ಮೇಲೆ ಅವಳು ಜಹಾಂಗೀರನ ಬೇಗಮ್ ಹೇಗೆ ಆದಳು ? "

ಕ— " ಜಹಾಂಗೀರನ ಅಪ್ಪಣೆಯ ಮೇರೆಗೆ ಶೇರ ಅಫಗಾನನ ಕೊಲೆ ಯಾಯಿತು............ " ಕನಕ ಲತೆಯು ಮಾತನ್ನು ಮುಂದುವರಿಸಗೊಡದೆ ಪ್ರಮೋದನೆಂದ.

" ಛಿ, ಛಿ, ಜಹಾಂಗೀರನ ಪ್ರೇಮವು ಬರಿ ಪ್ರೇಮವಲ್ಲ, ಆತ್ಮತ್ಯಾಗ ವಿಲ್ಲದ ಪ್ರೇಮಕ್ಕೆ ಬೆಲೆಯೇ ಇಲ್ಲ. " ಎಂದು ಹೇಳುತ್ತಿರುವಾಗಲೇ ಪ್ರಮೋ ದನ ಮೈಯಲ್ಲಿ ಒಮ್ಮೆಲೇ ವಿದ್ಯುತ್ತು ಹರಿದು ಹೋದಂತಾಯಿತು.

ಪ್ರಮೋದನು ಮನಸ್ಸಿನೊಳಗೆಯೇ ವಿಚಾರ ಮಾಡಹತ್ತಿದ. ನೀರಜಾ ಮತ್ತೆ ಯಾರನ್ನಾದರೂ ವರಿಸಿದರೆ, ಏನು ಮಾಡುವುದು ? ಹಾಗಾದರೆ ನೀರಜಾ ಪರರ ಸೊತ್ತಾಗುವಳು. ಅವಳು ಎಲ್ಲಿಗಾದರೂ ಕೂಡಿದರೆ, ಮೋರೆ ತಿರುವಿ ಬಿಡುವಳು, ಅಥವಾ ಜೀವನದಲ್ಲಿ ಮುಂದೆಂದೂ ಕೂಡಲಿಕ್ಕೂ ಇಲ್ಲ. ಉಫ್ ! ಎಂಥ ದುಃಖದ ಸಂಗತಿಯಿದು ! ಹೀಗೆ ವಿಚಾರ ಮಾಡಿದ ಮಾತ್ರಕ್ಕೆಯೇ ಅವನಿಗೆ ತಾಪವೆನಿಸಹತ್ತಿತು. ಪ್ರಮೋದನ ಅಧರುಗಳು ತಡೆತಡೆದು ನಡುಗ ಹತ್ತಿದುವು; ಆದರೆ ತುಸು ಹೊತ್ತಿನಲ್ಲಿ ಗಂಭೀರನಾದ. " ಕನಕ, ನೀನೆಂದಾ ದರೂ ನೂರಜಹಾಂನ ಚಿತ್ರವನ್ನು ನೋಡಿರುವೆಯಾ ? " ಚೇತರಿಸಿಕೊಂಡು ಪ್ರಮೋದನು ಕೇಳಿದ.

ಕನಕ— “ ನೋಡಿದ್ದೇನೆ. ಅಣ್ಣ, ಅಂಥ ಸುಂದರಳಾದ ಅತ್ತಿಗೆಯೊಬ್ಬಳು ಮನೆಗೆ ಬರಲಿ ! ಅಣ್ಣ, ನೀನು ಮದುವೆ ಮಾಡಿಕೊಳ್ಳುವುದಿಲ್ಲವೆ? ”

ಕನಕನ ಈ ಸರಳ ಪ್ರಶ್ನೆ ಪ್ರಮೋದನ ಹೃದಯವನ್ನು ಮುಟ್ಟಿತು. ಅವನು ಸಾವಕಾಶವಾಗಿ ತಣ್ಣಗಿನ ಉಸಿರೊಂದನ್ನೆಳೆದ. ಏನನ್ನೋ ಯೋಚನೆ ಮಾಡಿಕೊಂಡು ಒಂದು ಕವಾಟಿಗೆ ಆತುನಿಂತ. ಅಲ್ಲಿಂದ ಅನ್ಯಮನಸ್ಕನಾಗಿ ಒಂದು ಪುಸ್ತಕವನ್ನು ತೆಗೆದುಕೊಂಡ.

ಕನಕ— “ ಅಣ್ಣ, ಇಂದು ನಿನಗೇನಾಗಿದೆ. ನೀನು ಏನನ್ನೋ ಹೇಳ ಹೇಳುತ್ತ ನಡುವೆಯೇ ಬಿಟ್ಟುಬಿಟ್ಟೆ. ”

ಪ್ರಮೋದ— “ ಹೂಂ, ಏನೋ ಹೇಳಬೇಕೆನ್ನುತ್ತಿದ್ದೆ; ನಡುವೆಯೇ ಮರೆತು ಹೋಯಿತು. ”

“ ನನಗೆ ಅದನ್ನು ಹೇಳಿದರೆ ಹಾನಿಯಾಗುವುದೇ ? ನೆನಪು ಮಾಡಿಕೊ, ಹೇಳು. ” ಕನಕ ನಿರಾಶೆಯಿಂದ ಹೇಳಿದಳು.

ಪ್ರ — “ ನೀನಿನ್ನೂ ಹುಡುಗೆ, ಚಿಕ್ಕವಳು. ನಿನ್ನ ಮುಂದೆ ಹೇಳಿದರೆ ನನಗಾಗುವ ಲಾಭವೇನು ? ”

ಕ— “ ಅಣ್ಣ, ನೀನು ನನಗೆ ಎಂದೂ ಏನೂ ಹೇಳುತ್ತಿದ್ದಿಲ್ಲ. ಆದರೆ ಇಂದೇ ಏಕೆ ಹೇಳಲು ಬಂದೆ ? ”

ಪ್ರ— “ ಹುಚ್ಚುತನ, ಬುದ್ಧಿಭ್ರಮೆ, ಮತ್ತೇನು ? ಮನಸ್ಸಿನೊಳಗಿನ ಆ ಮಾತು ಹೊರಬೀಳಲು ಹಾತೊರೆಯುತ್ತಿತ್ತು; ಆದರೆ ಅದನ್ನು ಕೇಳುವವರೇ ಸಿಗಲಿಲ್ಲ. ಹೆಚ್ಚೇನು ಹೇಳಲಿ, ಹೇಳುವ ಮನಸ್ಸೇ ಇಲ್ಲ.

ಕನಕಲತಾ ನೋಡಿದಳು. ಪ್ರಮೋದನ ಮೋರೆಯ ಮೇಲೆ ಆ ಸ್ವಾಭಾವಿಕ ಚಪಲತನವಿದ್ದಿಲ್ಲ. ಇಂದು ಅವನು ಗಂಭೀರನಾಗಿದ್ದಾನೆ. ಮುಖವು ಬಾಡಿದೆ, ನೇತ್ರಗಳು ಆವೇಶಮಯವಾಗಿವೆ. ಮಾತಿನಲ್ಲಿ ಧೈರ್ಯ, ದೃಢತೆಗಳಿವೆ. ಮಾತಿನ ಭರದಲ್ಲಿ ಪ್ರಮೋದನು ಒಂದೊಂದನ್ನಾಗಿ ಎಲ್ಲ ಪುಸ್ತಕಗಳನ್ನು ಮೇಜಿನ ಮೇಲೆ ಒಗೆದ. ಕನಕನಿಗೆ ಇದರ ಮರ್ಮವು ಗೊತ್ತಾಗಲಿಲ್ಲ.

“ ಅಣ್ಣ, ನೀನು ನನಗಂತೂ ಏನೂ ಹೇಳುವುದಿಲ್ಲ. ” ಅಣ್ಣನ ಮಾತಿಗೆ ಉತ್ತರ ಕೊಡುತ್ತ ಎಂದಳು. ಕನಕನ ಮಾತಿಗೆ ಪ್ರಮೋದನು ಉತ್ತರವನ್ನು ಕೊಡಲಿಲ್ಲ. ಅವಳ ಮಾತನ್ನು ಅವನು ಕೇಳಿದನೋ, ಇಲ್ಲವೋ ? ಇದನ್ನು ಹೇಳುವುದೂ ಸುಲಭವಲ್ಲ. ಪ್ರಮೋದನು ಸ್ವಲ್ಪ ಹೊತ್ತು ಸುಮ್ಮನಿದ್ದ.

ಆ ಮೇಲೆ ಸುಮ್ಮನೆ ಎದ್ದು ಹೊರಟುಹೋದ. ಕನಕನಿಗೆ ಅತೀವ ನೇದನೆ ಯಾಯಿತು. ದುಃಖವು ಅತಿಯಾದುದರಿಂದ ಅವಳ ನೇತ್ರಗಳು ಕಣ್ಣೀರನ್ನು ತಡೆಯಲಾರದೆ ಹೋದುವು. ಕಣ್ಣೀರು ಹರಿದು ಹೋದುದರಿಂದ ಮನಸ್ಸಿನ ಉದ್ವೇಗವು ಸ್ವಲ್ಪ ತಗ್ಗಿತು. ಆಗ ಕನಕಲತಾ ಹೋಗಬೇಕೆಂದು ಎದ್ದಳು; ಆದರೆ ಅವಳು ಮೇಜಿನ ಮೇಲೆ ರಾಸಿಯಾಗಿ ಬಿದ್ದ ಪುಸ್ತಕಗಳನ್ನು ನೋಡಿದಳು. ಹೌಹಾರಿದಳು. ಕೂಡಲೇ ಪುಸ್ತಕಗಳನ್ನು ಓರಣದಿಂದಿಡಹತ್ತಿದಳು.

ಅವು ಸುಶೀಲಾನ ಪುಸ್ತಕಗಳು. ಸಣ್ಣವಳಿದ್ದಾಗ ಅವನ್ನು ಅವಳ ತಂದೆ ಕೊಟ್ಟಿದ್ದ. ಅದರಿಂದ ಅವಳಿಗೆ ಆ ಪುಸ್ತಕಗಳೆಂದರೆ ಪಂಚಪ್ರಾಣ. ತಂದೆ ತೀರಿಕೊಂಡ ಮೇಲೆ ಸುಶೀಲೆ ಅವನ್ನು ಬಹಳ ಜೋಕೆಯಿಂದ ಇಡುತ್ತಿದ್ದಳು. ಯಾರಾದರೂ ಅವಕ್ಕೆ ಕೈ ಹಾಕಿದರೆ ಅವಳು ಚಿಂತೆ ಮಾಡುತ್ತಿದ್ದಳು. ಒಂದು ದಿನ ಕನಕಲತಾ ಒಂದು ಪುಸ್ತಕವನ್ನು ಕಳೆದುಕೊಂಡಿದ್ದಳು. ಹುಡುಕುತ್ತ ಅಲ್ಲಿಗೆ ಹೋದಳು. ಆ ದಿವಸ ಸುಶೀಲಾ ಅವಳಿಗೆ ಬಹಳ ಸಿಟ್ಟು ಮಾಡಿದ್ದಳು. ಆ ಕಪಾಟನ್ನು ಮುಟ್ಟಬಾರದೆಂದು ಕಟ್ಟಪ್ಪಣೆ ಮಾಡಿದ್ದಳು. ಅಂದಿನಿಂದ ಕನಕ ಅದನ್ನು ಮುಟ್ಟುವ ಗೊಡವೆಗೇ ಹೋಗುತ್ತಿದ್ದಿಲ್ಲ.

ಪಾಪ ಕನಕ ಹೆದರುತ್ತ ಹೆದರುತ್ತ ಪುಸ್ತಕಗಳನ್ನು ಹೊಂದಿಸಿ ಇಡತೊಡಗಿದಳು. ಇದೇ ಹೊತ್ತಿಗೆ ಸುಶೀಲಾ ಆ ಕೋಣೆಯೊಳಗೆ ಕಾಲಿಟ್ಟಳು. ಸುಶೀಲಾನನ್ನು ನೋಡಿದಕೂಡಲೇ ಕನಕನ ಕೈಕಾಲು ತಣ್ಣಗಾದುವು. ಅವಳ ಅಳಿಮುಳಿದ ಸಾಹಸವೂ ಅದೃಶ್ಯವಾಯಿತು. ಕಳ್ಳನಂತೆ ಇದ್ದಲ್ಲಿಯೇ ನಿಂತು ಬಿಟ್ಟಳು. ತನ್ನ ಪ್ರೀತಿಯ ಪುಸ್ತಕಗಳು ಕಲ್ಲಾಬಿಲ್ಲಿಯಾಗಿದ್ದುವು. ಅದರಿಂದ ಸುಶೀಲಾ ಸಿಟ್ಟಾದಳು. ಸುಶೀಲಾ ಸ್ವಭಾವದಲ್ಲಿ ಕರ್ತವ್ಯಜ್ಞಾನ ಸಂಪನ್ನಳಿದ್ದಳು. ಅದರಿಂದ ಕಡ್ಡಿಯಂಥ ತಪ್ಪನ್ನೇ ಗುಡ್ಡ ಮಾಡುತ್ತಿದ್ದಳು. ಒಮ್ಮೆಲೆ ರೇಗಿಗೇಳುತ್ತಿದ್ದಳು. ನೋಡಿ ಸುಶೀಲಾನ ಮೈ ಕಾಯಿತು. ತನ್ನ ಆಜ್ಞೋಲ್ಲಂಘನವು ಅವಳಿಗೆ ಅಸಹ್ಯವೆನಿಸಿತು. ಸುಶೀಲಾ ಆಲೋಚಿಸಹತ್ತಿದಳು—

"ಏನು ಮಾಡಲಿ! ಅಂದು ಕಪಾಟನ್ನು ಮುಟ್ಟಬೇಡವೆಂದು ಕಟ್ಟಪ್ಪಣೆಯನ್ನು ಮಾಡಿತ್ತು; ಆದರೂ ಕೇಳಲಿಲ್ಲ. ನನ್ನ ಮಾತನ್ನು ತಿರಸ್ಕರಿಸುವುದೆ! ದೊಡ್ಡವರ ಮಾತನ್ನು ಮೀರುವುದೆ!! ಕನಕ ಮೊದಲು ಹೀಗೆಂದೂ ಇದ್ದಿಲ್ಲ. ಇವಳಿಗೆ ಇನ್ನು ಏನು ಮಾಡಬೇಕು? ಇವಳನ್ನು ಈಗ ಹತೋಟಿಯಲ್ಲಿಡದಿದ್ದರೆ ಮುಂದೆ ಕೆಲಸ ಕೆಡುವುದು. ಗಿಡವಾಗಿ (ಬಗ್ಗದ್ದು) ಬಾಗದುದು ಮರವಾಗಿ ಬಾಗೀತೆ!"

ಸುಶೀಲಾ ತನ್ನ ತಂದೆಯಲ್ಲಿ ಅತ್ಯಂತ ಸ್ನೇಹವಿಟ್ಟಿದ್ದಳು. ಆತನಿಗೆ ಬಹಳ ಮರ್ಯಾದೆ ಕೊಡುತ್ತಿದ್ದಳು. ಈ ಪುಸ್ತಕಗಳೇ ಪೂಜ್ಯ ಪಿತನ ಸಂಪತ್ತು. ಅದರಿಂದ ಅವು ಹೆಚ್ಚು ಪೂಜ್ಯವಾಗಿದ್ದುವು ಕನಕ ದೊಡ್ಡವರಿಗೆ ಅಷ್ಟೊಂದು ಮಾನ ಕೊಡುವುದಿಲ್ಲವೆಂದು ಸುಶೀಲಾ ಮನಸ್ಸಿನೊಳಗೇ ಆಲೋಚಿಸ ಹತ್ತಿದಳು.

" ನಾನು ಇವನ್ನು ಮುಟ್ಟಬೇಡವೆಂದು ಹೇಳಿದ್ದೆ. ನಿನಗೆ ನೆನಪಿಲ್ಲವೆ? ಇದಕ್ಕೆ ಕಾರಣವನ್ನೂ ನಿನಗೆ ಹೇಳಿದ್ದಿಲ್ಲವೆ? ಆದರೂ ಮತ್ತೆ ನೀನು ಮುಟ್ಟಿದ ಕಾರಣವೇನು?" ಸುಶೀಲಾ ಗಂಭೀರಳಾಗಿ ಕೇಳಿದಳು.

ಕನಕ ಸುಮ್ಮನಾದಳು. ಪಾಪ, ಅವಳು ಏನು ಉತ್ತರ ಕೊಡಬೇಕು? ನಾನು ಮಾಡಿಲ್ಲವೆಂದು ಅವಳು ಹೇಳಿ ಉಳಿದುಕೊಂಡರೆ, ಯಾರು ಮಾಡಿದ ರೆಂದು ಮತ್ತೆ ಪ್ರಶ್ನೆ ಏಳುವುದು. ಈ ದೇಹದಲ್ಲಿ ಪ್ರಾಣವಿರುವವರೆಗೆ ಅವಳು ಅಣ್ಣನ ಹೆಸರನ್ನು ಹೇಳುವುದಿಲ್ಲ! ಹೀಗೆಲ್ಲ ವಿಚಾರಮಾಡಿ ಕನಕ ಸುಮ್ಮನಾಗಿ ಬಿಟ್ಟಳು. ಸುಶೀಲಾ ಮತ್ತೆ ಕೇಳಿದಳು; ಆದರೆ ಕನಕ ತಿರುಗಿ ಉತ್ತರ ಕೊಡ ಲಿಲ್ಲ. ಅವಳು ಈಗ ದೋಷಿ, ಮತ್ತೆ ಮೇಲೆ ಮೌನವ್ರತವನ್ನು ಪಾಲಿಸು ತ್ತಿದ್ದಾಳೆ! ಮತ್ತೊಮ್ಮೆ ಕೇಳಿದಳು. ಆ ಮೇಲೆ ನಿರಾಶೆಯಿಂದ ಸುಮ್ಮ ನಾದಳು. ಕನಕನ ಸ್ವಭಾವವನ್ನು ಸುಧಾರಿಸುವುದು ಅಸಂಭವವೆಂದು ಸುಶೀಲಾ ನಿಗೆ ಎನಿಸಹತ್ತಿತು. ಆದರೂ, ಇದಕ್ಕೆ ಉಪಾಯ ಮಾಡದೆ ಬಿಡುವುದು ಒಳಿತಲ್ಲವೆಂದು ತಿಳಿದು ಕರ್ಕಶ ಸ್ವರದಲ್ಲಿ ಎಂದಳು. " ಪ್ರಮೋದನು ಈ ದಿನ ರಾತ್ರಿಯೇ ಕಲಕತ್ತೆಗೆ ಹೋಗುವನು. ಹೋಗುವಾಗ ನೀನು ಅವನಿಗೆ ಭೆಟ್ಟಿ ಯಾಗಬೇಡ." ಕನಕನಿಗೆ ಈ ಶಿಕ್ಷೆಯೊಂದೇ ಪರ್ಯಾಪ್ತವೆಂದು ಸುಶೀಲಾ ತಿಳಿದಿದ್ದಳು.

" ಕನಕ ಈಗ ಎಲ್ಲಿದ್ದಾಳೆ? ಅವಳನ್ನು ನೋಡದೆ ಬಹಳ ಹೊತ್ತಾ ಯಿತು. ನಾನು ಹೋಗಲು ಸಜ್ಜಾಗಿ ನಿಂತಿದ್ದೇನೆ. ಆದರೂ ಅವಳೇಕೆ ಇಲ್ಲಿಗೆ ಬರಲಿಲ್ಲ?" ರಾತ್ರಿ ಹೊರಡುವ ವೇಳೆಯಲ್ಲಿ ಪ್ರಮೋದನು ಸುಶೀಲಾನನ್ನು ಕೇಳಿದ.

" ಇಂದು ಅವಳು ತಪ್ಪು ಮಾಡಿದ್ದಳು. ಅದಕ್ಕೆ ಶಿಕ್ಷೆಯೆಂದು ಅವಳನ್ನು ನಾನು ಒಳಗಿಟ್ಟಿದ್ದೇನೆ." ಎಂದಳು ಸುಶೀಲಾ.

× × × ×

ಕನಕನು ಮಾಡಿದ ಅಪರಾಧವೇನೆಂದು ಪ್ರಮೋದನಿಗೆ ಹೊಳೆಯಲಿಲ್ಲ. ಅವನನ್ನು ಕಾಣಲು ಅವಳು ಬರಲಿಲ್ಲ. ಆದರೂ ಚಿಕ್ಕಮ್ಮನ ಮಾತನ್ನು ಮೀರಲಿಲ್ಲ, ನಿರಾಶನಾದ. ಕನಕನನ್ನು ಕಾಣದೆಯೇ ಕಲಕತ್ತೆಗೆ ಹೋಗ ಬೇಕಾಯಿತು.

## ಬಲೆಯಲ್ಲಿ ಚಿಗರೆ!

ಇಂದು ಸಂನ್ಯಾಸಿ ವಸದಲ್ಲಿಲ್ಲ. ಹೊರಗೆ ಹೋಗಿದ್ದಾನೆ. ಗುಡಿಸಲಿನ ಹತ್ತಿರವೇ ಒಂದು ದೊಡ್ಡ ಗಿಡವಿತ್ತು. ನೀರಜಾ ಅಲ್ಲಿ ಕುಳಿತುಕೊಂಡು ಕಪ್ಪಾದ ಮತ್ತು ದಪ್ಪಗಿನ ಒಬ್ಬ ಹೆಣ್ಣುಮಗಳ ಕೂಡ ಮಾತನಾಡುತ್ತಿದ್ದಾಳೆ. ಚಂದ್ರದೇವನ ಪ್ರಕಾಶವು ಅಲ್ಲಿಯವರೆಗೆ ಮುಟ್ಟಲು ಅಸಮರ್ಥವಿದೆ. ಮಂದ ವಾಯು ಬೀಸುತ್ತಿದೆ. ಗಾಳಿ ಗಿಡ-ಮರಗಳ ಹರಿಗಳನ್ನು ಬಾಗಿಸಿ ಮತ್ತಿಷ್ಟು ಕತ್ತಲೆ ಮಾಡಲು ಯತ್ನಿಸುತ್ತಿದೆ.

ಆ ಹೆಣ್ಣುಮಗಳು ಕುಳಿತುಕೊಂಡು ಮನೆತನದ ಮಾತುಗಳನ್ನು ತಿಳಿ-ತಿಳಿಸಿ ಹೇಳುತ್ತಿದ್ದಾಳೆ. ನೀರಜಾ ಸುಮ್ಮನೆ ಕುಳಿತುಕೊಂಡು ಕೇಳುತ್ತಿದ್ದಾಳೆ. ನಡುನಡುವೆ ಒಂದೆರಡು ಪ್ರಶ್ನೆಯನ್ನೂ ಮಾಡುತ್ತಾಳೆ. ಅವಳ ಬಾಯಿಂದ ಸೊಸೆಯ ಹೆಸರನ್ನು ಕೇಳಿ ನೀರಜಾ— " ಬಸೂ, ಇಂದು ನೀನೇಕೆ ಅವಳನ್ನು ನಿನ್ನ ಕೂಡ ಕರೆದುಕೊಂಡು ಬರಲಿಲ್ಲ? " ಎಂದಳು.

" ಅವಳು ಮಾವನ ಮನೆಗೆ ಹೋದಳು. " ವಸುಮತಿ ಎಂದಳು.

ನೀರಜಾ ಹತ್ತಿರ ಬಂದು ಒಂದು ಹಿಡಿ ಹೂವನ್ನು ವಸುಮತಿಗೆ ಕೊಟ್ಟಳು— " ಆಹಾ! ಗಂಡನು ಬಂದರೆ ಹೂವನ್ನು ಒಯ್ಯುವೆನೆಂದು ಹೇಳಿದ್ದಳು. ಆದರೆ ಪಾಪ ಅವಳು ಬರಲೇ ಇಲ್ಲ. ನೀನು ಈ ಹೂವನ್ನು ಅವಳಿಗೆ ಕಳಿಸು. " ಎಂದಳು.

" ಮಗು! ಮನೆಯು ತೊಂದರೆ ನೀಗುವುದೇ ಕಠಿನ. ಹೂವನ್ನು ಅವಳಿಗೆ ಯಾರು ಒಯ್ದು ಕೊಡಬೇಕು? " ವಸು ಎಂದಳು.

ಇಷ್ಟು ಹೊತ್ತಿಗೆ ಗಿಡದ ಮೇಲೆ ಗೂಗೆ ಒದರಿತು. ಗೂಗೆಯ ದನಿಯನ್ನು ಕೇಳಿ ನೀರಜಾ, ವಸುಮತಿಯರಿಬ್ಬರೂ ಬೆಚ್ಚಿಬಿದ್ದರು. ಕುಟೀರದಲ್ಲಿ ಸಂನ್ಯಾಸಿಯೂ ಇರಲಿಲ್ಲವಾದ್ದರಿಂದ ಇಬ್ಬರೂ ಗಾಬರಿಯಾದರು.

“ ನನಗೆ ಹೆದರಿಕೆಯೇ ಇಲ್ಲ; ಆದರೆ ಏಕೋ ಇಂದು ನನಗೂ ಹೆದರಿಕೆ ಯಾಗಹತ್ತಿದೆ. ಒಳ್ಳೇದು, ದೇವರನ್ನು ನೆನೆಯೋಣ. ಸಾಗಲಿ ನಮ್ಮ ಮಾತುಕತೆ.” ನೀರಜಾ ಎಂದಳು.

ಮತ್ತೆ ಅಮಂಗಳ ಸೂಚಕವಾದ ಗೂಗೆಯ ದನಿ ಕೇಳಿತು. ದನಿ ಕೇಳಿ ನೀರಜಾ ತಿರುಗಿ ನೋಡಿದಳು. ಅವಳ ಕಡೆಗೆಯೇ ನಾಲ್ಕು ಮಂದಿ ಬರು ತ್ತಿದ್ದರು. “ ಅಲ್ಲಿ ನೋಡು ಯಾರೋ ಬರುತ್ತಿದ್ದಾರೆ! ” ವಸುಮತಿಗೆ ಹೇಳಿದಳು.

ವಸುಮತಿ ಅವರನ್ನು ನೋಡಿ ಎದ್ದು ನಿಂತಳು; ಮುಂದುವರಿದು ಕೇಳಿ ದಳು— “ ನೀವು ಯಾರು? ” ಉತ್ತರ ಕೊಡದೆಯೇ ಅವರಲ್ಲೊಬ್ಬನು ನೀರಜಾನನ್ನು ಹಿಡಿದ. ಇಬ್ಬರು ವಸುಮತಿಯ ಕಡೆಗೆ ಹೋದರು. ಮತ್ತೇನು ಇಬ್ಬರೂ ಮುಂದುಗಾಣದೆ ಗೊಳೋ ಎನ್ನಹತ್ತಿದರು.

ತುಸು ಹೊತ್ತಿನಲ್ಲಿಯೇ ನಾಲ್ವನೆಯವನು ನೀರಜಾನನ್ನು ಅರಿವೆಯಿಂದ ಮುಚ್ಚಿದ. ಮೊದಲನೆಯವನು ಅವಳನ್ನು ಹೊತ್ತುಕೊಂಡು ಲಗುಬಗೆಯಿಂದ ಓಡಹತ್ತಿದ. ನೀರಜಾ ತಪ್ಪಿಸಿಕೊಳ್ಳಲು ಹಲವಾರು ಪ್ರಯತ್ನಗಳನ್ನು ಮಾಡಿದಳು. ಆದರೆ ಅವನು ಭೀಮನಂತೆ ಬಲವಂತನಾಗಿದ್ದ. ಅವಳ ಆಟ ನಡೆಯಲಿಲ್ಲ. ಉಳಿದ ಮೂವರು ವಸುಮತಿಯನ್ನು ಹಗ್ಗದಿಂದ ಒಂದು ಮರಕ್ಕೆ ಬಿಗಿದರು. ಅವಳನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು. ಸ್ವಲ್ಪ ಸಮಯ ದೊಳಗೆ ನಾಲ್ವರೂ ಮತ್ತೆ ನದಿಯ ದಂಡೆಯ ಮೇಲೆ ಕೂಡಿದರು.

ದಂಡೆಯ ಮೇಲೆ ಒಂದು ಸುಂದರವಾದ ನಾವೆ ಸಿದ್ಧವಾಗಿ ನಿಂತಿತ್ತು. ನಾಲ್ವರೂ ನೀರಜಾನನ್ನು ಹೊತ್ತುಕೊಂಡು ನಾವೆಯನ್ನೇರಿದರು. ಅಂಬಿಗನಿಗೆ ಅದನ್ನು ಬಿಡಲು ಆಜ್ಞಾಪಿಸಿದರು. ನಾವೆ ಸಾಗಿತು. ನೀರಜಾನ ಮೈಮೇಲಿನ ಅರಿವೆಯನ್ನೂ ತೆಗೆದರು. ಬಹಳ ಹೊತ್ತು ಅರಿವೆಯಿಂದ ಬಂಧಿಸಿದ್ದುದರಿಂದ ನೀರಜಾ ಮೈಮರೆತಿದ್ದಳು. ಅರಿವೆಯನ್ನು ಸರಿಸಿ ಅವರು ನೋಡಿದರು. ಹುಡುಗೆ ಮೈಮರೆತು ಬಿದ್ದಿದ್ದಳು. ತಣ್ಣೀರನ್ನು ಸಿಂಪಡಿಸಿ ಉಪಚರಿಸಿದರು. ಅದರಿಂದ ತುಸು ಹೊತ್ತಿನಲ್ಲಿಯೇ ಹುಡುಗೆ ಎಚ್ಚರಾದಳು. ನೀರಜಾ ನಾಲ್ಕು ನಿಟ್ಟಗೂ ನೋಡಿದಳು; ಅವಳಿಗೆ ತನ್ನ ಗುಡಿಸಲು ಕಾಣಿಸಲೇ ಇಲ್ಲ. ಅವಳಿರು ವುದು ಅಪರಿಚಿತ ಸ್ಥಳ. ಸುತ್ತಲೂ ನಿಂತಿರುವ ಜನರೂ ಅಪರಿಚಿತರು.

ಆದರಿಂದ ಅವಳಿಗೆ ಗಾಬರಿ ಗಾಬರಿಯಾಯಿತು. ಕ್ಷಣಮಾತ್ರದಲ್ಲಿಯೇ ಅವಳಿಗೆ ಹಿಂದಿನ ಸಂಗತಿ ನೆನಪಾಯಿತು. ಕೂಡಲೇ ಚೀರಿಕೊಂಡಳು ಒದರುವುದನ್ನು ನೋಡಿ ಒಬ್ಬನು ಅವಳ ಬಾಯನ್ನು ಗಟ್ಟಿಯಾಗಿ ಹಿಡಿದ. "ಇನ್ನು ಒದರಿದರೆ, ಚೀರಿದರೆ ಪ್ರಯೋಜನವೇನು— ನೀನು ಮತ್ತೆ ಚೀರಿದೆಯಾದರೆ ಹೆಡಮುರಿಗೆ ಕಟ್ಟುತ್ತೇವೆ. ಅದಕ್ಕಿಂತ ನೀನು ಸುಮ್ಮನಿರುವುದೇ ಒಳ್ಳೆಯದು." ಎಂದ.

ನೀರಜಾ ವಿಚಾರ ಮಾಡಿದಳು. ಅವನು ಹೇಳುವುದು ಯೋಗ್ಯವೆನಿಸಿತು. ಇಲ್ಲಿ ಇವರಿಗೆ ಬೇಡವೆನ್ನುವವರಾರು. ಇಂಥ ಈ ಪ್ರಸಂಗದಲ್ಲಿ ಕಸುವು ತೋರಿಸಲು ಹೋದರೆ ಲಾಭಕ್ಕಿಂತ ಹಾನಿಯೇ ಆಗುವ ಸಂಭವವಿದೆ. ನೀರಜಾ ನಿರುಪಾಯಳಾಗಿ ದುಃಖಸಾಗರದಲ್ಲಿ ಮುಳುಮುಳುಗಿ ಏಳಹತ್ತಿದಳು.

ರಾತ್ರಿ ಹೆಚ್ಚಾಗಹತ್ತಿತು. ಅಂಬಿಗರನ್ನು ಬಿಟ್ಟು ಎಲ್ಲರೂ ನಿದ್ದೆ ಮಾಡ ಹತ್ತಿದರು. ಒಬ್ಬ ಮನುಷ್ಯನು ಮಾತ್ರ ಕಾವಲು ಮಾಡಲು ಕುಳಿತುಕೊಂಡಿದ್ದ. ಅವನು ಬಹಳ ಹೊತ್ತು ಕುಳಿತುಕೊಂಡಿದ್ದ. ಅದರಿಂದ ಅವನಿಗೂ ಆಲಸ್ಯವು ಬಂದಿತು. ಅವನೂ ಹಾಸಿಗೆ ಹಾಸಿಕೊಂಡು ಗೊರಕೆ ಹೊಡೆಯಹತ್ತಿದ್ದನ್ನು ನೋಡಿದಳು. ನೀರಜಾ ಬಗೆಬಗೆಯ ಆಲೋಚನೆ ಮಾಡತೊಡಗಿದಳು. ಎದ್ದು ಕುಳಿತಳು. ನಾವಿನಲ್ಲಿ ಕುಳಿತುಕೊಂಡು ಅವಳು ಕಿಡಿಕಿಯೊಳಗಿಂದ ನದಿಯ ಶೋಭೆಯನ್ನು ನೋಡಹತ್ತಿದಳು. ಅವಳ ಮನಸ್ಸು ಹೊಯ್ದಾಡುತ್ತಿತ್ತು. ಬಗೆಬಗೆಯ ವಿಚಾರಗಳೇಳಹತ್ತಿದುವು. ಈ ಪಾಪಿಗಳ ಕೈಯೊಳಗಿಂದ ಹೇಗೆ ಪಾರಾಗುವುದು! ಹೀಗೆ ಎಷ್ಟೋ ವಿಚಾರಗಳು ಬಂದುವು. ಆದರೆ ಒಂದೂ ಬಗೆಹರಿಯಲಿಲ್ಲ. ಮೆಲ್ಲಗೆ ಅವಳು ಹತಾಶಳಾಗಹತ್ತಿದಳು. ನೋಡಿದಳು. ಬಿಡುಗಡೆಗೆ ಉಪಾಯವೇ ಉಳಿಯಲಿಲ್ಲ. ಒಬ್ಬಳೇ ಈ ದುಷ್ಟರ ಕೈಯೊಳಗೆ ಬಿದ್ದಿದ್ದಾಳೆ. ನದಿಯೊಳಗೆ ಹಾರಿಕೊಳ್ಳಬೇಕೆಂದು ನಿಶ್ಚಯ ಮಾಡಿಕೊಂಡಳು. ಪರೀಕ್ಷೆಗೆಂದು ಅವಳು ಕಿಡಿಕಿಯಿಂದ ಕಾಲನ್ನು ಹೊರಗೆ ತೆಗೆದಳು.

ದುರ್ಭಾಗ್ಯವಶದಿಂದ ಕಾವಲಿನವನು ಅಷ್ಟು ಹೊತ್ತಿಗೆ ಎದ್ದುಬಿಟ್ಟ. ಅವಳ ಈ ಸ್ಥಿತಿಯನ್ನು ನೋಡಿ ಕೂಡಲೇ ಎದ್ದುನಿಂತ. ಅವಳನ್ನು ಹಿಡಿದು ಜಗ್ಗಿದ. ದುಷ್ಟನ ಕೈ ತಾಕುತ್ತಲೇ ಪಾಪ, ಹುಡುಗೆ ನಡುಗಿದಳು!

# ನಿರಾಶೆ

ನೀರಜಾ ಮಾನಸಿಕ ಕಷ್ಟದಿಂದ ದಣಿದುಹೋಗಿ ನಿದ್ರಾದೇವಿಯ ಸುಕೋಮಲ ತೊಡೆಗಳ ಮೇಲೆ ವಿಶ್ರಮಿಸಹತ್ತಿದಳು. ಯಾರವೋ ಕಠೋರ ಕರಗಳು ಅವಳನ್ನು ಸ್ಪರ್ಶಿಸಿದುವು. ಅದರಿಂದ ಅವಳ ನಿದ್ರಾಭಂಗವಾಯಿತು. ನೋಡಿದಳು, ಸುತ್ತಲೂ ಕತ್ತಲೆಯೇ ಕತ್ತಲೆ ವ್ಯಾಪಿಸಿತ್ತು. ಅವಳು ಮಲಗುವಾಗ ನಾವೆಯ ಒಂದು ಮೂಲೆಯಲ್ಲಿ ದೀಪವೊಂದು ಉರಿಯುತ್ತಿತ್ತು. ಈಗ ಅದೂ ಆರಿದ್ದಿತು. ನಿಸ್ತಬ್ಧವಾದ ರಾತ್ರಿ, ಹುಟ್ಟಿನ ಛಪ್ ಛಪ್ ಸಪ್ಪಳವು ಬಹಳ ಭಯಾನಕವಾಗಿತ್ತು.

ಇಂಥ ಭಯಾನಕ ವೇಳೆಯಲ್ಲಿ ಒಬ್ಬ ಮನುಷ್ಯನು ನೀರಜಾನ ತಲೆಗಿಂಬಿನ ಬಳಿ ಕುಳಿತುಕೊಂಡಿದ್ದಾನೆ. ಅವಳ ನಿದ್ದೆಯನ್ನು ಕೆಡಿಸುತ್ತಿದ್ದಾನೆ. ಕತ್ತಲೆಯಿದ್ದುದರಿಂದ ಅವನ ರೂಪವು ನಿಚ್ಚಳವಾಗಿ ಕಾಣುತ್ತಿದ್ದಿಲ್ಲ. ಅವಳು ಆ ಮನುಷ್ಯನನ್ನು ನೋಡಿ ಚೀರಿಕೊಳ್ಳಲು ಪ್ರಯಾಸಪಡಹತ್ತಿದಳು. ಇದೇ ಹೊತ್ತಿಗೆ ಸುಮ್ಮನಿರಲು ವಿಧಿಸಿದ ಕಟ್ಟಪ್ಪಣೆ ನೆನಪಾಯಿತು. ಇರಲಿ; ಪಾಪ, ಮನಸ್ಸಿನೊಳಗೆ ತಳಮಳಗೊಂಡು ಸುಮ್ಮನಾದಳು. ಅವಳ ತಲೆಯ ಮೇಲೆ ಕೈಯಾಡಿಸಿದವನು ಮೆಲ್ಲಗೆ ಮೃದು ಸ್ವರದಲ್ಲಿ— "ಹೆದರಬೇಡ, ಮೆಲ್ಲಗೆ ಮಾತನಾಡು. ಈ ದುಷ್ಟರ ಬಲೆಯೊಳಗಿಂದ ನಿನ್ನನ್ನು ಬಿಡಿಸಬೇಕೆಂದು ನಿರ್ಣಯ ಮಾಡಿಕೊಂಡಿದ್ದೇನೆ." ಎಂದ.

ಇದೇ ಈಗ ಸ್ವಲ್ಪ ಸಮಯದ ಹಿಂದೆ ನೀರಜಾ ಇನ್ನು ಉಳಿಯುವಂತಿಲ್ಲವೆಂದು ವಿಚಾರ ಮಾಡುತ್ತಿದ್ದಳು; ಆದರೆ ಈಗ ಅವಳು ಕೇಳಿದುದೇನು. ಅವಳ ರಕ್ಷಣೆಗೆ ಒಬ್ಬ ವ್ಯಕ್ತಿ ಎದೆ ತಟ್ಟಿಕೊಂಡು ನಿಂತುದನ್ನು ನೋಡಿ ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ ಅವಳ ಜೀವದೊಳಗೆ ಜೀವ ಬಂದಿತು. ನಿರಾಶೆಯಲ್ಲಿ ಆಶೆ ಸುಳಿಯಿತು. ಆದರೆ ತುಸು ಹೊತ್ತಿನಲ್ಲಿಯೇ ಅವಳ ಆಶೆ ಮುಟ್ಟಿದರೆ ಮುದುಡಿಕೊಳ್ಳುವ 'ಮುಚುಗ'ದಂತೆ ಆಯಿತು. ಮತ್ತೆ ಆಶೆ ಆರಿತು. ಆ ವ್ಯಕ್ತಿಯ ಮಾತುಗಳಲ್ಲಿ ಅವಳಿಗೆ ಅವಿಶ್ವಾಸವು ಕಂಡುಬಂದಿತು.

"ನೀನು ಯಾರು? ಇಲ್ಲಿದ್ದ ಕಾವಲಿನವನು ಎಲ್ಲಿಗೆ ಹೋದ? ನೀನು ನನ್ನನ್ನು ಹೇಗೆ ಪಾರು ಮಾಡುವೆ?" ಸಂಶಯದಿಂದ ನೀರಜಾ ಕೇಳಿದಳು.

"ಅವನ ಬದಲಿ ನಾನೇ ಕಾವಲಿಗೆ ಬಂದಿದ್ದೇನೆ. ಅಂಬಿಗರಲ್ಲಿ ನಾನೂ

ಒಬ್ಬ. ನಿನ್ನ ಹೀನ ಸ್ಥಿತಿಯನ್ನು ನೋಡಿದೆ. ಶಕ್ತಿ ಮೀರಿ ಸಹಾಯ ಮಾಡಿ ನಿನ್ನ ಉದ್ಧಾರ ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದೇನೆ. ನನ್ನ ಹೇಳಿಕೆ ಯಂತೆ ನೀನು ಕೆಲಸ ಮಾಡಿದರೆ, ನಾನು ಉಳಿಸಬಲ್ಲೆ.'' ಅವನು ಉತ್ತರನಿತ್ತ.

'' ನಾನೇನು, ಇಲ್ಲಿದ್ದರೂ ಸಾಯಲು ಸಿದ್ಧಳೆ. ನಿನ್ನ ಕೂಡ ಬಂದರೂ ಸಾಯಲು ಸಿದ್ಧಳೆ. ಹೇಳು ನಾನೇನು ಮಾಡಬೇಕು." ಎಂದಳು ನೀರಜಾ.

'' ಈಗೇನೂ ಬೇಡ. ಓಡಿ ಹೋಗಲು ಮಾತ್ರ ಯತ್ನಿಸಬೇಡ. ನಾನು ಯಾರಾದರೂ ದೊಡ್ಡ ಮನುಷ್ಯರ ನೆರವಿನಿಂದ ನಿನ್ನನ್ನು ಉದ್ಧರಿಸುವೆ. ನಾನು ಹೇಳಿದುದನ್ನು ನಂಬು. ಅದರಂತೆ ಮಾಡು. ಎಂದರೆ ಹಿತವಾಗುವುದು.'' ಎಂದು ಅವನು ಹೇಳಿದ. ಅದಳಿಗೂ ಅನ್ಯ ಮಾರ್ಗ ಉಳಿದಿರಲಿಲ್ಲ. ನಿರು ಪಾಯಳಾಗಿದ್ದಳು. ಅದರಿಂದ ಅವಳು ಒಪ್ಪಿದಳು. ಅಂಬಿಗನೂ ಹೋಗಿ ಹೊರಗೆ ಮಲಗಿಕೊಂಡ.

ಹಾಗೇ ದಿನಗಳ ಮೇಲೆ ದಿನಗಳು ಕಳೆಯಹತ್ತಿದುವು. ನೀರಜಾ ತನ್ನ ಬಿಡುಗಡೆಗಾಗಿ ಹಾತೊರೆಯಹತ್ತಿದ್ದಳು. ಎರಡು-ಮೂರು ದಿನಗಳಲ್ಲಿ ಹಡಗವು ಅಲಾಹಾಬಾದವನ್ನು ಮುಟ್ಟಿತು. ಬಿಡುಗಡೆಯ ಆಶೆ ಹೇಳಿದ ಅಂಬಿಗನು ತಿನ್ನಲು ಏನೇನೊ ತರಲು ಇಳಿದು ಹೋದ. ಎಲ್ಲರೂ ಅವನ ಹಾದಿ ನೋಡು ತ್ತಿದ್ದರು. ಅಂಬಿಗನು ಸಾಮಾನುಗಳನ್ನು ತೆಗೆದುಕೊಂಡು ಬಂದ. ಹಡಗ ವನ್ನೇರಿ ಮೆಲ್ಲಗೆ ನೀರಜಾನಿಗೆ- '' ಇನ್ನು ಹೆದರಿಕೆಯಿಲ್ಲ. ಸ್ವಲ್ಪೇ ಹೊತ್ತಿನಲ್ಲಿ ಒಂದು ಹಡಗವು ಇಲ್ಲಿಗೆ ಬರುವುದು. ಅದರಿಂದ ನಿನ್ನ ಉದ್ಧಾರವಾಗು ವುದು." ಎಂದು ಹೇಳಿದ.

ನೀರಜಾ ಆನಂದದಿಂದ ಕುಣಿದಾಡಿದಳು. ಅವನು ಆ ಹೊತ್ತನ್ನು ನಿರೀಕ್ಷಿಸಹತ್ತಿದಳು. ಹೊತ್ತು ಮುಳುಗಿತು, ಮೋಡಗಳು ಕವಿದುವು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಮಳೆಯೂ ಸುರುವಾಯಿತು ಹಡಗವು ಬರುವುದೊ, ಇಲ್ಲೊ, ಎಂದು ನೀರಜಾ ಸುಮ್ಮನೆ ಕಿಡಕಿಯೊಳಗಿಂದ ದಾರಿ ನೋಡುತ್ತಿದ್ದಳು. ಪ್ರತಿಯೊಂದು ಹಡಗವು ಅವಳ ಹಡಗದ ಹತ್ತಿರ ಹಾಯ್ದು ಹೋಗುತ್ತಿತ್ತು. ಆದರೆ ಹಡಗಗಳೆಲ್ಲವೂ ಭಪ್ ಭಪ್ ಸಪ್ಪಳ ಮಾಡುತ್ತ ಅವಳನ್ನು ಒದೆಯುತ್ತ ಎಲ್ಲಿಗೋ ಬೇರೆ ಕಡೆಗೆ ಹೋಗುತ್ತಿದ್ದುವು. ನೋಡನೋಡುವಷ್ಟರೊಳಗೆ ಒಂದು ಹಡಗವು ಬಂದು ಆ ಹಡಗವನ್ನು ತರುಬಿತು. ಅಂಬಿಗರು ಹೆದರಿದರು.

ಅತ್ತ ಇತ್ತ ಓಡಹತ್ತಿದರು. ಒಬ್ಬ ಭೀಮಕಾಯದ ಮನುಷ್ಯನು ಹಡಗದಲ್ಲಿ ಅಡಿಯಿಟ್ಟ. ಬಂದೂಕಿನ ಸದ್ದಾಯಿತು. ಹಡಗದಲ್ಲಿರಲು ಅಂಬಿಗರಿಗೆ ಎದೆ ಯಾಗಲಿಲ್ಲ. ಜಿಗಿದರು. ಎಲ್ಲರೂ ಕಾಲು ಕರೆದೊಯ್ದ ದಿಕ್ಕಿಗೆ ಓಡಿದರು. ಅವನಿಗೆ ಅಡ್ಡ ಬರುವವನೇ ಹಡಗದಲ್ಲಿ ಉಳಿಯಲಿಲ್ಲ.

ತರುಣನು ಅನಿರ್ಬಂಧವಾಗಿ ನೀರಜಾನ ಹತ್ತಿರ ಹೋದ. ಹಡಗದಲ್ಲಿ ದೀಪವು ಉರಿಯುತ್ತಿತ್ತು. ನೀರಜಾ ಕೂಡಲೇ ಅವನನ್ನು ಗುರುತಿಸಿದಳು. ಉದ್ಧಾರಕ್ಕೆಂದು ಬಂದವನು ಯಾರೂ ಅಲ್ಲ– ಯಾಮಿನೀನಾಥ! ಯಾಮಿನೀ ನಾಥನು ಅವಳನ್ನು ನೋಡಿದ. ಅವನಿಗೆ ಸೋಜಿಗವಾಯಿತು. "ಎಲಾ! ನೀವು ನೀರಜಾ? ಬನ್ನಿರಿ. ಬೇಗನೇ ನನ್ನ ಹಿಂದೆ. ಇನ್ನೊಂದು ಹಡಗಕ್ಕೆ ಹೋಗುವಾ." ಎಂದ.

ದುಷ್ಟರ ಕೈಯೊಳಗಿಂದ ನೀರಜಾ ಪಾರಾದಳು. ಆದರೂ ಅವಳಿಗೆ ಮಾತನಾಡಲು ಬಾಯಿ ಏಳಲಿಲ್ಲ. ಏನೂ ಆಡದೆಯೇ ಸುಮ್ಮನೇ ಯಾಮಿನೀ ನಾಥನ ಕೂಡ ಅವನ ಹಡಗವನ್ನೇರಿದಳು. ಅದೂ ಸಾಗಿತು.

## ಅವಿಶ್ವಾಸ

ಬೀಡಾನ ಉದ್ಯಾನದಿಂದ ಸ್ವಲ್ಪವೇ ದೂರದ ಮೇಲೆ ಒಂದು ಸುಂದರ ವಾದ ಮನೆ. ಇದೇ ಮನೆಯೊಳಗೆ ಒಂದು ಕೋಣೆಯಲ್ಲಿ ಪ್ರಮೋದಬಾಬು ಓದುತ್ತಾನೆ. ಪ್ರಮೋದ ಒಂದು ಕುರ್ಚಿಯ ಮೇಲೆ ಕುಳಿತುಕೊಂಡಿದ್ದಾನೆ. ಮುಂದೆಯೇ ಒಂದು ಮೇಜು ಇದೆ. ಮೇಜಿನ ಮೇಲೆ ಒಂದು ಮೇಣಬತ್ತಿ ಉರಿಯುತ್ತಿದೆ. ಮೇಣಬತ್ತಿಯ ಸುತ್ತಲೂ ಪುಸ್ತಕದ ರಾಸಿ ಬಿದ್ದಿದೆ. ಆದರೆ ಮನಸ್ಸಿನೊಳಗೆ ಯಾವುದೋ ಚಿಂತೆ. ಪುಸ್ತಕವನ್ನೋದುವಾಗ ಏನೋ ನೆನಪಾಗುತ್ತಿದ್ದಿತು; ತೆರೆದ ಪಾನು ಹಾಗೇ ಇರುತ್ತಿತ್ತು. ಒಂದು ಪುಟವನ್ನೂ ಓದುವುದಾಗುತ್ತಿದ್ದಿಲ್ಲ. ಬಿ. ಎ. ಪರೀಕ್ಷೆಯ ದಿನಗಳು ಸಮೀಪಿಸಹತ್ತಿದುವು. ಓದದಿದ್ದರೇನಾಯಿತು? ಓದಲಿ, ಓದದಿರಲಿ, ಪುಸ್ತಕ ಮುಂದಿರದಿದ್ದರೆ ಮನಸ್ಸಿಗೆ ಸಮಾಧಾನವಾಗುತ್ತಿದ್ದಿಲ್ಲ. ಒಂದು ಪುಸ್ತಕವನ್ನೋದಬೇಕೆಂದು ಬಹಳ ಹೊತ್ತು ಪ್ರಯಾಸಪಟ್ಟ. ಆದರೆ ವ್ಯರ್ಥವಾಯಿತು; ಮನಸ್ಸೇ ಆಗಲಿಲ್ಲ. ಆಗ ಪುಸ್ತಕವನ್ನು ಬೇರೆ ಕಡೆಗೆ ಇಟ್ಟ. ಹತ್ತಿರದಲ್ಲಿಯೇ ಒಂದು ಕಾವ್ಯವಿತ್ತು.

ಪುಸ್ತಕವನ್ನು ತೆರೆದ. ಮುಂದಿನ ಪದ್ಯವು ಅವನ ಕಣ್ಣಿಗೆ ಬಿತ್ತು. " Oft in my waking dreams do I live over again that happy hour "— ಅವನಿಗೆ ಮುಂದೆ ಓದುವುದಾಗಲಿಲ್ಲ. ಇದೇ ಹೊತ್ತಿನಲ್ಲಿ ಒಬ್ಬ ಆಳು ಬಂದು– " ಬಾಬು, ಒಬ್ಬ ಸಂನ್ಯಾಸಿ ನಿಮ್ಮನ್ನು ಕಾಣಬೇಕೆನ್ನುತ್ತಾರೆ. ಏನೋ ಕೆಲಸವಿದೆಯಂತೆ. " ಎಂದ.

ಸಂನ್ಯಾಸಿಯ ಹೆಸರನ್ನು ಕೇಳಿದ ಕೂಡಲೇ ಪ್ರಮೋದ ಹೌಹಾರಿದ. ಸಂನ್ಯಾಸಿಯನ್ನು ಅಟ್ಟದ ಮೇಲೆ ಕರೆದುಕೊಂಡು ಬರಲು ಆಜ್ಞಾಪಿಸಿದ. " ಅವರು ಮೇಲೆ ಬರುವಂತೆ ಕಾಣುವುದಿಲ್ಲ. ದಾರಿಯಲ್ಲಿಯೇ ನಿಂತಿದ್ದಾರೆ. ಅಲ್ಲಿಯೇ ನಿಮ್ಮ ಕೂಡ ತುಸುವೇ ಮಾತನಾಡಿ ಹೋಗಬೇಕೆನ್ನುತ್ತಾರೆ. " ಆಳು ಹೇಳಿದ.

ಪ್ರಮೋದನಿಗೆ ಸ್ವಲ್ಪ ಸೋಜಿಗವೆನಿಸಿತು. " ಒಳ್ಳೇದು ನಡೆ. " ಎಂದು ಹೇಳಿ ಸಂನ್ಯಾಸಿಯ ಬಳಿಗೆ ಆಳಿನ ಕೂಡ ಬಂದ.

ಸಂನ್ಯಾಸಿಯ ಹೆಸರನ್ನು ಕೇಳಿದ. ಗುರುತಿಸಲು ಬಹಳ ಹೊತ್ತು ಬೇಕಾಗಲಿಲ್ಲ. ಸಹರ್ಷದಿಂದ ಅವನಿಗೆ ನಮಸ್ಕಾರ ಮಾಡಿದ. " ಇಲ್ಲಿಯವರೆಗೆ ಬಂದು ಈ ದಾಸನ ಮೇಲೆ ದಯ ತೋರಿಸಿದ್ದೀರಿ. ಮನೆಗೆ ಬಂದು ಮನೆಯನ್ನು ಪವಿತ್ರಗೊಳಿಸಬೇಕು. " ಎಂದ.

" ಇಲ್ಲ, ನಿಮ್ಮ ಕೂಡ ನಾನು ಏಕಾಂತದಲ್ಲಿರಬೇಕಾಗಿದೆ. ಕೆಲವು ಗುಪ್ತ ಮಾತುಗಳನ್ನಾಡಬೇಕಾಗಿದೆ. " ಸಂನ್ಯಾಸಿ ಮೆಲ್ಲಗೆ ಎಂದ.

ಹೀಗೆ ಹೇಳಿ ಸಂನ್ಯಾಸಿ ಸಾವಕಾಶವಾಗಿ ಹೊರಟ. ಪ್ರಮೋದನೂ ಅವನ ಹಿಂದೆ ಬೀಡನ ಉದ್ಯಾನದ ವರೆಗೆ ಹೋದ. ಅಲ್ಲಿ ಇಬ್ಬರೂ ಒಂದು ನಿರ್ಜನವಾದ ಸ್ಥಳದಲ್ಲಿ ಕುಳಿತುಕೊಂಡರು.

ರಾತ್ರಿಯ ಮೊದಲನೆಯ ಪ್ರಹರವು ಕಳೆದಿದೆ. ಚಂದ್ರಲೋಕವು ಇಲ್ಲಿಯವರೆಗೆ ಭೂಮಿಗೆ ಪ್ರಕಾಶವನ್ನು ದಾನಮಾಡಲು ಪ್ರಯತ್ನಿಸುತ್ತಿತ್ತು. ಅದು ಈಗ ಆಕಾಶದೊಳಗೆ ವಿಲೀನವಾಯಿತು. ರಜನಿ ಅಂಧಕಾರಮಯವಾಗಿದೆ. ಆ ಅಂಧಕಾರದಲ್ಲಿಯೇ ಅಸಂಖ್ಯ ದೀಪದ ಹುಳುಗಳು ಅತ್ತ ಇತ್ತ ಹಾರಾಡುತ್ತಿವೆ. ಹೊರಗಿನ ದೀಪಮಾಲೆ ದೂರದಿಂದ ನೋಡಿದರೆ ತಾರೆಗಳಂತೆ ಹೊಳೆಯುತ್ತಿದೆ. ಆ ನಿರ್ಜನವಾದ ಸ್ಥಳಕ್ಕೆ ಬಂದಮೇಲೆ, ರಾತ್ರಿಯ ನಿಸ್ತಬ್ಧತೆ

ಯನ್ನು ಭಂಗ ಮಾಡಿ, ಗಂಭೀರ ಸ್ವರದಲ್ಲಿ ಸಂನ್ಯಾಸಿ— “ ಪ್ರಮೋದ ಬಾಬು, ನೀನು ಹೀಗೇ ಏನು ಮಾಡುವುದು ! ” ಎಂದ.

ಸಂನ್ಯಾಸಿಯ ಈ ಪ್ರಶ್ನೆಯನ್ನು ಕೇಳಿ ಪ್ರಮೋದನು ಗಾಬರಿಯಾದ. “ ನಾನೇನು ಮಾಡಿದ್ದೇನೆ ? ” ಎಂದು ಕೇಳಿದ.

ಸಂನ್ಯಾಸಿ ಇನ್ನೂ ಗಂಭೀರನಾದ. ಸಿಟ್ಟಿನ ಸ್ವರದಲ್ಲಿ – “ ಅಧಮನು, ಹೇಳು ನನ್ನ ನೀರಜಾ ಎಲ್ಲಿದ್ದಾಳೆ ? ” ಎಂದ.

“ ನೀರಜಾ ಎಲ್ಲಿದ್ದಾಳೆ ? ” ಇದೇನು ! ವಜ್ರವು ಬಿದ್ದಿದ್ದರೂ ಪ್ರಮೋದನು ಇಷ್ಟು ಹೆದರುತ್ತಿರಲಿಲ್ಲ. ಈ ಮಾತನ್ನು ಕೇಳಿ ಪ್ರಮೋದನಿಗೆ ದಿಗಿಲು ಬಿದ್ದಿತು. ಸಂನ್ಯಾಸಿ ಅಧೀರನಾಗಿ ಮತ್ತೆ – “ ನನ್ನ ನೀರಜಾ ಎಲ್ಲಿ ? ” ಎಂದ

ಪ್ರಮೋದನು ಮೆಲ್ಲ-ಮೆಲ್ಲಗೆ ನಡುಗುವ ದನಿಯಲ್ಲಿ, ಪ್ರತಿಧ್ವನಿಯಂತೆ “ ನೀರಜಾ ಎಲ್ಲಿದ್ದಾಳೆ ? ” ಎಂದ. ಸಂನ್ಯಾಸಿಯ ಸಹನಶಕ್ತಿ ದೂರಾಯಿತು ಈಗ ಅವನಿಗೆ ತಡೆಯುವುದಾಗಲಿಲ್ಲ. ಪ್ರಮೋದನ ಮಾತಿನಿಂದ ಅವನ ತಲೆ ಕಾಯಿತು. ದೊಡ್ಡವಾದ ಕಣ್ಣುಗಳಿಂದ ಕಿಡಿ ಕಾರಹತ್ತಿದ. ಹೆಚ್ಚಾದ ಸಿಟ್ಟಿನಿಂದ ಪ್ರಮೋದನ ಗಂಟಲನ್ನು ಹಿಡಿದು — “ ಅಧಮ ! ನಿನಗೇನೂ ಗೊತ್ತಿಲ್ಲವೆ ? ವಿಶ್ವಾಸಘಾತಕ, ನೀನು ನನ್ನ ನೀರಜಾಳನ್ನು ಎಲ್ಲಿ ಮುಚ್ಚಿಟ್ಟಿರುವೆ ? ಹೇಳು ಈಗಲೆ. ಇಲ್ಲವಾದರೆ ನಿನ್ನ ಪ್ರಾಣ ಹೀರುವೆ. ” ಎಂದು ಗದ್ದರಿಸಿದ.

ಬಹಳ ಕಷ್ಟದಿಂದ ಪ್ರಮೋದನು ಕುತ್ತಿಗೆಯನ್ನು ಬಿಡಿಸಿಕೊಂಡು— “ ಸ್ವಾಮಿ ! ನೀವೇನು ಹೇಳುತ್ತೀರಿ ? ನಿಜವಾಗಿಯೂ ನೀರಜಾಳನ್ನು ಯಾರಾದರೂ ಅಪಹರಿಸಿಕೊಂಡು ಹೋಗಿರುವರೆ ? ನೀರಜಾ........ ನೀರಜಾ........ ಅಯ್ಯೊ........ ಹಾ........ ನೀರಜಾ ! ” ಎಂದು ನಿಟ್ಟುಸಿರು ಬಿಟ್ಟ.

ಪ್ರಮೋದನಿಗೆ ಮುಂದೆ ಮಾತನಾಡುವುದಾಗಲಿಲ್ಲ. ನೀರಜಾಳನ್ನು ಅಪಹರಿಸಿಕೊಂಡು ಹೋದರೆಂಬ ಸಂಗತಿಯು ಬಾಣದಂತೆ ಅವನ ಮನಸ್ಸಿನಲ್ಲಿ ನಾಟಿತು. ಮೈಮೇಲೆ ಪ್ರಜ್ಞೆಯೇ ಉಳಿಯಲಿಲ್ಲ. ಸುತ್ತಲೂ ಕತ್ತಲೆ ಕಾಣಿಸಹತ್ತಿತು. ಕೊನೆಗೆ ಒಂದು ಗಿಡವನ್ನಾಶ್ರಯಿಸಿಕೊಂಡು ಕುಳಿತ. ಸಂನ್ಯಾಸಿಗೆ ಮತ್ತಿಷ್ಟು ಸಂಶಯವೆನಿಸಿತು. ದೋಷವು ಪ್ರಮಾಣಿತವಾಗಿದೆ, ಅದರಿಂದಲೇ

ಭಯದಿಂದ ಪ್ರಮೋದನಿಗೆ ಈ ಅವಸ್ಥೆಯಾಗಿದೆ, ಮುಂತಾಗಿ ಸಂನ್ಯಾಸಿ ಎಣಿಸಿದ. ದೋಷದ ಬಗೆಗೆ ಇದೊಂದು ಆಧಾರವೇ ಸಿಕ್ಕಿತೆನ್ನಿಸಿತು ಆತನಿಗೆ. ಪ್ರಮೋದನ ಮೇಲೆ ಸಂಶಯಪಡಲು ಇನ್ನೂ ಎಷ್ಟೋ ಕಾರಣಗಳಿದ್ದುವು. ಮಾತುಕತೆಯಲ್ಲಿ ಪ್ರಮೋದನು ನೀರಜಾಳನ್ನು ಅನುರಾಗದ ದೃಷ್ಟಿಯಿಂದ ಕಾಣುತ್ತಿದ್ದ. ನೀರಜಾ ಕೂಡ ಪ್ರಮೋದನನ್ನು ಅನುರಾಗದಿಂದ ನೋಡುತ್ತಿದ್ದಳು. ಪ್ರಮೋದನು ಬಂದು ಹೋದಮೇಲೆ ನೀರಜಾ ತನ್ನ ತಂದೆಯ ಮುಂದೆ ಪ್ರಮೋದನನ್ನು ಕುರಿತು ಆಗಾಗ್ಗೆ ಮಾತು ತೆಗೆಯುತ್ತಿದ್ದಳು. ಸಂನ್ಯಾಸಿ ಹೊರಗೆ ಹೋಗುವ ಸಂಗತಿ ಪ್ರಮೋದನ ಹೊರತಾಗಿ ಬೇರೆ ಯಾರಿಗೂ ಗೊತ್ತಿದ್ದಿಲ್ಲ. ಇವೆಲ್ಲ ಹೀಗಿರುವಾಗ ಸಂನ್ಯಾಸಿಯ ದೃಷ್ಟಿಯಲ್ಲಿ ಪ್ರಮೋದನು ದೋಷಿಯೆನ್ನುವುದು ನ್ಯಾಯಸಂಗತವಾದ ಮಾತು. ಇವಲ್ಲದೆ ಇಂದು ಪ್ರಮೋದನು ಅರ್ಧ ಮೂರ್ಛಿತ ಸ್ಥಿತಿಯಲ್ಲಿ ಕುಳಿತುಕೊಂಡ. ಇದರಿಂದ ಸಂನ್ಯಾಸಿಯ ಸಂದೇಹವು ಮತ್ತಿಷ್ಟು ಹೆಚ್ಚಿತು.

"ನೀರಜಾ ಎಲ್ಲಿದ್ದಾಳೆ? ಸುಮ್ಮನೆ ಅವಳಿರುವ ಸ್ಥಳವನ್ನು ಹೇಳು. ನಾನು ನಿನ್ನನ್ನು ಕ್ಷಮಿಸುವೆ. ಇಲ್ಲದಿದ್ದರೆ ಇಂದು ನಿನ್ನನ್ನು ಬಿಡುವುದಿಲ್ಲ." ಸಂನ್ಯಾಸಿ ಉಗ್ರರೂಪವನ್ನು ಧಾರಣ ಮಾಡಿ ಎಂದ.

"ನನ್ನ ಮಾತಿನ ಮೇಲೆ ನಿಮಗೆ ವಿಶ್ವಾಸವಾಗುವುದಿಲ್ಲ. ಆದರೆ ನೀರಜಾನ ಸುದ್ದಿಯನ್ನು ಕೇಳಿ ಯಾರಿಗೆ ಹೆಚ್ಚು ಕಷ್ಟವಾಗಿದೆ? ನಿಮಗೊ ಅಥವಾ ನನಗೊ– ಇದು ದೇವರಿಗೇ ಗೊತ್ತು." ಪ್ರಮೋದನು ಸಚೇತನಾಗಿ ಹೇಳಿದ. ಸಂನ್ಯಾಸಿಗೆ ಇದು ನರಿಬರಲಿಲ್ಲ. "ಈಗ ಹೆಚ್ಚೇಕೆ ಬಡಬಡಿಸುತ್ತಿ? ನೀರಜಾ ಎಲ್ಲಿದ್ದಾಳೆ, ಇಷ್ಟೇ ಹೇಳು" ಎಂದ ಸಂನ್ಯಾಸಿ.

ಪ್ರಮೋದ– "ಅವಳಿರುವ ಸ್ಥಳವು ನಿಜವಾಗಿಯೂ ನನಗೆ ತಿಳಿಯದು. ನಾನು ನಿರಪರಾಧಿ. ನಿಮ್ಮಲ್ಲಿಗೆ ಬಂದಿದ್ದೆನಲ್ಲ, ಅದರ ಮರುದಿನವೇ ಅಲಾಹಾಬಾದಕ್ಕೆ ಹೊರಟು ಬಂದೆ. ಆಗಿನಿಂದ ನಿಮ್ಮ ಅಡವಿಯ ಮಾತೇ ನನಗೆ ಗೊತ್ತಿಲ್ಲ."

ಸಂನ್ಯಾಸಿ– "ಅಡವಿಯ ಮಾತು ಗೊತ್ತಿಲ್ಲವೆ? ನೀರಜಾ ಎಲ್ಲಿದ್ದಾಳೆ?"

ಪ್ರಮೋದನೂ ಬಹಳ ಪರಿಯಿಂದ ನೋಡಿದ. ಸಂನ್ಯಾಸಿಯ ಸಂದೇಹವನ್ನು ನಿವಾರಣೆ ಮಾಡುವುದು ಕಠಿನವೆನಿಸಿತು. ಅವನು ತಾನು ನಿರ್ದೋಷಿ

ಯೆಂದು ಹೇಳಲು ಪ್ರಯತ್ನಿಸಿದಂತೆ ಅವನ ಸಂಶಯವು ಬೆಳೆಯುತೊಡಗಿತು. ಪ್ರಮೋದನ ಪ್ರತಿಯೊಂದು ಮಾತಿಗೂ ಸಂನ್ಯಾಸಿ ಸಿಟ್ಟಾಗುತ್ತಿದ್ದ.

ಇರಲಿ. ಪ್ರಮೋದನಿಗೆ ಹಂಚಿಕೆ ಹೊಳೆಯಲಿಲ್ಲ. "ನಾನೇ ನೀರಜಾ ನನ್ನು ತಂದಿರುವೆನೆನ್ನುವಿರಾ? ಹಾಗಾದರೆ ಬಂದು ನನ್ನ ಮನೆಯಲ್ಲಿ ನೋಡಿ ಕೊಳ್ಳಿರಿ. ಮನೆಯನ್ನು ಬಿಟ್ಟು ನಾನು ಮತ್ತೆಲ್ಲಿ ಇಡಬೇಕು? ದೇವರ ಸಾಕ್ಷಿಯಾಗಿಯೂ ನೀರಜಾ ಇರುವ ಸ್ಥಳ ನನಗೆ ಗೊತ್ತಿಲ್ಲ." ಎಂದ ಪ್ರಮೋದ.

ಸಂನ್ಯಾಸಿ— "ನಾನೇನೂ ಹುಂಬನಲ್ಲ. ಸರಿಯಾದ ಸುದ್ದಿ ನನಗೆ ಹತ್ತಿದೆ. ಅದಕ್ಕಾಗಿಯೇ ನಾನು ಬಂದಿರುವುದು. ನೀನು ಅವಳನ್ನು ಈ ಮನೆ ಯಲ್ಲಿಟ್ಟಿಲ್ಲ. ಇಲ್ಲಿ ಇಟ್ಟರೆ ಕೂಡಲೇ ಗುಂಗಾಡದ ಕೋಣೆ (ಸೆರೆಮನೆ) ಯನ್ನು ಕಾಣಬೇಕಾಗುವುದೆಂಬುದನ್ನು ನೀನು ಬಲ್ಲೆ. ಹೇಳು, ಅವಳನ್ನೆಲ್ಲಿಟ್ಟಿರುವೆ?"

ಪ್ರಮೋದನು ಸಿಟ್ಟಿನಿಂದ ಕಿಡಿಕಿಡಿಯಾದ. ಮುಂದುಗಾಣದಾದ. ಸುಮ್ಮನೆ ನಿಂತುಬಿಟ್ಟ. ಮತ್ತೆ ಯಾರಾದರೂ ಆಗಿದ್ದರೆ, ಪ್ರಮೋದನ ಕ್ರೋಧವೇನು ಮಾಡುತ್ತಿತ್ತೊ ಏನೊ; ಆದರೆ ಸಂನ್ಯಾಸಿಯೆಂದೊ, ಅಥವಾ ನೀರಜಾನ ತಂದೆಯೆಂದೊ, ಅವನು ಸಿಟ್ಟನ್ನು ಹಿಡಿತದಲ್ಲಿ ಇಟ್ಟುಕೊಂಡು ಮೌನವಾಗಿ ನಿಂತುಕೊಂಡಿದ್ದ.

"ನೀನು ಸುಮ್ಮನೆ ಅವಳನ್ನು ತೋರಿಸದಿದ್ದರೆ, ನಿನ್ನ ನಿನ್ನ ಅದ ನ್ನೇನು ಹೇಳಲಿ!" ಎಂದ ಸಂನ್ಯಾಸಿ.

ಈಗ ಪ್ರಮೋದನಿಗೆ ಸುಮ್ಮನಿರುವುದಾಗಲಿಲ್ಲ. ಅವನ ತಲೆಯೂ ಕಾಯಿತು— "ಮಹನೀಯರೆ, ನೀರಜಾ ಎಲ್ಲಿರುವಳೊ, ನನಗೆ ಗೊತ್ತಿಲ್ಲ. ದೇವರಾಣೆಯಾಗಿಯೂ ಈ ಸಂಗತಿ ನನಗೆ ತಿಳಿಯದು. ನಿಮಗೆ ನನ್ನ ಮಾತಿ ನಲ್ಲಿ ನಂಬುಗೆಯಾಗದಿದ್ದರೆ ನಿಮ್ಮ ಮನಸ್ಸಿಗೆ ಬಂದಂತೆ..........." ಸಿಟ್ಟಿನಲ್ಲಿ ಎಂದ ಪ್ರಮೋದ.

"ಸುಮ್ಮನಿರು ಸಾಕು. ಹೆಚ್ಚು ಬೊಗಳಬೇಡ. ನಿನ್ನ ಪ್ರತಿಯೊಂದು ಮಾತಿಗೂ ನನ್ನ ರಕ್ತವು ಕುದಿಯುತ್ತಿದೆ. ನರಾಧಮ! ಪಾಪಿ! ರಾಕ್ಷಸ!! ನಿನ್ನ ರಕ್ತದ ಕಾಲುವೆ ಹರಿಸಿಬಿಟ್ಟೇನು? ನಿನ್ನನ್ನು ಗುದ್ದಿ ಕೊಂದೇನು!" ಎಂದು ನಡುವೆಯೇ ಬಾಯಿ ಹಾಕಿ ಸಂನ್ಯಾಸಿ ಸಿಟ್ಟಿನಿಂದ ಒದರಾಡಿದ. ಇಷ್ಟು ಮಾತನಾಡಿ ಕ್ರೋಧದ ಆವೇಶದಲ್ಲಿ ಮುಂದೆ ಸಾಗಿದ; ಆದರೆ ಇನ್ನೂ

ಮೂರು-ನಾಲ್ಕು ಹೆಜ್ಜೆ ಮುಂದೆ ಹೋಗಿದ್ದಿಲ್ಲ, ತಿರುಗಿದ. ಒಮ್ಮೆ ಆಕಾಶದ ಕಡೆಗೆ, ಇನ್ನೊಮ್ಮೆ ನಾಲ್ಕೂ ನಿಟ್ಟಿಗೂ ಕತ್ತಲೆಯತ್ತ ನೋಡಿ, ಪ್ರಮೋದನ ವಿಸ್ಮಯವನ್ನು ಹೆಚ್ಚಿಸಿ— " ಇಲ್ಲ, ನರಾಧಮ! ನಿನ್ನ ಅಪವಿತ್ರ ರಕ್ತದಿಂದ ನನ್ನ ಈ ಕೈಗಳನ್ನು ಕಲಂಕಿತ ಮಾಡಲಾರೆ. ನಿನ್ನನ್ನು ನಾನು ಕೊಲ್ಲುವು ದಿಲ್ಲ. ನಿನ್ನನ್ನು ನಾನು ಕೊಂದರೆ ನೀರಜಾನ ಸುದ್ದಿಯನ್ನು ನನಗೆ ಯಾರು ಹೇಳುವನು? ಕೊಂದರೆ ನಿನಗೆ ಕೊಡುವ ಶಿಕ್ಷೆ ಕಡಮೆಯಾಗುವುದು. ಒಟ್ಟಾರೆ ನಿನ್ನನ್ನು ಕೊಂದರೆ ನನಗೆ ಕಲಂಕವೇ ಹತ್ತುವುದು. ನಾನು ನ್ಯಾಯಾಲಯ ದಲ್ಲಿ ನಿನ್ನ ವಿರುದ್ಧ ನಿಲ್ಲುವೆ. ನಿನಗೆ ಶಿಕ್ಷೆ ಮಾಡಿಸುವೆ. ಪೃಥ್ವಿಯ ಮೇಲೆ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ನಿನ್ನ ಹೆಸರಿನಿಂದ— ನಿನ್ನ ವಿಶ್ವಾಸಘಾತುಕತನದ ಬಗ್ಗೆ ಡಂಗುರ ಹೊಡೆಸುವೆ. ಕೇಳಿದವರೆಲ್ಲರು ನಿನ್ನನ್ನು ಕಂಡರೆ ಕರಾಳ ಸರ್ಪದಂತೆ ತಿರಸ್ಕರಿಸುವರು; ಸರಿದು ನಿಲ್ಲುವರು. ನಿನ್ನನ್ನು ನಾನು ಕೊಲ್ಲುವುದಿಲ್ಲ. ಕೊಂದರೆ ನಿನ್ನ ಪಾಪಕ್ಕೆ ಸಿಗಬೇಕಾದಷ್ಟು ಫಲವು ಸಿಗಲಾರದು. " ಎಂದ ಇಷ್ಟು ಹೇಳಿ ಸಂನ್ಯಾಸಿ ಅಲ್ಲಿಂದ ಹೊರಟು ಹೋದ.

ಅಂಥ ಕತ್ತಲೆಯ ರಾತ್ರಿಯಲ್ಲಿ ಮೇಲಿನ ಮಾತುಗಳು ಪ್ರಮೋದನ ಕಿವಿಗೆ ವಜ್ರದಂತೆ ತಾಗಿದುವು. ಸಂನ್ಯಾಸಿ ಹೊರಟುಹೋದ. ಪ್ರಮೋದನು ವಜ್ರಾಘಾತಕ್ಕೆ ಸಿಕ್ಕವರಂತೆ ಬಹು ಹೊತ್ತು ಅಲ್ಲಿಯೇ ನಿಂತುಕೊಂಡಿದ್ದ. ಅವನಲ್ಲಿ ವಿಚಾರ ಮಾಡುವ ಶಕ್ತಿ ಬಂದಾಗ ಸಂನ್ಯಾಸಿಯ ಮಾತುಗಳನ್ನು ಕುರಿತು ವಿಚಾರ ಮಾಡಹತ್ತಿದ. ಈ ಸಂಕಟದೊಳಗಿಂದ ಪಾರಾಗುವ ಬಗೆ ಹೇಗೆ? ಚಂಚಲವಾದ ಮನಸ್ಸು ಬೇರೆಯವರ ಮುಂದೆ ಇದನ್ನು ಹೇಳಲು ಹಾತೊರೆಯಹತ್ತಿತು. ಆದರೆ ಈ ಮಾತುಗಳನ್ನು ಯಾರಿಗೆ ಹೇಳ ಬೇಕು? ಕಂಡಕಂಡವರ ಮುಂದೆಲ್ಲ ಈ ಮಾತು ಹೇಳಲು ನಾಚಿಕೆ ಬರುತ್ತಿದೆ. ಹುಡುಕಿದ. ಯಾಮಿನೀನಾಥನ ವಿನಾ ಅವನಿಗೆ ಯಾರೂ ಯೋಗ್ಯರೆನಿಸಲಿಲ್ಲ. ಎಷ್ಟೆಂದರೂ ಯಾಮಿನಿ ಪ್ರಮೋದನ ಜೀವದ ಗೆಳೆಯ. ಮೇಲಾಗಿ ಯಾಮಿನೀ ನಾಥನೂ ಆ ಅಡವಿಗೆ ಹೋಗಿದ್ದ. ನೀರಜಾನನ್ನು ಅವನೂ ನೋಡಿದ್ದ. ಹೀಗೆಲ್ಲ ಆಗಿ ಅವನಿಗೆ ಎಲ್ಲ ಸಂಗತಿಯೂ ಗೊತ್ತಿದೆ. ಅದರಿಂದ ಅವನಿಗಿಂತ ಹೆಚ್ಚಾಗಿ ಪರಾಮರ್ಶ್ಯವನ್ನಾರು ಮಾಡುವರು? ಇದನ್ನೆಲ್ಲ ಪ್ರಮೋದನು ವಿಚಾರ ಮಾಡಿಕೊಂಡು, ಅಂಥ ಕಗ್ಗತ್ತಲೆಯ ರಾತ್ರಿಯಲ್ಲಿಯೇ ಹೊರಟ.

# ಅಯ್ಯೋ ! ಇದೇನು ?

ಯಾಮಿನೀನಾಥ ತರುಣ. ಅವನಿಗೆ ಇದೀಗ ೨೪ ವರುಷ. ಭವಾನೀಪುರವಾಸಿ, ಶ್ರೀಮಂತ. ಸೈ-ಕೈ ತೆಳ್ಳಗೆ, ಮುಖಾಕೃತಿಯಾದರೂ ಸರ್ವಾಂಗ ಸುಂದರವಾಗಿಲ್ಲ. ಆದರೆ ಮೈಬಣ್ಣ ಕೆಂಪು; ನೋಡಲಿಕ್ಕೊಂದು ಒಂದು ಬಗೆಯಿಂದ ಚೆಲುವನಾಗಿ ಕಾಣುತ್ತಾನೆ. ಹಣೆ ಅಷ್ಟೊಂದು ಹರವಾಗಿಲ್ಲ, ಆದರೂ ಸಣ್ಣದಿಲ್ಲ. ದೊಡ್ಡ ದೊಡ್ಡ ಕಣ್ಣು, ಆದರೆ ನೋಟ ಸರಳವಲ್ಲ. ಇದರಿಂದಷ್ಟು ಕಣ್ಣಿನ ಸೌಂದರ್ಯವು ಕಡಿಮೆಯಾಗಿದೆ.

ಅವ್ವ, ಚಿಕ್ಕವ್ವ, ತಂಗಿಯರ ವಿನಾ ಯಾಮಿನೀನಾಥನ ಮನೆಯಲ್ಲಿ ಮತ್ತೆ ಯಾರೂ ಇಲ್ಲ. ಇನ್ನೂ ಯಾಮಿನಿ ಹದಿನೇಟು ವರುಷದವನಿದ್ದ; ಆಗ ಅವನ ತಂದೆ ತೀರಿಕೊಂಡ ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಯಾಮಿನಿ ಸ್ವತಂತ್ರನಾದ. ಕೈತುಂಬ ಹಣವೂ ಸಿಕ್ಕಿತು. ಎಂದಮೇಲೆ ಕೇಳುವುದೇನು ! 'ಹದಿನೆಂಟು ವರುಷದವರಿಗೆ ಹಿರಿತನ ಕೊಡಬಾರದು, ಮುದುಕರಿಗೆ ಹೇಲಾಟ ಹತ್ತಬಾರದು' ಎಂಬ ಹಿರಿಯರ ಮಾತು ಸುಳ್ಳಲ್ಲ ! ಸಾಲೆಗೆ ಶರಣು ಹೊಡೆದ. ಪುಸ್ತಕಗಳನ್ನು ಕಟ್ಟಿ ಕಪಾಟಿನಲ್ಲಿರಿಸಿದ. ಹಲವು ಮುಖಸ್ತುತಿ ಪ್ರವೀಣರ ಕೂಡ ಗೆಳೆತನ ಮಾಡಿದ. ಅಂತೂ ಅವನು ತನ್ನ ಜೀವನವನ್ನು ಸುಖದಿಂದಲೇ ನೂಕಹತ್ತಿದ. ಅವನು ಉಚಿತ ಅನುಚಿತ ಯಾವುದೇ ಕೆಲಸ ಮಾಡಲಿ, ಅವನ ಕೈ ಹಿಡಿಯುವವರೇ ಇದ್ದಿಲ್ಲ ಬಾಲ ಬಡಿಯುವ ಜನರು ಬೆನ್ನು ಹತ್ತಿಯೇ ಇರುತ್ತಿದ್ದರು. ಅವನು ಮಾಡಿದುದಕ್ಕೆ, ಹೇಳಿದುದಕ್ಕೆ ತಲೆ ಹಾಕುತ್ತಿದ್ದರು, ಸೈ, ಭಲೆ, ಎನ್ನುತ್ತಿದ್ದರು, ಪ್ರೋತ್ಸಾಹಿಸುತ್ತಿದ್ದರು.

ಆದರೆ ಅವರ ಕಪಟತನವು ಯಾಮಿನಿಗೆ ಗೊತ್ತಿದ್ದಿಲ್ಲವೆಂದಲ್ಲ. ಅವನು ಬೇಕಾದಷ್ಟು ಬುದ್ಧಿವಂತನಿದ್ದ; ಬುದ್ಧಿಯಿದ್ದರೂ ಬುದ್ಧಿಗೇಡಿಯಂತಿರುತ್ತಿದ್ದ. ಯಾಮಿನೀನಾಥನ ಕೈ ಬಲು ಸಡಿಲು. ಸೈ-ಸೈ ಎನ್ನಿಸಿಕೊಳ್ಳಲು, ಕಪಟಿ ಜನರಿಂದ ಹೊಗಳಿಸಿಕೊಳ್ಳಲು, ಅವರನ್ನು ಸಂತುಷ್ಟಗೊಳಿಸಲು, ಬಂಧು-ಬಳಗದವರಿಂದ ಹೊಗಳಿಸಿಕೊಳ್ಳಲು, ಕೈಗೆ ಬಂದಂತೆ ವೆಚ್ಚ ಮಾಡುತ್ತಿದ್ದ. ಅವನು ಸರಕಾರಕ್ಕೂ ದಾನ ಕೊಡಲು ಹಿಂಜರಿಯುತ್ತಿದ್ದಿಲ್ಲ.

ತಂದೆ ಮಾಡಿಟ್ಟ ಹಣವೇ ಸಾಕಷ್ಟಿತ್ತು. ಅದೂ ಅಲ್ಲದೆ ದೊಡ್ಡಮ್ಮ ತೀರಿಕೊಂಡರೆ ಅಯ್ದು ಲಕ್ಷ ರೂಪಾಯಿ ಕೈಗೆ ಹತ್ತುವ ಆಶೆಯೂ

ಇತ್ತು. ಇದರಿಂದಲೇ ಅವನ ಕೈ ಇಷ್ಟು ಸಡಿಲು ಇತ್ತು. ನಾಲ್ಕು ವರುಷ ದಲ್ಲಿಯೇ ತಂದೆಯ ಹಣವು ಕಡಿಮೆಯಾಗುತ್ತ ನಡೆಯಿತು. ಅದರಿಂದ ಯಾಮಿನೀನಾಥನು ಈಗ ಕಣ್ಣು ತೆರೆದ, ಬುದ್ಧಿ ಬಂದಿತು. ತನ್ನ ದುಂದು ಗಾರಿಕೆಯನ್ನು ನೋಡಿ ಹಳಹಳಿಸಹತ್ತಿದ. ಈಗ ದಾನಧರ್ಮವು ಕಡಿಮೆ ಯಾಯಿತು. ಹೊತ್ತು ಸಿಕ್ಕರೆ ತನ್ನ ಮಿತ್ರರ ಕುತ್ತಿಗೆಯನ್ನಾದರೂ ಕೊಯ್ದು ರೂಪಾಯಿ ವಸೂಲು ಮಾಡಲು ಹಿಂದೆಮುಂದೆ ನೋಡುವುದಿಲ್ಲ.

ಯಾಮಿನೀನಾಥನ ತಂದೆ ಜೀವಿಸಿದ್ದಾಗಲೇ ಪ್ರಮೋದನ ಪರಿಚಯ ವಾದದ್ದು. ಕಾಲೇಜದಲ್ಲಿ ಪ್ರಮೋದ ಯಾಮಿನೀನಾಥರಿಬ್ಬರೂ ಕೂಡಿಯೇ ಓದುತ್ತಿದ್ದರು ಇಬ್ಬರೂ ಗೆಳೆಯರಾದರು; ಕಾಲೇಜನ್ನು ಬಿಟ್ಟರೂ ಇಬ್ಬರ ಮೈತ್ರಿ ತಪ್ಪಲಿಲ್ಲ. ಬಹುತೇಕವಾಗಿ ಪ್ರಮೋದನಿಗೆ ಆಗಾಗ ರೊಕ್ಕಣ ಕೊಡಲು, ಅವನನ್ನು ಕಾಣಲು ಹೋಗುತ್ತಾನೆ. ಪ್ರಮೋದನಾದರೂ ಶ್ರೀಮಂತ ಬಾಬೂ ತಾರಾಕಾಂತರ ಆಸ್ತಿಗೆ ಉತ್ತರಾಧಿಕಾರಿಯಾಗುವವನಿದ್ದ. ಅದರಿಂದಲೇ ಪ್ರಮೋದನು ಈಗಿನಿಂದಲೇ ಯಾಮಿನೀನಾಥನನ್ನು ತನ್ನ ಸಹವಾಸದಲ್ಲಿಟ್ಟು ಕೊಂಡಿದ್ದ. ಎಲ್ಲ ಪ್ರಸಂಗದಲ್ಲಿಯೂ ಒಬ್ಬರಿಗೊಬ್ಬರು ಕೂಡಿ ವಿಚಾರ ಮಾಡುವರು. ಮುಂದೆ ಮುಂದೆ ಇಬ್ಬರಲ್ಲಿಯೂ ವಿಶೇಷ ಪ್ರಕಾರದ ಗೆಳೆತನವು ಕೂಡಿತು. ಆದರೆ ಇದೀಗ ನೀರಜಾ ಯಾಮಿನೀನಾಥನ ಮನೆಗೆ ಬಂದಾಗಿ ನಿಂದ ಇಬ್ಬರೂ ಭೆಟ್ಟಿ ಕೂಡ ಆಗಿದ್ದಿಲ್ಲ. ಇಂದು ಪ್ರಮೋದನು ಬಂದು ನೋಡಿದ. ಯಾಮಿನೀನಾಥನು ಮನೆಯಲ್ಲಿದ್ದಿಲ್ಲ. ಎಲ್ಲಿಗೋ ಅಗತ್ಯ ಕೆಲಸ ಕ್ಕಾಗಿ ಹೋಗಿದ್ದಾನೆಂದೂ ಶೀಘ್ರದಲ್ಲಿಯೇ ತಿರುಗಿ ಬರುವನೆಂದೂ ತಿಳಿದು ಬಂದದ್ದರಿಂದ ಅವನ ಕೋಣೆಯೊಳಗೆ ಹೋಗಿ ಕುಳಿತುಕೊಂಡ.

ಯಾಮಿನೀನಾಥನ ಬಗ್ಗೆ ಹೆಚ್ಚಿಗೆ ಇಲ್ಲಿ ಹೇಳುವುದು ಅನಾವಶ್ಯಕ. ಆದರೂ ಒಂದೆರಡು ಮಾತು ಹೇಳುವೆವು. ಪರದೇಶದ ಆಚಾರ-ವಿಚಾರ ಗಳೆಂದರೆ ಯಾಮಿನೀನಾಥನು ಹೇಸಿಕೊಳ್ಳುತ್ತಿದ್ದ. ಇಂಗ್ಲೀಷು ಭಾಷೆಯ ಸಂಪರ್ಕವೇ ಬೇಡವೆಂದು ಅವನು ಓದುವುದನ್ನೂ ನಿಲ್ಲಿಸಿದ್ದ. ಆದರೆ ಈಗ ಅವನ ಕೋಣೆ ಪಾಶ್ಚಿಮಾತ್ಯರ ಪದ್ಧತಿಯಂತೆ ಶೃಂಗರಿಸಲ್ಪಟ್ಟಿತ್ತು. ನಡುವೆ ಮೇಜೂ, ಅದರ ಸುತ್ತಲೂ ಗಾದಿಯ ಕುರ್ಚಿಗಳೂ ಇದ್ದುವು. ಈ ಕೋಣೆ ಯಲ್ಲಿಯೇ ಯಾಮಿನಿ ತನ್ನ ಗೆಳೆಯರ ಕೂಡ ಆಮೋದ ಪ್ರಮೋದ ಮಾಡು ತ್ತಾನೆ. ಕೆಳಗೆ ನೆಲದ ಮೇಲೆ ಕುಳಿತರೆ ಕಷ್ಟವಾಗುವುದಲ್ಲವೇ? ಅಂತೆಯೇ

ವಿದೇಶೀ ಪದ್ಧತಿಯನ್ನು ಸ್ವದೇಶಾಭಿಮಾನಿ ಯಾರೂ ಅನುಸರಿಸಿದಂತೆ ಇತ್ತು.

ಮೇಜಿನ ಮೇಲೆ ಒಂದು ಹೂವಿನ ಹೂಜೆಯಿತ್ತು. ಆ ಹೂಜೆಯ ಎರಡೂ ಮಗ್ಗುಲಿಗೆ ಎರಡು ಎಲ್ಬಮ್ ಇದ್ದುವು. ಒಬ್ಬನೇ ಕುಳಿತುಕೊಂಡು ಏನು ಮಾಡಬೇಕು? ಎಲ್ಬಮ್ ತೆಗೆದುಕೊಂಡು ಫೋಟೊ ನೋಡಹತ್ತಿದ. ಅವರಲ್ಲಿ ಯುರೋಪದ ಅರಸ-ಅರಸಿಯರ ಚಿತ್ರಗಳಿದ್ದುವು. ಮತ್ತೆ ಅನೇಕ ಮಂದಿ ಸುಂದರಿಯರೂ, ವಿಖ್ಯಾತರೂ ಆದ ಸ್ತ್ರೀ-ಪುರುಷರ ಫೋಟೊ ಕೂಡ ಇದ್ದುವು. ಅವನ್ನು ಲಕ್ಷ್ಯಕೊಟ್ಟು ನೋಡಹತ್ತಿದ. ಆದರೆ ಅವನಿಗೆ ಅವರ ಸೌಂದರ್ಯದಲ್ಲಿ ಒಂದು ಕೊರತೆ ಕಂಡುಬರಹತ್ತಿತು. ಅದೊಂದು ವಿಶಿಷ್ಟ ಬಗೆಯ ಸೌಂದರ್ಯದ ಭಾವವು ಯಾರಲ್ಲಿಯೂ ಸಿಗಲಿಲ್ಲ; ಯಾಕೆಂದರೆ ಆ ಭಾವವು ಯಾವ ಚಿತ್ರದಲ್ಲಿಯೂ ಇದ್ದಿಲ್ಲ. ಅದನ್ನು ಪ್ರಮೋದನೊಬ್ಬನೇ ಮನಸ್ಸಿನೊಳಗಿನ ಒಂದು ಜೀವಂತ ಚಿತ್ರದಲ್ಲಿ ಈ ಮೊದಲು ಕಂಡಿದ್ದ. ಪ್ರಮೋದನು ಉದ್ವಿಗ್ನನಾಗಿ ಸುಪ್ರಸಿದ್ಧ ಸುಂದರಿಯಾದ 'ಮೇರಿ'ಯ ಚಿತ್ರವನ್ನು ಹುಡುಕಹತ್ತಿದ. ಆದರೆ ಅವಳ ಚಿತ್ರವು ಅವನಿಗೆ ಎಲ್ಬಮ್ಮಿನಲ್ಲಿ ಸಿಗಲಿಲ್ಲ. ಇನ್ನೊಂದು ಎಲ್ಬಮ್ ಇದ್ದಿತು. ಅದರೊಳಗೆ 'ಮೇರಿ'ಯ ಚಿತ್ರವು ಕಣ್ಣಿಗೆ ಬಿದ್ದಿತು. ಯಾವ ರೂಪಕ್ಕೆ ರಾಜ್ಯಸಿಂಹಾಸನಗಳಾಗಿದ್ದುವೋ, ಯಾವ ರೂಪದ ಜ್ಯೋತ್ಸ್ನಾಮಯವಾದ ತರಳವಾದ ತೆರೆಗಳಲ್ಲಿ ಎಷ್ಟೋ ಪದಾಧಿಕಾರಿಗಳು ಮುಳುಗಿ ಗುಟುಕು ನೀರು ಕುಡಿದರೋ, ಯಾವ ರೂಪದ ಪ್ರತಿಮೆ ಪೃಥ್ವಿಯ ಮೇಲೆ ಇಂದಿಗೂ ವಿರಾಜಿಸುತ್ತಿರುವುದೋ, ಆ ಮೇರಿಯ ಮುಖದಲ್ಲಿ ಪ್ರಮೋದನ ಹೃದಯದಲ್ಲಿ ವಾಸವಾಗಿದ್ದ ಆ ಸೌಂದರ್ಯವು ಇದ್ದಿತು. ಪ್ರಮೋದನು ಅದನ್ನು ಏಕಾಗ್ರಚಿತ್ತದಿಂದ ನೋಡಲಾರಂಭಿಸಿದ. ಆದರೆ ಅದನ್ನು ಹೆಚ್ಚು ಹೊತ್ತು ನೋಡದೇ ಹೋದ. ವೀಣೆಯ ನಾದದಂತಹ ದನಿಯಿಂದ ಅವನ ಧ್ಯಾನವು ಭಂಗವಾಯಿತು.

"ಬರಬಹುದೇ ಬಾಬೂಗಳೆ!" — ತರುಣಿಯೊಬ್ಬಳು ಪ್ರವೇಶಿಸಿ ಕೇಳಿದಳು.

ಪ್ರಮೋದನು ಸ್ವರವನ್ನು ಗುರುತಿಸಿದ. ಪ್ರಮೋದನ ಮೈಮೇಲೆ ರೋಮಾಂಚಗಳೆದ್ದುವು. ಮುಖವನ್ನು ಹೊರಳಿಸಿ ನೋಡಿದ. ನೀರಜಾ ನಿಂತಿದ್ದಾಳೆ. ನೋಡಿ ತುಂಬ ಸಂತೋಷಭರಿತನಾದ.

ಪ್ರಮೋದ ಬಂದುದನ್ನು ಅವಳು ನೋಡಿದ್ದಿಲ್ಲ. ಹಿಂದಿನಿಂದ ನೋಡಿ,

ಯಾಮಿನೀನಾಥನೆಂದೇ ಭಾವಿಸಿ ಕರೆದಳು. ಆದರೆ ಒಮ್ಮೆಲೇ ಪ್ರಮೋದ ಕಣ್ಣಿಗೆ ಬಿದ್ದ. ಅವಳಿಗೆ ಬಹಳ ಸಂತೋಷವೆನಿಸಿತು. ದೊಡ್ಡದಾದ ಕೋಣೆ. ಎರಡು ಮೂಲೆಗಳಲ್ಲಿ ಇಬ್ಬರೂ ಸುಮ್ಮನೆ ನಿಂತಿದ್ದರು. ಇಬ್ಬರ ನೇತ್ರಗಳೂ ಸ್ಥಿರವಾಗಿದ್ದುವು. ಇಬ್ಬರಿಗೂ ಮೈಮೇಲೆ ಅರಿವೆ ಉಳಿಯಲಿಲ್ಲ. ಒಬ್ಬರನ್ನೊಬ್ಬರು ನೋಡುತ್ತ ನಿಂತರು. ಬಹು ಹೊತ್ತಿನ ಮೇಲೆ ಪ್ರಮೋದನು ನೀರಜಾಳಿಗೆ — "ಎಲಾ! ಇದೇನು? ನೀರಜಾ, ನೀನು ಇಲ್ಲಿಗೆ ಹೇಗೆ ಬಂದೆ?" ಎಂದು ಕೇಳಿದ.

ವಿಸ್ಮಯ, ಪ್ರಲಾಪಗಳಿಂದ ಸ್ವಲ್ಪ ಸಮಯವನ್ನು ನೂಕಿ ಆ ಮೇಲೆ ನೀರಜಾ ತನ್ನ ಕರುಣಾಕಥೆಯನ್ನು ಹೇಳಹತ್ತಿದಳು. ಕೇಳುತ್ತಲೇ ಪ್ರಮೋದನಿಗೆ ಸಂನ್ಯಾಸಿಯ ಮಾತಿನ ಅರ್ಥವಾಗತೊಡಗಿತು.

"ಯಾಮಿನೀನಾಥನು ನಿಮ್ಮನ್ನು ರಕ್ಷಿಸಿದ. ಇದು ಸೌಭಾಗ್ಯವಲ್ಲದೆ ಮತ್ತೇನು! ಇಲ್ಲವಾಗಿದ್ದರೆ ಏನೇನಾಗುತ್ತಿತ್ತೋ, ಏನೊ! ಅಯ್ಯೋ! ನಾನೇಕೆ ಯಾಮಿನಿಯಂಥ ಪ್ರಸಂಗವನ್ನು ಕಳೆದುಕೊಂಡೆ? ನನಗೂ ನಿಮ್ಮನ್ನು ಉಳಿಸಿದ ಸೌಭಾಗ್ಯವು ಪ್ರಾಪ್ತವಾಗುತ್ತಿದ್ದಿಲ್ಲ!" ಪ್ರಮೋದನೆಂದ. ಅವನಲ್ಲಿ ಯಾವ ಭಾವನೆ ಬಂದಿತೋ ಏನೋ, ಒಮ್ಮೆಲೇ ಮಾತು ನಿಲ್ಲಿಸಿದ. ಮೆಲ್ಲಗೆ ಒಂದು ಉಸಿರ್ಗರೆದು ಪ್ರಮೋದನು—"ನೀವು ಇಲ್ಲಿರುವದು ನನಗೆ ತುಸು ಹೊತ್ತಿನ ಹಿಂದೆ ತಿಳಿದಿದ್ದರೆ ಚೆನ್ನಾಗಿತ್ತು. ಯಾಮಿನಿಯನ್ನೇ ಮೊದಲು ಕಂಡಿದ್ದರೆ—" ಎಂದ.

ಇದೇ ಹೊತ್ತಿಗೆ ಯಾಮಿನೀನಾಥನು ಬಂದ. ಅವರಿಬ್ಬರ ಮಾತು ಅಷ್ಟಕ್ಕೆಯೇ ನಿಂತಿತು. ಪ್ರಮೋದನ ಹತ್ತಿರ ನೀರಜಾ ಇದ್ದುದನ್ನು ನೋಡಿ ಅವನಿಗೆ ವಿಸ್ಮಯವೆನಿಸಿತು. ಸ್ವಲ್ಪ ಸಿಟ್ಟೂ ಆದ—"ನೀರಜಾ ನೀನೂ ಇಲ್ಲಿ?" ಎಂದ.

"ಅಪ್ಪನ ಕಡೆಯಿಂದ ಉತ್ತರ ಬಂದಿತೋ, ಇಲ್ಲೋ, ಎಂದು ತಿಳಿದುಕೊಳ್ಳುವ ಆಶೆ ಹೆಚ್ಚಿತು. ನಿಮ್ಮ ದಾರಿಯನ್ನೂ ನೋಡಿದೆ, ನೀವೂ ಬರಲಿಲ್ಲ. ಆದಕ್ಕಾಗಿ ನಿಮ್ಮನ್ನು ನೋಡಲು ಬಂದೆ." ನೀರಜಾ ಉತ್ತರಿಸಿದಳು.

"ಹೊರಗೆ ಯಾರು ಯಾರೂ ಬಂದಿರುತ್ತಾರೆ. ಹೀಗೆ ನೀವು ಬರಬಾರದು. ಪತ್ರ ಬಂದಿದ್ದರೆ ನಿಮ್ಮಲ್ಲಿಗೆ ನಾನೇ ತೆಗೆದುಕೊಂಡು ಬರುತ್ತಿದ್ದೆ." ವಿರಕ್ತನಂತೆ ಯಾಮಿನಿ ಎಂದ.

# ದೇಶಪ್ರೇಮ

ನೀರಜಾ ಹೊರಟು ಹೋದಳು. ಪ್ರಮೋದನು ಸಂನ್ಯಾಸಿಯ ಭೆಟ್ಟಿಯ ವಿಷಯವನ್ನು ಆವಳಿಗೆ ಹೇಳಲಿಲ್ಲ. "ಸಹೋದರ, ಬಹಳ ಬವಸಗಳಾದ ಮೇಲೆ ಕೂಡಿದ್ದೇನೆ. ಇಂದು ಇಷ್ಟು ರಾತ್ರಿಯಲ್ಲಿ ಬಂದಿರುವೆನೆಂದು ಗಾಬರಿಯಾಗಬೇಡ. ಸಂಕಟದಲ್ಲಿ ಬಿದ್ದವರಿಂದ ನಿನ್ನ ಸಲಹೆ ಬೇಡಲು ಬಂದಿದ್ದೇನೆ." ಎಂದು ಯಾಮಿನೀನಾಥನಿಗೆ ಹೇಳಿದ.

"ಸಂಕಟ–ಸಂಕಟವೆ? ಎಂಥ ಸಂಕಟ?" ಚಿಂತೆಯ ಸ್ವರದಲ್ಲಿ ಯಾಮಿನೀನಾಥನೆಂದ.

ಪ್ರಮೋದ—"ಇಂದು ಅಕಸ್ಮಾತ್ತಾಗಿ ಸಂನ್ಯಾಸಿ ಕೂಡಿದ್ದ........"

ಯಾಮಿನಿ—"ನೀರಜಾಳ ತಂದೆ ಸಂನ್ಯಾಸಿಯೇನು? ಅವನು ಇಲ್ಲಿ ಬಂದಿದ್ದಾನೆಯೆ?"

ಪ್ರ—"ಹೂಂ, ಬಂದಿದ್ದಾನೆ. ನೀರಜಾ ಇಲ್ಲಿರುವುದು ನನಗೆ ಗೊತ್ತಿರಲಿಲ್ಲ. ಅವರಿಂದ ಬಹಳ ಹಾನಿಗೊಳಗಾದೆ."

ಪ್ರಮೋದನು ನೀರಜಾಳನ್ನು ನೋಡಿಬಿಟ್ಟನಲ್ಲ ಎಂದು ಯಾಮಿನಿಗೆ ದಿಗಿಲಾಯಿತು. ಯಾಮಿನೀನಾಥನು ನಕ್ಕು—"ಸಹೋದರ ಪ್ರಮೋದ, ನೀರಜಾಳ ಸಲುವಾಗಿ ದೊಡ್ಡ ದೊಡ್ಡ ಸಂಕಟಗಳನ್ನು ಎದುರಿಸಬೇಕಾಯಿತು ನನಗೆ. ಅದೊಂದು ದೊಡ್ಡ ಕತೆಯಿದೆ. ನಿನಗೆ ಹೇಳಬೇಕೆಂದು ಅಲಾಹಾಬಾದದಿಂದ ನೀನು ಬರುವ ಹಾದಿ ಕಾಯುತ್ತಿದ್ದೆ. ಆದರೆ ನೀನೂ ಒಬ್ಬ ವಿಚಿತ್ರ ವ್ಯಕ್ತಿ. ಬರುವ ಸುದ್ದಿಯನ್ನಾದರೂ ತಿಳಿಸಬಾರದೆ?" ಎಂದ.

ಪ್ರ—"ಹೂಂ ಸಹೋದರ, ಮೈತುಂಬ ಕೆಲಸವಿದ್ದಿತು. ಅದರಿಂದ ತಿಳಿಸಲಿಲ್ಲ. ನಾನು ಈಗ ಎಲ್ಲ ಕತೆಯನ್ನೂ ನೀರಜಾಳ ಬಾಯಿಂದ ಕೇಳಿದ್ದೇನೆ. ಎಂಥ ಭಯಂಕರವಾದ ಕಥೆಯದು! ಗೆಳೆಯ, ನೀನು ರಕ್ಷಣೆ ಮಾಡಿದೆ. ಅವಳ ಭಾಗ್ಯವು ಒಳ್ಳೆಯದಿತ್ತು."

ಯಾಮಿನಿ—"ನಾನು ಇರದಿದ್ದರೆ, ನೀರಜಾಳ ಗತಿ ಏನಾಗುತ್ತಿತ್ತೋ ಏನೊ, ನೆನಸಿಕೊಂಡರೆ ಮೈ ನಡುಗುತ್ತದೆ. ಇನ್ನೇನು, ಈಗ ಅವಳನ್ನು ಅವಳ ತಂದೆಯ ಕೈಗೆ ಒಪ್ಪಿಸಿದರೆ ನಾನು ನನ್ನ ಕೆಲಸವನ್ನು ಕೊನೆಗಾಣಿಸಿದಂತಾಗುವುದು. ನಿಶ್ಚಿಂತನಾಗುವೆ. ಸಂನ್ಯಾಸಿ ಇಲ್ಲಿಯೇ ಬಂದಿರುವನಲ್ಲವೆ? ಇದು

ಒಳ್ಳೆಯದೇ ಆಯಿತು. ನಾನು ಅದೆಷ್ಟೋ ಪತ್ರಗಳನ್ನು ಬರೆದಿದ್ದೇನೆ. ನನಗೆ ಬಿಡುವು ಇದ್ದಿದ್ದರೆ, ನೀರಜಾನನ್ನು ಅಲ್ಲಿಯವರೆಗೆ ಕರೆದುಕೊಂಡು ಹೋಗಿ ಕಳಿಸಿಬರುತ್ತಿದ್ದೆ. ಇರಲಿ. ಸಂನ್ಯಾಸಿ ನಿನಗೆ ಏನು ಹೇಳಿದ ? "

ಪ್ರಮೋದನು ಸಂನ್ಯಾಸಿಯು ಕೂಡ ನಡೆದ ಮಾತುಕತೆಯನ್ನು ಸಂಕ್ಷೇಪವಾಗಿ ಸ್ವಲ್ಪದರಲ್ಲಿ ಹೇಳಿ, ಇದನ್ನೂ ಹೇಳಿದ— " ನಾನಷ್ಟು ಹೇಳಿದೆ, ಆದರೂ ಸಂನ್ಯಾಸಿ ನನ್ನ ಮಾತಿನ ಮೇಲೆ ವಿಶ್ವಾಸವನ್ನೇ ಇಡಲಿಲ್ಲ. "

ಯಾಮಿನೀನಾಥನು ಎಲ್ಲವನ್ನೂ ಗಂಭೀರಭಾವದಿಂದ ಕೇಳುತ್ತಿದ್ದ. ಕೊನೆಗೆ ನಕ್ಕು— " ನೀನು ನಿರ್ದೋಷಿ. ಪ್ರಮೋದ, ನೀನೇಕೆ ಹೆದರುತ್ತಿ ? ನಾನಿದ್ದೇನಲ್ಲ, ನೀನು ನಿಶ್ಚಿಂತೆಯಿಂದಿರು. " ಎಂದ.

ಯಾಮಿನಿಯ ಮಾತುಗಳನ್ನು ಕೇಳಿ ಪ್ರಮೋದನು— " ಇದು ನನಗೆ ಖಂಡಿತ ಗೊತ್ತಿದೆ. ವಿಚಾರಣೆ ನಡೆದರೂ ನಾನು ನಿರ್ದೋಷಿಯೇ ಆಗುವೆ. ಆದರೆ ಸಂನ್ಯಾಸಿ ವ್ಯರ್ಥವಾಗಿ ನಾನು ದೋಷಿಯೆಂದು ತಿಳಿಯುತ್ತಾನಲ್ಲ. ಕೋರ್ಟು ನಾನು ನಿರ್ದೋಷಿಯೆಂದು ನಿರ್ಣಯ ಕೊಟ್ಟಿತೆಂದು ತಿಳಿಯುವಾ. ಆದರೂ ಸಂನ್ಯಾಸಿಗೆ ನಂಬುಗೆಯಾಗದಿದ್ದರೆ ನನಗೆ ಅತೀವ ವೇದನೆಯಾಗ್ಯವುದು. ನೀರಜಾ ಎಲ್ಲ ಮಾತುಗಳನ್ನೂ ಹೇಳಿದರೆ ಆ ಮೇಲಾದರೂ ಅವನ ಸಂದೇಹವು ನಿವಾರಣೆಯಾದೀತೋ ಇಲ್ಲವೋ. ಆದರೆ ಅವನಿಗೆ ಈ ಸುದ್ದಿ ಹೇಗೆ ತಿಳಿಸಲಿ ? ಸಂನ್ಯಾಸಿ ಇರುವ ಸ್ಥಳವೂ ನನಗೆ ಗೊತ್ತಿಲ್ಲ. " ಎಂದು ಹೇಳಿದ.

ಯಾಮಿನಿ— " ನೀನು ಸುಮ್ಮನೆ ನೊಂದುಕೊಳ್ಳುತ್ತಿರುವೆ ನಾನೆಲ್ಲವನ್ನೂ ಸರಿಪಡಿಸುವೆ. ನೀನೇನೂ ಚಿಂತೆ ಮಾಡಬೇಕಾದುದಿಲ್ಲ. "

ಪ್ರ— " ಆದರೂ............ "

ಪ್ರಮೋದನ ಬಾಯಿ ಬಂದು ಮಾಡಿ ಯಾಮಿನಿ— " ಇಲ್ಲ, ಇಲ್ಲ, ಇನ್ನು ಆದರೆ ಬಿಟ್ಟರೆ ಎಂಬ ಮಾತಿನ ಆವಶ್ಯಕತೆಯಿಲ್ಲ. ಇದೊಂದು ಸೋಜಿಗದ ಸಂಗತಿಯೇ ಸರಿ. ನೀನು ಹುಡುಗರಂತೆ ಏಕೆ ಇಷ್ಟು ಎದೆಗುಂದಿದವನಾಗುತ್ತೀ ? ಇಂದು ಎಷ್ಟೋ ದಿವಸಗಳಾದ ಮೇಲೆ ಕೂಡಿದ್ದೇವೆ. ಆಮೋದ–ಪ್ರಮೋದವಂತೂ ದೂರೇ ಉಳಿಯಿತು. ನೀನು ವ್ಯರ್ಥವಾಗಿ ಚಿಂತೆ ಮಾಡುತ್ತಿರುವೆ. " ಎಂದ.

ಪ್ರಮೋದ— " ಏಕೊ, ಏನೊ ಈ ವಿಚಾರವೇ ನನ್ನ ಚಿತ್ತದಲ್ಲಿ ಮನೆ ಮಾಡಿದೆ, ತೊಲಗಲೊಲ್ಲದಾಗಿದೆ. "

ಯಾಮಿನಿ— " ಸಹೋದರ ಹಾಗಲ್ಲ, ಇದು ಹೇಗೆ ಸಾಧ್ಯ ? ನಿನ್ನ ಮನಸ್ಸನ್ನು ಉಲ್ಲಾಸಗೊಳಿಸಿ, ಚಿಂತೆಯನ್ನು ದೂರ ಮಾಡಲೇಬೇಕು. ನಡೆ ಇಂದು ಥಿಯೇಟರಿಗೆ ಹೋಗಿ ಬರುವಾ. ಬಹಳ ದಿವಸವಾಯಿತು. ಇಂದು ಪದ್ಮಾವತಿಯ ಆಟವಿದೆ, ಗೊತ್ತಿದೆಯೇನು ? "

ಪ್ರಮೋದ ಬಹಳ ನೆವ ಹೇಳಿದ. ಆದರೆ ಒಂದೂ ನಡೆಯಲಿಲ್ಲ. ಆಗ ಅವನು— " ಇಷ್ಟು ರಾತ್ರಿಯಾಗಿದೆ, ಅಷ್ಟು ದೂರ ಥಿಯೇಟರಿಗೆ ಹೋಗಿ ಬರುವುದೆ? " ಎಂದ.

ಯಾಮಿನಿ— " ಇಲ್ಲ ಇಲ್ಲ. ಇಲ್ಲಿಯೇ ಭವಾನೀಪುರದಲ್ಲಿಯೂ ಒಂದು ಥಿಯೇಟರ ಇದೆ ನಡೆ. ಅದು ಸಮೀಪವಾಗುತ್ತದೆ. ನೀನು ಊಟ ಮಾಡಿರದಿದ್ದರೆ, ಬಾ ಇಬ್ಬರೂ ಮಾಡೋಣ. "

" ಇಲ್ಲ, ನಾನು ಊಟ ಮಾಡಿಯೇ ಬಂದಿದ್ದೇನೆ. " ಪ್ರಮೋದನು ಹೇಳಿದ.

ಯಾಮಿನಿ— " ಒಳ್ಳೇದು, ಹಾಗಾದರೆ ನೀನು ಕುಳಿತುಕೊ. ನಾನು ಊಟ ಮಾಡಿ ಬರುತ್ತೇನೆ. ಆ ಮೇಲೆ ಇಬ್ಬರೂ ಕೂಡಿಯೇ ನೋಡಲು ಹೋಗೋಣ. "

ಪ್ರಮೋದನಿಗೆ ಹೋಗುವ ಮನಸ್ಸಿದ್ದಿಲ್ಲ. ಮತ್ತೆ ಒಂದೆರಡು ನೆವ ಒಡ್ಡಿದ. ಆದರೆ ಯಾಮಿನೀನಾಥನು ಬಿಡುವನೆ? ಬೆನ್ನಿನ ಮೇಲೆ ಕೈಯಿಟ್ಟು ಅವನು— " ಛಲೆ! ನೀನೂ ಹೀಗೇ ಕಾಣಿಸುತ್ತೀ! ನಾನು ಈಗ ಊಟ ಮಾಡಿಕೊಂಡು ಬರುತ್ತೇನೆ. ಸ್ವಲ್ಪ ತಡೆಯಬಾರದೆ ? " ಎಂದ.

ಪಾಪ, ಪ್ರಮೋದನ ಆಟವೇನೂ ನಡೆಯಲಿಲ್ಲ. ಮುಂದುಗಾಣದಾದ. ಕೊನೆಗೆ ಒಪ್ಪಿಗೆಯನ್ನಿತ್ತ. ಈಗ ಪ್ರಮೋದನ ಚಿಂತೆ ಹೇಳಲಸದಳವೆನಿಸುವಷ್ಟಿತ್ತು. ಆದರಿಂದ ಅವನಿಗೆ ಯಾತರಲ್ಲೂ ಮನಸ್ಸಿಲ್ಲ. ಮೇಲಾಗಿ ಯಾಮಿನಿಯ ಕೂಡ ಬೇಕಾದಾಗ ಹೊರಡಲಿ, ಎಲ್ಲ ಖರ್ಚನ್ನೂ ಪ್ರಮೋಧನೇ ನೋಡಿಕೊಳ್ಳಬೇಕಾಗುತ್ತಿತ್ತು. ಇತ್ತಿತ್ತಲಾಗಿ ಅವನ ಬಳಿ ತಿಂಗಳಿಗೆ ಬೇಕಾಗುವಷ್ಟು ಹಣವೂ ಇರುತ್ತಿರಲಿಲ್ಲ. ಇದಕ್ಕಾಗಿಯೇ ಅವನು ಹೋಗಲು ಮನಸ್ಸು ಮಾಡುತ್ತಿದ್ದಿಲ್ಲ. ಯಾಮಿನಿ ಬಂದ. ಇಬ್ಬರೂ ಕೂಡಿಯೇ ನೋಡಲು

ಥಿಯೇಟರಿಗೆ ಹೊರಟಿತು; ದಾರಿಯಲ್ಲಿ ಪ್ರಮೋದನು ತುಸು ಮುಂದೆ ಹೋದ. ಹೋಗಿ ಥಿಯೇಟರ ಹಾಲಿನಲ್ಲಿ ಕುಳಿತುಕೊಂಡ. ಯಾಮಿನೀನಾಥನ ತಲೆ ಈಗ ಸರಿ ಇರಲಿಲ್ಲ. ಊಟ ಮಾಡುವಾಗ ತುಂಬ ಸೆರೆ ಹೊಡೆದಿದ್ದ. ಥಿಯೇಟರ ಹಾಲಿನೊಳಗೆ ಹೋಗುವಾಗ ಒಬ್ಬ ಸಿಪಾಯಿಗೂ ಅವನಿಗೂ ಢಿಕ್ಕಿಯಾಯಿತು. ತನಗೆ ಅಪಮಾನವಾಯಿತೆಂದು ಕೂಡಲೇ ಸಿಪಾಯಿಗೊಂದು ಬಲವಾದ ಮುಷ್ಟಿಯ ಏಟನ್ನು ಹಾಕಿದ!

ಗುದುಮುರಿಗೆ ನಡೆಯಿತು. ಬಾಗಿಲಲ್ಲಿ ಜನರು ನೆರೆದರು. ಯಾಮಿನೀ ಬಾಬು ಮತ್ತಿಷ್ಟು ಸಿಟ್ಟಿಗೆದ್ದ. ಪ್ರಮೋದ ಬಾಬುವೂ ಈ ಹೊಡೆದಾಟದಲ್ಲಿ ಭಾಗ ತೆಗೆದುಕೊಂಡ. ಥಿಯೇಟರಿನ ಮ್ಯಾನೇಜರನು ಇಬ್ಬರೂ ಮಹನೀಯರನ್ನು ಮತ್ತೆ ಥಿಯೇಟರಿನೊಳಗೆ ಹೋಗಗೊಡಲಿಲ್ಲ. ಟಿಕಿಟಿನ ಹಣ ವಾಪಸು ಸಿಕ್ಕಿತು. ಇಬ್ಬರೂ ತಿರುಗಿ ಮನೆಗೆ ಬಂದರು.

## ಗೆಳೆತನಕ್ಕೆ ದೊರೆತ ಮೆಚ್ಚು!

ಪ್ರಮೋದಬಾಬು ಕಲಕತ್ತೆಯಲ್ಲಿ ಕಾಲಿಟ್ಟಾಗಿನಿಂದ ಆಗಾಗ ಕನಕನನ್ನು ಹತ್ತೆಂಟು ರೂಪಾಯಿ ಬೇಡುತ್ತಿದ್ದ. ಯಾಮಿನೀನಾಥನಂಥ ಮಿತ್ರರ ಕೂಡ ಇದ್ದು ಕಾಲ ಕಳೆಯಬೇಕೆಂದರೆ ಅವನಲ್ಲಿರುವಷ್ಟು ಹಣ ಸಾಕಾಗುತ್ತಿದ್ದಿಲ್ಲ. ಪ್ರಮೋದನಾದರೂ ಆಗಲ್ಲ ಶ್ರೀಮಂತನೆಂದು ಹೆಸರಾಗಿದ್ದ. ಆದರಿಂದಲೇ ಅವನು ಆಗಾಗ ಥಿಯೇಟರಿಗೆ ಹೋಗುವನು. ಹೋಟಲಿಗೆ ಹೋಗುವನು. ಇದೇನು ಅವನಿಗೆ ದೊಡ್ಡ ಮಾತಲ್ಲ. ಪ್ರಮೋದನಿಗೆ ತಾನು ಶ್ರೀಮಂತನೆಂಬ ಗರ್ವ. ಅವನು ಸಣ್ಣಪುಟ್ಟ ಖರ್ಚಿಗೆ ಹೆದರಿ ಹೆಸರು ಕೆಡಿಸಿಕೊಳ್ಳಲೇ ಎನ್ನುತ್ತಿದ್ದ. ಅವನು ನಿರುಪಾಯನಾಗಿ ಯಾಮಿನಿಯ ಇಚ್ಛೆಯ ಪ್ರಕಾರ ಹೊರಡಬೇಕಾಗುತ್ತಿತ್ತು. ಪ್ರಮೋದನಿಗೆ ವೆಚ್ಚಕ್ಕೆಂದು ಸುಶೀಲಾ ಕಳಿಸುವ ಹಣ ಅವನಿಗೆ ಸಾಕಾಗುತ್ತಿದ್ದಿಲ್ಲ.

ಹುಡುಗರ ಕೈಯೊಳಗೆ ದುಡ್ಡು ಸಿಕ್ಕರೆ, ಕೆಡುವರೆಂದು ಸುಶೀಲೆಯ ಮತ.

ಮುಂದುಗಾಣದಂತೆ ಆದಾಗ, ಅಡಚಣೆ ಅಡ್ಡ ಬಂದಾಗ, ಪ್ರಮೋದನು ಕನಕನಿಗೆ ಪತ್ರ ಬರೆಯುತ್ತಿದ್ದ. ಏನಾದರೂ ಮಾಡಿ ಪಾಪ, ಕನಕಲತಾ

ಅಣ್ಣನಿಗೆ ಹಣ ಕಳಿಸುತ್ತಿದ್ದಳು ಈ ರೂಪಾಯಿ ಕೂಡಿಸುವಾಗ ಕನಕನಿಗೆ ಆಗುತ್ತಿದ್ದ ತೊಂದರೆಗಳು ಪ್ರಮೋದನಿಗೂ ತಿಳಿದಿದ್ದುವು; ಮರುಗುತ್ತಿದ್ದ. ಆದರೆ ಕನಕಲತಾ ಇಂದಿನವರೆಗೂ ತನ್ನ ಕಷ್ಟವನ್ನು ಕುರಿತು ಆತನಿಗೆ ಬರೆದಿದ್ದಿಲ್ಲ ಪ್ರತಿ ತಿಂಗಳು ಪ್ರಮೋದನಿಗೆ ಅವಳು ಹತ್ತು-ಹದಿನೈದು ರೂಪಾಯಿ ಕಳಿಸುತ್ತಿದ್ದಳು. ಇರುಳು ಕಾಲುಕುಪ್ಪಸ ಮುಂತಾದವುಗಳನ್ನು ಹೆಣೆದು, ಅವನ್ನು ಮಾರಿ ಹಣ ಕೂದಿಡುತ್ತಿದ್ದಳು. ಅವನ್ನೇ ಅಣ್ಣನಿಗೆ ಕಳಿಸುತ್ತಿದ್ದಳು.

ಇಪ್ಪತ್ತು-ಇಪ್ಪತ್ತೈದು ರೂಪಾಯಿಗಳನ್ನು ಬೇಡಿದ್ದರೂ ಕನಕ ಹಾಗೂ ಹೀಗೂ ಕಷ್ಟಪಟ್ಟು ಕಳಿಸುತ್ತಿದ್ದಳು. ಆದರೆ ಈಗ ಪ್ರಮೋದನು ಹಿಂದೆ ಮುಂದೆ ವಿಚಾರ ಮಾಡದೆ ಎರಡುನೂರು ರೂಪಾಯಿ ಬೇಡಿದ. ಪಾಪ, ಕನಕ ಇಷ್ಟು ಹಣವನ್ನು ಕಳಿಸುವಳೆ! ಎಲ್ಲಿಂದ ತರುವಳು? ಕಳುಹಲೇಬೇಕು. ಪ್ರಮೋದ ಪತ್ರದಲ್ಲಿ ಬರೆದಿದ್ದ, ರೂಪಾಯಿ ಕಳಿಸದಿದ್ದರೆ ಸೆರೆಮನೆಯನ್ನು ಕಾಣಬೇಕಾಗುವುದೆಂದು. ಎಂಥ ಕೆಟ್ಟ ಮಾತಿದು! ಬಡಪಾಯಿಯಾದ ಬಾಲೆ ಇದನ್ನೆಲ್ಲ ಆಲೋಚನೆ ಮಾಡಿ ನಡುಗಿದಳು. ಸುಶೀಲೆಯಿಂದಂತೂ ರೂಪಾಯಿ ಸಿಗುವ ಆಶೆಯಿಲ್ಲ. ಮತ್ತೆ ಪ್ರಮೋದನಾದರೂ ಅದನ್ನು ನಿಷೇಧಿಸಿದ್ದಾನೆ. ಕನಕನಿಗಷ್ಟೇ ಬರೆದರೆ ಸಾಕು, ರೂಪಾಯಿ ದೊರಕುವುವು, ಮುಂತಾಗಿ ಅವನು ತಿಳಿದಿದ್ದ. ಇಂಥ ಪರಿಸ್ಥಿತಿಯಲ್ಲಿ ತಾನು ಹೊಡೆದಾಟ ಬಿಡಿಸಲು ಹೋದ ಘಟನೆಯನ್ನು ಬರೆಯಲು ಅವನಿಗೆ ಮನಸ್ಸಾಗಲಿಲ್ಲ ಆದರೆ ರೂಪಾಯಿ ಕಳಿಸುವಾಗ ಕನಕಳಿಗೆ ಆಗುವ ಬವಣೆಯನ್ನು ಪ್ರಮೋದನೇನು ಬಲ್ಲ?

ಪಾಪ, ಕನಕಳಿಗಾಗುವ ಕಷ್ಟವನ್ನು ಕುರಿತು ಆಲೋಚಿಸುವ ಅಗತ್ಯವಿಲ್ಲವೆಂದು ಅವನು ತಿಳಿಯುತ್ತಿದ್ದ. ದೇವರ ದಯೆಯಿಂದ ಅವನಿಗೆ ಅವಳ ಈ ಬವಣೆಯ ಕಲ್ಪನೆ ಬಂದಾಗ ಕೆಲವು ದಿನ ಮಿತವ್ಯಯಿಯಾಗುತ್ತಿದ್ದ. ಆದರೆ ಮತ್ತೆ ಕೆಲವು ದಿನಗಳು ಗತಿಸಿದೊಡನೆ ಹಿಂದಿನ ಮಾತನ್ನು ಮರೆಯುತ್ತಿದ್ದ. ಈ ಸಾರೆ ಅವನು ಕನಕನಿಗೆ ಪತ್ರ ಬರೆಯುವಾಗ, ಇನ್ನು ಹೆಚ್ಚು ವೆಚ್ಚ ಮಾಡುವುದಿಲ್ಲ, ಕನಕಲತೆಯನ್ನು ದುಡ್ಡು ಬೇಡುವುದಿಲ್ಲ ಮುಂತಾಗಿ ಮನದಲ್ಲಿಯೇ ನಿಶ್ಚಯ ಮಾಡಿಕೊಂಡಿದ್ದ.

ಇತ್ತ ಕನಕಲತೆಗಾದ ಕಷ್ಟವನ್ನು ಕುರಿತು ವರ್ಣಿಸುವುದು ಅನಾವಶ್ಯಕ. ಏನು ಹಂಚಿಕೆ ಹಾಕಿದರೆ ಅಣ್ಣನ ಮಾನರಕ್ಷಣೆಯಾಗುವುದೆಂಬುದೊಂದೇ ಒಂದು ವಿಚಾರ ಅವಳಿಗೆ.

ಆರು ತಾಸು ರಾತ್ರಿಯಾಗಿದೆ. ಪೃಥ್ವಿ ಅಂಧಕಾರಮಯವಾಗಿದೆ. ನಿಸ್ತಬ್ಧತೆ ಎಲ್ಲೆಡೆಯಲ್ಲಿಯೂ ಇದೆ. ಮೇಲೆ ನೀಲಿ ಬಣ್ಣದ ಆಗಸ. ಅದು ತಾರಾಗಣದಿಂದ ಅಲಂಕೃತವಾಗಿದೆ. ಅದೇ ನಕ್ಷತ್ರಗಳ ಮಾಲೆಯನ್ನು ಮುಡಿದ ಆಕಾಶವನ್ನು ಕನಕಲತಾ ನಿಟ್ಟಿಸುತ್ತಾ ಅಳುತ್ತಿದ್ದಾಳೆ. ಅವಳ ಕಷ್ಟ ಅವಳೊಬ್ಬಳಿಗೇ ಗೊತ್ತು. ಮಂದಿಯ ಮುಂದೆ ಹೇಳುವ ಮಾತಲ್ಲ ಅದು. ಮಂದಿಗೆ ಹೇಳಲೂ ಬರುವಂತಿಲ್ಲ. ಆದರಿಂದ ಕನಕ ತನ್ನ ಕಷ್ಟವನ್ನು ತಾರಾಗಣಕ್ಕೆ ಹೇಳುತ್ತಿದ್ದಾಳೆ. ಅಳುತ್ತಳುತ್ತ ಎದ್ದು ಕುಳಿತಳು. ಒಳಗೆ ಹೋಗಿ, ದೀಪದ ಬೆಳಕಿಗೆ ಆ ಪತ್ರವನ್ನು ಮತ್ತೆ ಓದಹತ್ತಿದಳು—

ಕಲಕತ್ತಾ

೭ ಜನವರಿ, ೧೯೦೫

ಭಗಿನಿ ಕನಕ,

ನಾನು ದೊಡ್ಡ ಕುತ್ತಿನೊಳಗಿದ್ದೇನೆ. ಈಗ ನಿನ್ನ ವಿನಾ ನನ್ನ ಕಣ್ಣಿಗೆ ಯಾರೂ ಕಾಣಿಸುವುದಿಲ್ಲ. ಪತ್ರವನ್ನು ಕಾಣುತ್ತಲೇ ಎರಡು ನೂರನ್ನು ಕಳಿಸಲೇಬೇಕು. ನೀನು ಹೀಗೆ ಮಾಡದಿದ್ದರೆ ನಾನು ಜೇಲಿಗೆ ಹೋಗಬೇಕಾಗುವುದು. ನನ್ನ ಪ್ರೀತಿಯ ತಂಗಿ ಕನಕ, ಇದೊಂದು ಸಾರೆ ಈ ದುರ್ದೈವಿ ಅಣ್ಣನನ್ನು ಆಪತ್ತಿನಿಂದ ಉಳಿಸುವೆಯಾ? ಒಂದೇ ಒಂದು ಬಾರಿ. ಇನ್ನು ನಾನು ಎಂದೂ ನಿನಗೆ ಕಷ್ಟ ಕೊಡುವುದಿಲ್ಲ.

ನಿನ್ನ ಪ್ರೀತಿಯ ಅಣ್ಣ

ಪ್ರಮೋದ.

ವಿಶೇಷ—

ನೋಡು, ಈ ವಿಷಯವನ್ನು ಕುರಿತು ಚಿಕ್ಕಮ್ಮನಿಗೆ ಏನೂ ಉಸಿರಬೇಡ.

—ಪ್ರಮೋದ

ಕನಕ ಅದೆಷ್ಟೋ ಸಾರೆ ಆ ಪತ್ರವನ್ನು ಓದಿದಳು. ಎಷ್ಟೋ ಸಾರೆ ಸೆರಗಿನಿಂದ ಕಣ್ಣೀರನ್ನು ಒರೆಸಿಕೊಂಡಳು. ಇನ್ನೂರು ರೂಪಾಯಿ ಕಳಿಸುವ ಬಗೆ ಹೇಗೆ? ಈ ಸಾರೆ ಅಣ್ಣನನ್ನು ಉಳಿಸುವುದು ಹೇಗೆ? ಇದೇ ಚಿಂತಾಸಾಗರದಲ್ಲಿ ಅವಳು ಮುಳುಮುಳುಗಿ ಏಳಹತ್ತಿದಳು.

ಇಡಿಯ ರಾತ್ರಿ ಆಲೋಚನೆಯಲ್ಲಿಯೇ ಕಳೆದುಹೋಯಿತು. ಹಾಸುಗೆಯಿಂದ ನಸುಕಿನಲ್ಲಿಯೇ ಎದ್ದಳು. ತನ್ನ ರೇಸಿಮೆಯ ಹಾಗೂ ಬೇರೆ ಬೇರೆ

ಇನ್ನುಳಿದ ಸೀರೆಗಳನ್ನು ತೆಗೆದಳು. ಒಬ್ಬ ನಂಬುಗೆಯ ದಾಸಿಯ ಕೈಯೊಳಗೆ ಮಾರಿಕೊಂಡು ಬರಲು ಕೊಟ್ಟಳು. ಆದರೆ ಯಾವಾಗ ಮಾರುವುವೋ, ಇದು ಗೊತ್ತಿನವಲ್ಲ. ಕನಕಲತೆ ಅದನ್ನು ಇದನ್ನು ಆಲೋಚಿಸುತ್ತ ತೋಟಕ್ಕೆ ಬಂದಳು. ಅಲ್ಲಿ ಒಂದು ಮರವಿತ್ತು. ಅವರಡಿಯಲ್ಲಿ ಕುಳಿತುಕೊಂಡಳು. ಅದೇ ಮರದಡಿಯಲ್ಲಿ ಒಂದು ಮಡಿಚಿದ ಕಾಗದವು ಕಣ್ಣಿಗೆ ಬಿದ್ದಿತು. ಕಾಗದವನ್ನು ಕನಕ ಕೈಯಲ್ಲಿ ತೆಗೆದುಕೊಂಡಳು. ನೋಡುತ್ತಾಳೆ, ಅದು ಕಾಗದವಲ್ಲ, ನೂರು ರೂಪಾಯಿಯ ನೋಟು. ಹರ್ಷದಿಂದ ಬಾಲಿಕೆಯ ಹೃದಯವು ಅರಳಿತು. ಅವಳು ತಿಳಿದಳು — 'ಇದನ್ನು ದೇವರೇ ಕಳಿಸಿದ್ದಾನೆ. ಇದನ್ನು ತೆಗೆದುಕೊಂಡರೆ ತಪ್ಪೇನು?' ದೇವರೇ ಕನಕಲತೆಯ ಕಷ್ಟವನ್ನು ದೂರ ಮಾಡಲು ಹೀಗೆ ಮಾಡಿದ್ದಾನೆ. ಕೂಡಲೇ ಬಾಲಿಕೆ ನೋಟನ್ನು ತೆಗೆದುಕೊಂಡಳು.

ಉಳಿದ ಇನ್ನು ನೂರು ರೂಪಾಯಿಗೆ ಅವಳು ತನ್ನ ಸೀರೆಗಳನ್ನು ಅರ್ಧ ಬೆಲೆಗೆ ಮಾರಿದಳು. ಅಂದೇ ಎರಡು ನೂರು ರೂಪಾಯಿಗಳನ್ನು ಪ್ರಮೋದನಿಗೆ ಕಳಿಸಿದಳು.

ರೂಪಾಯಿಗಳನ್ನೇನೊ ಕಳಿಸಿದಳು, ಆ ಮೇಲೆ ವಿಚಾರ ಮಾಡಹತ್ತಿದಳು. ನೋಟು ಮಂದಿಯದಾಗಿದ್ದರೆ, ಯಾರಾದರೂ ಬಂದು ನಮ್ಮ ತೋಟದಲ್ಲಿ ಮರೆತು ಹೋಗಿದ್ದರೆ ಹೇಗೆ? ತುಸು ಹೊತ್ತಿನಲ್ಲಿಯೇ ಅವಳು ಮತ್ತೆ ಆಲೋಚನೆ ಮಾಡಿದಳು; 'ತನ್ನ ಹತ್ತಿರ ಇನ್ನೂ ಬೆಲೆಯುಳ್ಳ ಬಟ್ಟೆಗಳಿವೆ. ಅವನ್ನು ಮಾರಬೇಕು, ಆ ಮೇಲೆ ತನಗೆ ಆ ನೋಟು ಸಿಕ್ಕ ವೃತ್ತಾಂತವನ್ನು ಬಹಿರಂಗಪಡಿಸಬೇಕು. ಆ ನೋಟಿನವರಿಗೆ ನೂರು ರೂಪಾಯಿ ಕೊಡಬೇಕು' ಎಂದು. ಆದರೆ ದುರ್ದೈವದಿಂದ ಆ ನೋಟಿನ ಶೋಧವು ಅಂದೇ ನಡೆದುಬಿಟ್ಟಿತು.

ಸುಶೀಲಾ ತೋಟಕ್ಕೆ ಹೋಗಿದ್ದಳಂತೆ. ಅಲ್ಲಿ ಅದನ್ನು ಆಕೆ ಕಳೆದುಕೊಂಡಿದ್ದಳು. ಅದನ್ನು ಸೆರಗಿನ ಚುಂಗಿನಲ್ಲಿ ಕಟ್ಟಿಕೊಂಡಿದ್ದಳಂತೆ. ಹೇಗೋ ಅದು ಬಿದ್ದುಬಿಟ್ಟಿತ್ತು. ಮರುದಿನ ಸುಶೀಲೆ ಬಟ್ಟೆಯನ್ನು ಬಿಡುತ್ತಿದ್ದಳು. ಆಗ ಅದು ನೆನಪಾಯಿತು. ಕೂಡಲೇ ಮನೆಯ ದಾಸ-ದಾಸಿಯರ ಮೇಲೆ ಸಂಶಯವನ್ನು ತೆಗೆದುಕೊಂಡಳು. ಆಳುಗಳ ಜೀವವು ನೆತ್ತಿಯಲ್ಲಿಯೇ ಹೋಯಿತು. ತಪ್ಪಿಲ್ಲದೆಯೇ ಈ ದೋಷವು ಯಾರ ಕೊರಳಿಗೆ ಬೀಳುವುದೋ,

ಏನೋ ಎಂದು ಎಲ್ಲರೂ ಆಲೋಚನೆಯಲ್ಲಿದ್ದರು. ಇಂಥ ಪ್ರಸಂಗವು ಬಂದಾಗ, ಎಲ್ಲೆಡೆಯಲ್ಲಿ ಆಗುವಂತೆಯೇ ಇಲ್ಲಿಯೂ ನಡೆಯಿತು. ಸುಶೀಲಾ ಒಬ್ಬ ನಿರ್ದೋಷಿಯಾದ ಆಳನ್ನು ದೋಷಿಯೆಂದು ಹೆಸರಿಟ್ಟಳು. ಅವನು ಸುಶೀಲಾನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಟ್ಟಿದ್ದಿಲ್ಲ. ಎಷ್ಟೋ ಸಾರೆ ಉತ್ತರ ಕೊಡುವಾಗ ಅವನು ಉಗುಳು ನುಂಗುತ್ತಿದ್ದ. ಉಳಿದವರಿಗಿಂತ ಅವನು ಹೆಚ್ಚು ಗಾಬರಿಯಾಗಿದ್ದ. ಕಳ್ಳನ ಲಕ್ಷಣಗಳೇ ಇವು. ಇವನ್ನು ಬಿಟ್ಟರೆ ಬೇರೆ ಪ್ರಮಾಣಗಳೇನು ಬೇಕು? ಸುಶೀಲಾ ಅವನನ್ನು ಪೋಲೀಸನ ಕೈಗೆ ಕೊಡಬೇಕೆಂದು ಗೊತ್ತು ಮಾಡಿಕೊಂಡಳು. ಇತ್ತ ಕನಕನ ಪ್ರಾಣವೂ ಹಾರುತ್ತಿತ್ತು. ಈಗ ಅವಳು ಏನು ಹೇಳಿ ತನ್ನ ತಪ್ಪನ್ನು ಒಪ್ಪಿಕೊಳ್ಳಬೇಕು? ಅವಳ ದೆಸೆಯಿಂದ ಒಬ್ಬ ನಿರ್ದೋಷಿಗೆ ಶಿಕ್ಷೆಯಾಗುವುದು. ಇದನ್ನು ಕಣ್ಣಾರೆ ಕಂಡೂ ಅವಳು ಸುಮ್ಮನೇ ಹೇಗೆ ಇರಬಲ್ಲಳು? ಕನಕ ಅಂಜಂಜುತ್ತ, ಮೆಲ್ಲಡಿಯಿಡುತ್ತ ಸುಶೀಲಾನ ಹತ್ತಿರ ಬಂದಳು. ಅಲ್ಲಿಗೆ ಹೋಗಿ ಅವಳು ಮುಕ್ತಕಂಠದಿಂದ ತಪ್ಪನ್ನು ಒಪ್ಪಿಕೊಂಡಳು. ಸುಶೀಲಾ ಅತ್ಯಂತ ಆಶ್ಚರ್ಯದಿಂದ— "ನೀನು ನೋಟು ತೆಗೆದುಕೊಂಡು ಏನು ಮಾಡಿದೆ? ಇಲ್ಲಿಯತನಕ ಏಕೆ ಹೇಳಲಿಲ್ಲ?" ಎಂದು ಕೇಳಿದಳು.

"ನಾನು ವೆಚ್ಚ ಮಾಡಿದ್ದೇನೆ. ಅದಕ್ಕಾಗಿಯೇ ಹೇಳಲಿಲ್ಲ; ಕೈತುಂಬ ದುಡ್ಡು ಆದಕೂಡಲೇ ಆ ರೂಪಾಯಿ ಆ ನೋಟಿನ ಒಡೆಯರಿಗೆ ಕೊಡಬೇಕೆಂದು ನಿಶ್ಚಯ ಮಾಡಿಕೊಂಡಿದ್ದೆ." ಎಂದು ಹೇಳಿದಳು ಕನಕಲತೆ.

ನೋಟನ್ನು ಕನಕಲತೆ ಖರ್ಚು ಮಾಡಿದಳು. ಇದನ್ನು ಕೇಳಿ ಸುಶೀಲಾನಿಗೆ ಮತ್ತಿಷ್ಟು ಆಶ್ಚರ್ಯವಾಯಿತು. ಕನಕನಿಗೆ ಸಿಗುವುದು ತಿಂಗಳಿಗೆ ಹದಿನೈದು ರೂಪಾಯಿ. ಅವಳಿಗೆ ಇದೇ ಹೆಚ್ಚು. ಕನಕನೂ ಇದನ್ನು ಈ ಮೊದಲು ಎಷ್ಟೋ ಸಾರೆ ಹೇಳಿದ್ದಳು. ಆದರೂ ನೂರು ರೂಪಾಯಿ ಅವಳು ಏಕೆ ಖರ್ಚು ಮಾಡಿದಳು?

"ಏತಕ್ಕೆ ನೀನು ಖರ್ಚು ಮಾಡಿದೆ?" ಸುಶೀಲಾ ಕೇಳಿದಳು.

ಕನಕ ಏನು ಉತ್ತರ ಕೊಡುವಳು? ಸುಮ್ಮನಾದಳು. ಸುಮ್ಮನಾದುದನ್ನು ನೋಡಿ ಸುಶೀಲಾ ಮತ್ತೆ ಕೇಳಿದಳು — "ನೂರು ರೂಪಾಯಿ ಏತಕ್ಕೆ ಖರ್ಚು ಮಾಡಿದೆ?"

ಕಾಲಿಗೆ ಬಿದ್ದು, ಇನ್ನು ಮೇಲೆ ಇಂಥ ಕೆಲಸವನ್ನು ಮಾಡುವುದಿಲ್ಲ. ಕಾರಣವನ್ನು ಮಾತ್ರ ಈಗ ಕೇಳಬೇಡ; ಮುಂತಾಗಿ ಹೇಳಬೇಕೆಂದು ಆಲೋಚನೆ ಮಾಡಿದಳು.

ಅವಳು ಮೆಲ್ಲಗೆ ಅಸ್ಪಷ್ಟ ಸ್ವರದಿಂದ—"ಇನ್ನು ಹೀಗೆ ಮಾಡುವುದಿಲ್ಲ." ಎಂದಳು. ಭಯ ಲಜ್ಜೆಗಳಿಂದ ಅವಳಿಗೆ ಹೆಚ್ಚು ಮಾತನಾಡುವುದಾಗಲಿಲ್ಲ.

ಸುಶೀಲಾ ವಿರಕ್ತಳಂತೆ ಒಂದೆರಡು ಸಾರಿ ಕಾರಣ ಕೇಳಿದಳು. ಆದರೆ ಕನಕ ಮೌನವಾಗಿಯೇ ಇದ್ದಳು. ಹೆದರಿ ಹೌಹಾರಿದಂತಿದ್ದಳು. ಗಾಳಿ ಬಂದು ದೂಡಿದರೂ ಬೀಳುತ್ತಿದ್ದಳು.

ಯಾವುದೋ ಒಂದು ನಿಂದ್ಯವಾದ ಕೆಲಸಕ್ಕೆ ಖರ್ಚು ಮಾಡಿರಬೇಕೆಂದು ಸುಶೀಲಾ ವಿಚಾರ ಮಾಡಿದಳು! ಇದಕ್ಕಾಗಿಯೇ ಅವಳು ಹೇಳಲೊಲ್ಲಳು. ಕನಕನ ಮಾತು ಕೇಳಿ ಅವಳು ನೊಂದುಕೊಂಡಳು, ಸಿಟ್ಟಾದಳು. ನೋಟು ಸಿಕ್ಕುವನ್ನು ಆಗಲೇ ಅವಳು ಹೇಳದೆ ಇದ್ದುದೇ ಬಹಳ ತಪ್ಪು. ಮೇಲಾಗಿ ಅದನ್ನು ವೆಚ್ಚ ಬೇರೆ ಮಾಡಿದ್ದಾಳೆ. ಯಾವುದಕ್ಕೆ ಖರ್ಚು ಮಾಡಿದಳೊ! ತಪ್ಪನ್ನಾದರೂ ಒಪ್ಪಿಕೊಂಡಿದ್ದರೆ ಒಳಿತಾಗುತ್ತಿತ್ತು. ಆದರೆ ಅವಳು ಅದನ್ನೂ ಮಾಡಲಿಲ್ಲ. ಎಷ್ಟು ಕೇಳಿದರೂ ಅವಳು ಹೇಳಲಿಲ್ಲ. ಅಂದಮೇಲೆ ಕನಕನ ಅಪರಾಧವು ಬಹಳ ಹಿರಿಯದು. ಕೆಲವು ತಿಂಗಳ ಹಿಂದೆ ಅವಳು ಒಂದು ತಪ್ಪು ಮಾಡಿದ್ದಳು. ಅದಕ್ಕಿಂತಲೂ ಇದು ಹೆಚ್ಚಿನದು! ದೊಡ್ಡದು! ಮತ್ತೆ ಇಂಥ ಎಷ್ಟು ತಪ್ಪು ಮಾಡಿದಳೋ, ಏನೊ. ಎರಡು ಸಾರಿ ಮಾತ್ರ ಸಿಕ್ಕಳು!

ಕನಕನ ಹೆಸರು ಎತ್ತಿದರೆ ಸುಶೀಲಾ ಹೇಸಿಕೊಳ್ಳುತ್ತಾಳೆ. ಕನಕ ಕಳ್ಳಿ, ಸುಳ್ಳಿ, ಹಿರಿಯರ ಮಾತನ್ನು ಕೇಳುವುದಿಲ್ಲ ಮುಂತಾಗಿ ತಿಳಿದುಕೊಂಡಳು. ಕನಕನಲ್ಲಿ ಇನ್ನೂ ಎಷ್ಟೆಷ್ಟು ದೋಷಗಳಿವೆಯೋ ಏನೊ, ಇವೆಲ್ಲ ದೋಷಕ್ಕೆ ಮೂಲವೆಂದರೆ ಈಶ್ವರ-ಭಕ್ತಿಯಿಲ್ಲದ್ದೇ. ಈಶ್ವರನ ಮೇಲೆ ಭಕ್ತಿಯಿದ್ದರೆ ಯಾವ ಅನುಚಿತ ಕಾರ್ಯಕ್ಕೂ ಮನಸ್ಸೆಳಸುವುದಿಲ್ಲ. ಇನ್ನು ಕನಕನ ಸ್ವಭಾವವನ್ನು ಹೇಗೆ ಸುಧಾರಿಸುವುದು? ಹೀಗೆ ವಿಚಾರ ಮಾಡುತ್ತ ಸುಶೀಲಾ ಬಹಳ

ಬೇಗುದಿಗೊಂಡಳು. ಕನಕನ ಮೋರೆ ನೋಡುವುದು ಕೂಡ ಅವಳಿಗೆ ಬೇಡ ವಾಯಿತು. ಅವಳ ನಮ್ರವಾದ ಮೂರ್ತಿ ಅವಳಿಗೆ ಕುಟಿಲೆಯಂತೆ ಕಾಣಿಸ ಹತ್ತಿತು. ಕನಕನ ವಿಷಯಕ್ಕೆ ಒಳಗೊಂದು, ಹೊರಗೊಂದು ಕಂಡುಬರಹತ್ತಿ ದುದರಿಂದ ಸುಶೀಲಾಸಿಗೆ ಮತ್ತಿಷ್ಟು ಕೆಡುಕೆನಿಸಿತು. ಕನಕನಲ್ಲಿ ಈ ಗುಣಗಳಿರು ವುದರಿಂದಲೇ ಚಾರುಶೀಲಾ ಅವಳನ್ನು ಪ್ರೀತಿಸುತ್ತಿದ್ದಿಲ್ಲವೆಂದು ಸುಶೀಲಾ ನಿಗೆನಿಸಿತು. ಕನಕನನ್ನು ಪ್ರೀತಿಸಿ ತಾನು ದೊಡ್ಡ ತಪ್ಪು ಮಾಡಿದೆನೆಂದು ಮರುಗಿದಳು.

ಕನಕನಿಗೆ ಉಚಿತವಾದ ಶಿಕ್ಷೆಯನ್ನು ಹುಡುಕಿದಳು, ಸಿಗಲಿಲ್ಲ. "ಇಂದಿ ನಿಂದ ಹನ್ನೆರಡು ದಿನಗಳವರೆಗೆ ಒಬ್ಬಳೇ ಏಕಾಂತವಲ್ಲಿದ್ದು, ತಪ್ಪನ್ನು ಕ್ಷಮಿಸಲು ದೇವರನ್ನು ಬೇಡಿಕೊ" ಎಂದು ಸುಶೀಲಾ ಕನಕನಿಗೆ ಆಜ್ಞಾಪಿಸಿದಳು.

## ಅವರೇ ಇವರು

ಉಡಲು ಬಟ್ಟೆ, ಉಣ್ಣಲು ಅನ್ನ ಸಮೃದ್ಧಿಯಾಗಿದ್ದರೆ ದಿನಗಳೆಯುವು ದೇನು ತಡ? ನೀಡು ಕುಡಿದಂತೆ ಖಟ್ಲೆಯ ದಿನವು ಬಂದೇಬಿಟ್ಟಿತು. ಪ್ರಮೋದ ಬಾಬು, ಯಾಮಿನೀನಾಥರಿಬ್ಬರೂ ತಮ್ಮ ಮೂರು-ನಾಲ್ಕು ಮಂದಿ ಗೆಳೆಯ ರನ್ನು ಕರೆದುಕೊಂಡು ಅಲೀಪುರ ಕೋರ್ಟಿಗೆ ಬಂದರು. ಅಲೀಪುರದಲ್ಲಿ ಒಬ್ಬ ಬಂಗಾಲೀ ಡಿಪ್ಟೀ ಕಲೆಕ್ಟರನು ಪ್ರಕರಣ ನಡೆಸುವನು. ಪ್ರಕರಣವು ಪ್ರಾರಂಭ ವಾಯಿತು. ವಾದಿ, ಪ್ರತಿವಾದಿಗಳಿಬ್ಬರೂ ತಮ್ಮ-ತಮ್ಮ ಸ್ಥಳದಲ್ಲಿ ಬಂದು ನಿಂತರು. ಎರಡೂ ಪಕ್ಷದ ವಕೀಲರು ತಮ್ಮ-ತಮ್ಮ ಹೇಳಿಕೆಯನ್ನು ಸುರುವು ಮಾಡಿದರು.

ಆದರೆ ಪ್ರಮೋದನ ನೇತ್ರಗಳು ಸ್ಥಿರವಿವೆ, ಚಿತ್ತವು ವ್ಯಾಕುಲವಾಗಿದೆ. ಅಲ್ಲಿ ನಡೆದಿರುವುದರ ಕಡೆಗೆ ಅವನ ಲಕ್ಷ್ಯವಿಲ್ಲ. ಅವನು ಕೇವಲ ನ್ಯಾಯಾ ಧೀಶನನ್ನು ನೋಡುತ್ತಿದ್ದಾನೆ. ನ್ಯಾಯಾಧೀಶನನ್ನು ಎಲ್ಲಿಯೋ ನೋಡಿದಂತೆ ಅವನಿಗೆನಿಸಹತ್ತಿತು; ಆದರೆ ಎಲ್ಲಿ, ಯಾವಾಗ ನೋಡಿದ್ದು ಸರಿಯಾಗಿ ನೆನಪಾಗಲೊಲ್ಲದು. ಕೊನೆಗೆ ನಿರುಪಾಯನಾಗಿ ಹತ್ತಿರವೇ ಇದ್ದ ಯಾಮಿನೀ ನಾಥನನ್ನು ಕೇಳಿದ. ಅವನು ಮೆಲ್ಲಗೆ ನ್ಯಾಯಾಧೀಶನ ಹೆಸರು ಮಿ. ಹಿರಣ್ಯ

ಕುಮಾರನೆಂದು ಹೇಳಿದ. ಅವರನ್ನು ಗುರುತಿಸಲು ಆಗ ವಿಲಂಬವಾಗಲಿಲ್ಲ. ಈ ಹಿರಣ್ಯ ಕುಮಾರರು ಬೇರೆ ಯಾರೂ ಅಲ್ಲ. ಎಂಟು ವರ್ಷಗಳ ಹಿಂದೆ ತೋಟದಲ್ಲಿ ಕನಕ ಪ್ರಮೋದರ ಬಡಿದಾಟ ನಡೆದಾಗ ಕನಕಳನ್ನೆತ್ತಿಕೊಂಡ ಹಿರಣ್ಯ ಕುಮಾರರೇ ಇವರು. ಪ್ರಮೋದನಿಗೆ ಅಪಮಾನ ಮಾಡಿದಾಗ ಹಿರಣ್ಯ ಕುಮಾರರು ಹದಿನೆಂಟು ವರುಷದವರಿದ್ದರು. ಪ್ರಮೋದ ಎಂಟು ವರುಷ ದವನಿದ್ದ. ಪ್ರಮೋದನ ಕಣ್ಣಮುಂದೆ ಎಂಟು ವರುಷದ ಹಿಂದಿನ ಸಂಗತಿ ಕುಣಿಯಹತ್ತಿತು. ಅವನ ಮನಸ್ಸಿನಲ್ಲಿ ಚಿಂತಾಪ್ರವಾಹವು ಹರಿಯಹತ್ತಿತು. ಎಂದಮೇಲೆ ಅವನಿಗೆ ಬೇರೆ ವಸ್ತು ಹೇಗೆ ತಾನೆ ಕಾಣಿಸಬಲ್ಲದು! ಪ್ರಮೋದ ನಲ್ಲಿ ಸೇಡಿನ ಭಾವನೆ ಈಗ ಇಲ್ಲ. ಆದರೆ ಏಕೊ, ಅವನು ಹಿರಣ್ಯರನ್ನು ನೋಡಲಾರದಾದ. ಹಿರಣ್ಯ ಕುಮಾರರನ್ನು ನೋಡಿದಮೇಲೆ ಅವನ ಮನಸ್ಸು ಕದಡಿತು. ನ್ಯಾಯಾಧೀಶನನ್ನು ನೋಡುತ್ತಲೆ ಪ್ರಮೋದನು ಹೆದರಿದ. ಮೊದಲಿನ ಹುರುಪು ಹುಮ್ಮಸ್ಸು ಎಲ್ಲಿ ಮರೆಯಾದುವೋ ಏನೊ, ನಿಶ್ಚಯ ವಾಗಿ ಈ ಖಟ್ಲೆಯಲ್ಲಿ ನಾವು ಸೋಲುವೆವೆಂದು ಅವನು ಸೆರಗಿಗೆ ಗಂಟು ಹೊಡೆದುಕೊಂಡ. ಕೊನೆಗೆ ಹಾಗೇ ಆಯಿತು. ಪ್ರಮೋದ, ಯಾಮಿನೀನಾಥರ ಮೇಲೆ ದೋಷವು ಸಿದ್ಧವಾಯಿತು. ಇಬ್ಬರೂ ಈಗ ತಪ್ಪುಗಾರರಾದರು. ಯಾಮಿನಿಗೆ ನೂರು ರೂಪಾಯಿ, ಪ್ರಮೋದನಿಗೆ ಅಯ್ವತ್ತು ರೂಪಾಯಿ ದಂಡವಾಯಿತು. ಎಷ್ಟೆಂದರೂ ತಾನು ನಿರ್ದೋಷಿ, ಬಹಳವೆಂದರೆ ತನಗೆ ಹತ್ತು-ಹದಿನಯ್ದು ರೂಪಾಯಿ ದಂಡವಾಗುವುದೆಂದು ಪ್ರಮೋದ ನಿಶ್ಚಿಂತ ನಾಗಿದ್ದ. ಅದಕ್ಕಾಗಿ ಅವನು ಕೇವಲ ಇಪ್ಪತ್ತು ರೂಪಾಯಿ ತಂದಿದ್ದ. ಅಯ್ವತ್ತರ ಹೆಸರು ಕೇಳಿ ಅವನು ದೊಡ್ಡ ಪೇಚಿನಲ್ಲಿ ಬಿದ್ದ. ಮನಸ್ಸಿನೊಳಗೇ ಬಹಳ ಮುನಿದುಕೊಂಡ. ಹಿರಣ್ಯ ಕುಮಾರು ತನ್ನನ್ನು ಗುರುತಿಸಿ ಹೀಗೆ ಮಾಡಿದ್ದಾರೆಂದು ತಿಳಿದ. ಆದರೆ ವಾಸ್ತವವಾಗಿ ಹಿರಣ್ಯಬಾಬು, ಅವನನ್ನು ಗುರುತಿಸಿದ್ದಿಲ್ಲ. ಹಿರಣ್ಯಕುಮಾರರು ನೋಡಿದಾಗ ಪ್ರಮೋದ ಹತ್ತು ವರುಷದ ಹುಡುಗನಿದ್ದ. ಈಗ ಪ್ರಮೋದ ಹನಯುದ ಹೊಸ್ತಿಲದಲ್ಲಿ ಕಾಲಿಟ್ಟಿದ್ದಾನೆ. ಬಹಳ ಬದಲಾಗಿದ್ದಾನೆ. ಏನೇ ಆಗಲಿ, ದಂಡದ ಹಣವನ್ನಂತೂ ತುಂಬಲೇ ಬೇಕಲ್ಲ, ಕೊಡದೆ ಬಿಡುವಂತಿಲ್ಲ. ನಿರುಪಾಯನಾಗಿ ಯಾಮಿನಿಯಲ್ಲಿ ಕೈಗಡ ಇಸಿದುಕೊಂಡು ತುಂಬಿದ. ಈಗ ಅವನಿಗೆ ಅಪಮಾನವಾಯಿತು. ಆದುದರಿಂದ ಹಿರಣ್ಯಕುಮಾರರ ಮೇಲಿದ್ದ ಮುನಿಸು ಮತ್ತಿಷ್ಟು ಹೆಚ್ಚಿತು.

## ಹೊಸ ಸಂಶಯ

ಪ್ರಮೋದನು ಯಾಮಿನೀನಾಥನ ಮನೆಯಿಂದ ನಡೆಯುತ್ತ ಹೊರಟ. ಶ್ರೀಮಂತರ ಮಕ್ಕಳಿಗೆ ನಡೆಯುವುದೆಂದರೆ ಅಪಮಾನ. ಆದರೆ ಈಗ ಪ್ರಮೋದನಿಗೆ ಇದಾವುದರ ಕಡೆಗೂ ಗಮನವಿಲ್ಲ. ಚುರುಕಾದ ಬಿಸಿಲಿರಲಿ, ಆಣೆಕಲ್ಲಿನ ಮಳೆ ಸುರಿಯುತ್ತಿರಲಿ, ವಿಶೇಷವಾಗಿ ಪ್ರಮೋದ ನಡೆಯುತ್ತಲೇ ಹೋಗುವನು. ನಡೆಯುವುದರಿಂದ ಅವನಿಗೆ ಒಂದು ಬಗೆಯ ಆನಂದದ ಅನುಭವವಾಗುತ್ತಿತ್ತು. ಇದೊಂದು ಮಾತಿನಲ್ಲಿ ಅವನಿಗೆ ಕಲಕತ್ತೆಯ ವಾತಾವರಣವು ಪ್ರತಿಕೂಲವಾಗಿತ್ತು.

ಪ್ರಮೋದನಿಗೆ ಖಟ್ಲೆಯಲ್ಲಿ ಸೋಲಾದ ಬಗ್ಗೆ ಉಂಟಾದ ವಿಷಾದವೀಗ ಬಹು ಮಟ್ಟಿಗೆ ಕಡಮೆಯಾಯಿತು. ಆದರೆ ಯಾವಾಗಲೂ ಪ್ರಸನ್ನದಿಂದಿರುವ ಪ್ರಮೋದನ ಮೋರೆಯ ಮೇಲೆ ಚಿಂತೆ, ವಿಷಾದಗಳು ತಾಂಡವವಾಡುತ್ತಿದ್ದುವು. ಸೋಲಾದಾಗಿನಿಂದ ಪ್ರಮೋದನಿಗೆ ಒಂದು ಬಗೆಯ ವಿಷಾದವೆನಿಸಿತ್ತು. ಖಟ್ಲೆಯ ತೀರ್ಪು ಈಗಲೂ ಅವನ ಕಿವಿಯಲ್ಲಿ ಪ್ರತಿಧ್ವನಿಗುಡುತ್ತಿತ್ತು. ಅದು ಅವನ ಮನಸ್ಸಿನೊಳಗೆ ಮನೆ ಮಾಡಿತ್ತು. ದಾರಿಯುದ್ದಕ್ಕೂ ಒಬ್ಬನೇ ಏನೇನನ್ನೋ ಆಲೋಚಿಸುತ್ತ ಹೊರಟಿದ್ದ. ಆ ವಿಚಾರಗಳ ನಡುವೆ ಮಿಂಚಿನಂತೆ ವನಬಾಲೆ ನೀರಜಾನ ಮೂರ್ತಿ ಹೊಳೆದು ಮಾಯವಾಗುತ್ತಿತ್ತು. ಬರುವಾಗ ನೀರಜಾನಿಗೆ ಏಕೊ ಭೆಟ್ಟಿಯಾಗಲಿಲ್ಲ. ಏನೇ ವಿಚಾರ ಮಾಡಿದರೂ ನಡು-ನಡುವೆ ಅವಳ ಮೂರ್ತಿ ಹಾಯ್ದು, ಸುಳಿದು ಮಾಯವಾಗುತ್ತಿತ್ತು. ಒಮ್ಮೊಮ್ಮೆ ಆ ಸಂನ್ಯಾಸಿಯ ರಾತ್ರಿಯ ಆ ಮಾತುಗಳು ನೆನಪಿಗೆ ಬರುತ್ತಿದ್ದುವು. ಸಂನ್ಯಾಸಿಯ ಸಂಶಯವನ್ನು ನಿವಾರಿಸುವ ಬಗೆ ಹೇಗೆ? ನೀರಜಾನ ತಂದೆಯ ಮುಂದೆ ದೋಷಿಯೆಂದು ಹೆಸರಿಡಿಸಿಕೊಳ್ಳುವುದು ಎಷ್ಟು ಹಾಸ್ಯಾಸ್ಪದವಾಗುವುದಲ್ಲ? ಇದೇ ಪ್ರಕಾರ ಬಗೆಬಗೆಯ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ಪ್ರಮೋದ ಚೌರಂಗೀ ಸ್ಟ್ರೀಟಿನ ಮೂಲೆಗೆ ಬಂದ. ಹತ್ತಿರದಲ್ಲಿಯೇ ಒಂದು ಮಠವಿತ್ತು. ಮಠದ ಸಮೀಪದಲ್ಲಿ ಕೆಲವು ಬಾಲಕ-ಬಾಲಿಕೆಯರು ಆಡುತ್ತಿರುವುದು ಕಾಣಿಸಿತು. ಹೊತ್ತು ಮುಳುಗುತ್ತಿದ್ದಿತು. ಸೂರ್ಯನು ಪಶ್ಚಿಮದಲ್ಲಿ ವಿಲೀನವಾಗುತ್ತಿದ್ದ. ಪ್ರಮೋದ ಒಮ್ಮೆ ಮುಳುಗುತ್ತಿರುವ ಸೂರ್ಯನನ್ನು, ಮತ್ತೊಮ್ಮೆ ಆಡುವ ಹುಡುಗರನ್ನು ನೋಡುತ್ತಿದ್ದ. ಆ ಮೇಲೆ

ಮತ್ತೆ ತನ್ನ ಚಿಂತೆಗಳ ಕೂಡ ಹೊಡೆದಾಡುತ್ತಿದ್ದ. ಪ್ರಮೋದನು ಮತ್ತೆ ನೋಡಿದ, ಸೂರ್ಯ ನಾರಾಯಣನ ಹಳದಿ ಬಣ್ಣದ ಕಿರಣಗಳು ಬಂದು ಒಬ್ಬ ಸಂನ್ಯಾಸಿಯ ಮುಖಮಂಡಲವನ್ನು ಬೆಳಗುತ್ತಿವೆ. ಕೂಡಲೇ ಪ್ರಮೋದನಿಗೆ ನೀರಜಾನ ತಂದೆಯ ಗುರುತು ಹತ್ತಿತು. ಗುರುತಿಸಿದ ಕೂಡಲೇ ಅವನ ಮೋರೆ ಆನಂದದಿಂದ ಹಿಗ್ಗಿತು. ಆ ಮಠದ ಹತ್ತಿರ ಹೋಗಬೇಕೆಂದು ದಾರಿಯನ್ನು ನೋಡಹತ್ತಿದ. ದಾರಿಯಾವರೂ ಬೇಗನೆ ಸಿಕ್ಕಿತು. ಪ್ರಮೋದನು ತುಸು ವಾದರೂ ವಿಲಂಬ ಮಾಡಲಿಲ್ಲ. ಕೂಡಲೇ ಹೋಗಿ ಸಂನ್ಯಾಸಿಯ ಮುಂದೆ ನಿಂತುಕೊಂಡ. ಪ್ರಮೋದನು ಮುಂದೆ ನಿಂತುದನ್ನು ನೋಡಿ ಸಂನ್ಯಾಸಿಗೆ ಸೋಜಿಗವೆನಿಸಿತು.

ಪ್ರಮೋದನು ಸಂನ್ಯಾಸಿಗೆ ಕರ ಜೋಡಿಸಿ ನಮಸ್ಕಾರ ಮಾಡಿದ. "ಮಹನೀಯರೆ, ನಿಮಗೆ ಹೇಳಬೇಕಾದ ಮಾತುಗಳಿವೆ." ಎಂದ. ನೀರಜಾನ ಸಂಬಂಧದ ಮಾತು ಇರಬೇಕೆಂದು ಸಂನ್ಯಾಸಿ ಪ್ರಮೋದನನ್ನು ಏಕಾಂತದಲ್ಲಿ ಕರೆದೊಯ್ದ.

"ಮಹನೀಯರೆ, ನಾನು ನಿಮ್ಮನ್ನು ಹುಡುಕುತ್ತಲಿದ್ದೆ, ನೀವು ಕೂಡಿದಿರಿ, ಸಂತೋಷ. ನನಗೆ ಈಗಾದ ಆನಂದವನ್ನು ಬಣ್ಣಿಸುವುದು ಆದಿಶೇಷನಿಗೂ ಅಸವಳವು." ಪ್ರಮೋದನೆಂದ.

"ನನಗೆ ಏನು ಹೇಳಬೇಕೆನ್ನುತ್ತೀರಿ? ನೀರಜಾನನ್ನು ನನಗೆ ಒಪ್ಪಿಸಬೇಕೆಂದು ನಿಶ್ಚಯ ಮಾಡಿಕೊಂಡಿರುವಿರಾ?" ಎಂದು ಕೇಳಿದ. ಅವನ ಮಾತಿನಲ್ಲಿ ಕುತೂಹಲ ಮತ್ತು ಗಾಂಭೀರ್ಯವಿದ್ದಿತು.

ಪ್ರ— "ಮತ್ತೆ ಅವಿಶ್ವಾಸದ ಮಾತನಾಡಿ ನನ್ನ ಗಾಯದ ಮೇಲೆ ಬರೆ ಕೊಡುತ್ತೀರಿ? ನೀವು ನನ್ನನ್ನು ದೋಷಿಯೆಂದು ತಿಳಿಯುತ್ತೀರಿ. ಇದರಿಂದ ನನಗಾಗುವ ವೇದನೆಯನ್ನು ನೀವೇನು ಬಲ್ಲಿರಿ? ನಾನು ನಿಮ್ಮ ಅವಿಶ್ವಾಸದ ಕಟ್ಟನ್ನು ಒಡೆಯುವೆ. ನೀರಜಾನ ನಿಜವಾದ ಸಂಗತಿಯನ್ನು ನಿಮಗೆ ಹೇಳುವೆ. ಎಂದರೆ ನೀವೇ ನನಗೆ ಆಗ ನಿರ್ದೋಷಿಯೆನ್ನುವಿರಿ."

ಪ್ರಮೋದನ ಮಾತು ಕೇಳಿ ಸಂನ್ಯಾಸಿ ಸುಮ್ಮನೆ ಕುಳಿತಿದ್ದ.

ಪ್ರ— "ಆ ದಿನ ನೀರಜಾ ಎಲ್ಲಿರಬಹುದೆಂದು ನನಗೆ ಕಲ್ಪನೆ ಕೂಡ ಇರಲಿಲ್ಲ. ಆದರೆ ಇಂದು ನಿಮ್ಮ ಮಗಳು ನಿಮಗೆ ಸಿಗುವಳು."

"ಎಲ್ಲಿ?" ಸಂನ್ಯಾಸಿ ಸಂಶಯದಿಂದ ಎಂದ

ಪ್ರಮೋದನು ಸಂಕ್ಷಿಪ್ತವಾಗಿ ನೀರಜಾನ ಎಲ್ಲ ವೃತ್ತಾಂತವನ್ನು ಹೇಳಿದ. “ ನೀರಜಾನ ವಿಷಯವಾಗಿ ಯಾಮಿನೀನಾಥನು ನಿಮಗೆ ಬಹಳ ಪತ್ರ ಬರೆದಿದ್ದಾನೆಂದು ಕೇಳಿದ್ದೇನೆ; ಆದರೆ ನಿಮಗೆ ಒಂದೂ ಪತ್ರ ಸಿಕ್ಕಿಲ್ಲವೆಂದು ಕಾಣುವುದು. ಅದರಿಂದಲೇ ಗಡಿಬಿಡಿಯಾಗಿದೆ. ಕೂಡಲೆ ಯಾಮಿನೀನಾಥನಲ್ಲಿಗೆ ಹೋಗಿರಿ. ನಿಮಗೆ ಎಲ್ಲ ಸಂಗತಿಯೂ ಗೊತ್ತಾಗುವುದು ”

“ ಯಾಮಿನೀನಾಥ? ಅವನೇ ಅಲ್ಲವೆ, ನಿಮ್ಮ ಕೂಡ ಆ ದಿವಸ ನಮ್ಮಲ್ಲಿಗೆ ಬಂದಿದ್ದನಲ್ಲ? ನಿಮ್ಮ ಕೂಡ ಆತನಿಗೂ ನನ್ನ ಮಗಳು ಆಶ್ರಯವಿತ್ತಿದ್ದಳಲ್ಲವೆ? ಆತನ ಹೆಸರು ಯಾಮಿನೀನಾಥನೇನು? ಆತನು ನೀರಜಾನನ್ನು ಪಾರು ಮಾಡಿದನೆ, ರಕ್ಷಣೆ ಮಾಡಿದನೆ? ರಕ್ಷಣೆಯನ್ನಂತೂ ಮಾಡಿದ. ಆದರೆ ಆವಳನ್ನು ಅವಳ ತಂದೆಗೆ ಏಕೆ ಒಪ್ಪಿಸಲಿಲ್ಲ? ಅವನು ಆ ಬಗ್ಗೆ ಸುದ್ದಿಯನ್ನಾದರೂ ಕಳಿಸಬಾರದೆ! ” ವಿಸ್ಮಯದಿಂದ ಕೇಳಿದ ಸಂನ್ಯಾಸಿ.

ಪ್ರಮೋದ— “ ಮಹನೀಯರೆ, ಅವನ ಮೇಲೆ ಸಂದೇಹಪಡಬೇಡಿರಿ. ಸುದ್ದಿ ತಿಳಿಸಿದ್ದಾನೆ. ಇದರಲ್ಲಿ ಅವನ ತಪ್ಪಿಲ್ಲ. ಆದರೆ ನಿಮಗೆ ಪತ್ರ ಮುಟ್ಟಿಲ್ಲ. ಅವನೇನು ಮಾಡಬೇಕು? ಅವನದೇನು ತಪ್ಪು? ”

ಪ್ರಮೋದನ ಮಾತಿಗೆ ಸಂನ್ಯಾಸಿ ಉತ್ತರ ಕೊಡಲಿಲ್ಲ.

ಯಾಮಿನೀನಾಥನ ಪರಿಚಯ ಕೇಳಿ ಅವನು ಚಿಂತೆಗೊಳಗಾಗಿದ್ದ. ಬಹಳ ಹೊತ್ತು ಸುಮ್ಮನಿದ್ದ. ಆ ಮೇಲೆ ಪ್ರಮೋದನ ಮಾತಿಗೆ ಉತ್ತರ ಕೊಡುತ್ತ— “ ಬರಿಯ ಸುದ್ದಿ ಕೊಟ್ಟರೆ ನನಗೆ ಸಿಕ್ಕಂತಾಯಿತೆ? ಅವಳು ಸಿಗುವ ಸಂಭವವಿಲ್ಲ. ” ಎಂದ.

ಪ್ರ— “ ಮಹನೀಯರೆ, ಹಾಗೆನ್ನಬೇಡಿರಿ. ಅವನು ನಿರ್ದೋಷಿ. ಅವನಿಗೂ ದೋಷಿಯೆಂದು ಹೆಸರಿಡಬೇಡಿರಿ. ಯಾಮಿನೀನಾಥನೇ ನೀರಜಾನನ್ನು ಉದ್ಧರಿಸಿದ್ದಾನೆ. ”

ಸಂನ್ಯಾಸಿ ಪ್ರಮೋದನ ಮಾತನ್ನು ಕೇಳಿಯೂ ಕೇಳದವರಂತೆ ಮಾಡಿ— “ ಇಲ್ಲಿಯವರೆಗೂ ನಿಮಗೆ ನೀರಜಾನ ವಿಷಯಕ್ಕೆ ಏನೂ ಗೊತ್ತಿದ್ದಿಲ್ಲವೆ? ” ಎಂದು ಕೇಳಿದ.

ಪ್ರ— “ ಇಲ್ಲ. ”

ಸ— “ ಯಾಮಿನೀನಾಥನು ನಿಮ್ಮ ಜೀವದ ಗೆಳೆಯನಲ್ಲವೆ? ”

ಈಗ ಪ್ರಮೋದ ಪೇಚಿನಲ್ಲಿ ಬಿದ್ದ—“ ಗೆಳೆಯನೇನೊ ಹೌದು. ಆದರೆ ನನ್ನ ಕೂಡ........ ” ಎಂದ.

“ ಇನ್ನು ಹೆಚ್ಚು ಹೇಳುವ ಆವಶ್ಯಕತೆಯಿಲ್ಲ. ನಾನು ಈಗಲೇ ಯಾಮಿನಿಯ ಮನೆಗೆ ಹೋಗುತ್ತೇನೆ. ನೀರಜಾಳ ಬಾಯಿಂದ ಕೇಳದೆ ನಾನು ಏನನ್ನೂ ಹೇಳಲಾರೆ. ” ಸಂನ್ಯಾಸಿ ನಡುವೆಯೇ ಬಾಯಿ ಹಾಕಿ ಹೇಳಿದ.

ಇಷ್ಟು ಮಾತನಾಡಿ ಸಂನ್ಯಾಸಿ ಯಾಮಿನೀನಾಥನ ಮನೆಯ ಕಡೆಗೆ ಹೊರಟ. ಸಂನ್ಯಾಸಿ ಭವಾನೀಪುರದಲ್ಲಿ, ತಮ್ಮ ಒಬ್ಬ ಗೆಳೆಯನಲ್ಲಿ, ನೀರಜಾಳನ್ನು ಕುರಿತು ವಿಚಾರ ಮಾಡಲು ಹೋಗಬೇಕೆನ್ನುತ್ತಿದ್ದ; ಆದರೆ ಅಷ್ಟರಲ್ಲಿ ಅವನಿಗೆ ಅವಳು ಇರುವ ಸ್ಥಳ ಗೊತ್ತಾಯಿತು. ಅದರಿಂದ ಅಲ್ಲಿಗೆ ಹೋಗದೆ ಯಾಮಿನಿಯ ಮನೆಯ ಹಾದಿ ಹಿಡಿದ.

## ಹರುಷದಲ್ಲಿ ವಿಷಾದ

ಅದೇ ದಿವಸ ಸಂಜೆಗೆ ಒಂದು ಸಂಗತಿ ನಡೆಯಿತು. ಯಾಮಿನೀನಾಥನ ಮನೆಯ ಮುಂದೆ ಒಂದು ಸಣ್ಣ ಹೂದೋಟವಿದ್ದಿತು. ಅಲ್ಲಿ ನೀರಜಾ ಒಂದು ಗಿಳಿಯನ್ನು ಕೈಯಲ್ಲಿ ಹಿಡಿದುಕೊಂಡು ಆಡ್ತಾಡುತ್ತಿದ್ದಳು. ಅದನ್ನು ಹಿಡಿದುಕೊಂಡೇ ಅವಳು ಕೆರೆಯ ದಂಡೆಗೆ ಹೋದಳು. ಅಲ್ಲಿ ಹೋಗಿ ನೀರಜಾ ಕಮಲದಂತೆ ಕೋಮಲವಾಗಿದ್ದ ತನ್ನ ಕೈಗಳಿಂದ ಸ್ವಲ್ಪ ಕಮಲದ ಎಲೆಗಳನ್ನು ಕೊಯ್ದುಕೊಂಡಳು. ಕೆರೆಯ ನೀರು ಸ್ವಚ್ಛವಾಗಿತ್ತು, ಮಂದ ಮೃದು ಮಧುರವಾದ ಸಮೀರಣದ ಸ್ಪರ್ಶಕ್ಕೆ ಮೆಲ್ಲಮೆಲ್ಲಗೆ ಹೊಯ್ದಾಡುತ್ತಿತ್ತು. ಸಣ್ಣ ಸಣ್ಣ ತೆರೆಗಳೇಳುತಿದ್ದುವು. ಒಮ್ಮೊಮ್ಮೆ ಗಾಳಿಯಿಂದ ಗಿಡ-ಮರಗಳೂ ಅಲುಗಾಡುತ್ತಿದ್ದುವು. ಒಂದೆರಡು ಹೂಗಳೂ ಕೆರೆಯೊಳಗೆ ಬೀಳುತ್ತಿದ್ದುವು. ನೀರಜಾ ದಂಡೆಯ ಮೇಲೆ ನಿಂತುಕೊಂಡು ಸೃಷ್ಟಿಯ ಸೊಬಗನ್ನೂ ಲೀಲೆಯನ್ನೂ ತನ್ಮಯಳಾಗಿ ನೋಡುತ್ತಿದ್ದಳು, ಆನಂದದಿಂದ ನಲಿದಾಡುತ್ತಿದ್ದಳು.

ನೀರಜಾ ಸುಂದರವಾದ ಎಷ್ಟೋ ಹೂಗಳನ್ನು ಆರಿಸಿಕೊಂಡು ಉಡಿಯೊಳಗೆ ಹಾಕಿಕೊಂಡಳು. ಆ ಮೇಲೆ ಹಾಡಲಾರಂಭಿಸಿದಳು. ಅವಳೊಬ್ಬ ರಾಗಿಣಿಯೇನಿ. ಹಾಡನ್ನು ಹಾಡುತ್ತ ನೀರಜಾ ಕೇಳಿದಳು—“ ನನ್ನ ಕಷ್ಟವನ್ನು ನೀನು ಬಲ್ಲೆಯಾ? ಇಂದು ನಿನ್ನಿಂದ ನನ್ನ ದುಃಖ ಜ್ವಾಲೆಯನ್ನು

ಆರಿಸಿಕೊಳ್ಳುವೆ. ನಿನ್ನನ್ನು ನೋಡಿದರೆ ನನ್ನ ಎದೆ ತಣ್ಣಗಾಗುವುದು."

ಕೆಲ ಹೊತ್ತನ್ನು ನೀರಜಾ ಹೀಗೆಯೇ ಕಳೆದಳು. ಆ ಮೇಲೆ ಒಂದು ಪುಷ್ಪ ಶಯ್ಯೆಯನ್ನು ಸಿದ್ಧಪಡಿಸಿದಳು. ಅದರ ಮೇಲೆ ಗಿಳಿಯನ್ನು ಮಲಗಿಸ ಬೇಕೆಂದಳು. ಆದರೆ ಸುಕೋಮಲವಾದ ನೀರಜಾನ ಕೈಯ ಸುಖವನ್ನು ಬಿಟ್ಟು, ಹೂವಿನ ಮುಳ್ಳಿನ ಹಾಸುಗೆಯ ಮೇಲೆ ಅದೇಕೆ ಮಲಗುವುದು? ಅದಕ್ಕೆ ಮನಸ್ಸಾಗಲಿಲ್ಲ. ಅನಿಚ್ಛೆಯನ್ನು ತೋರಿಸಲು ಅದು ತನ್ನ ರೆಕ್ಕೆಗಳನ್ನು ಬಡಿಯಿತು. ನೀರಜಾ ಮತ್ತೆ ಅದನ್ನು ಹಾಸುಗೆಯ ಮೇಲೆ ಮಲಗಿಸಲು ಬಯಸಿದಳು. ಆದರೆ ಅದು ಅಡ್ಡಿ ಮಾಡಿತು. ಆಗ— "ಬಹಳ ಸುಂದರ ವಾದ ಹಾಸುಗೆಯನ್ನು ಸಿದ್ಧ ಮಾಡಿದ್ದೇನೆ. ನೀನು ತುಸು ಹೊತ್ತು ಇಲ್ಲಿಯೇ ಸುಖಪಡು. ನಾನೀಗಲೇ ಬರುತ್ತೇನೆ." ಎಂದಳು.

ಗಿಳಿ ಅವಳ ಮಾತನ್ನು ಕೇಳಲಿಲ್ಲ. ಅವಳ ಕೈಯ ಮೇಲೆ ಕುಳ್ಳಿರಲು ಹೋಯಿತು. ಆಗ ಅದನ್ನು ಕಮಲದೆಲೆಯಿಂದ ಹಿಡಿದು ಮಗುವಿನಂತೆ ಮಲಗಿಸಲು ಹೋದಳು.

ಗಿಳಿ ಸಿಟ್ಟಿಗೆದ್ದಿತು. ನೀರಜಾನ ಕೈಗೆ ಚುಂಚಿನಿಂದ ಕುಟುಕಿತು. ನೀರಜಾನೂ ಮೆಲ್ಲಗೆ ತನ್ನ ಕುಸುಮ ಸದೃಶವಾದ ಬೆರಳುಗಳಿಂದ ಹೊಡೆ ಯುತ್ತ— "ನಿನಗೇನೂ ತಿಳಿಯದು. ಇಲ್ಲಿಯೇ ಮಲಗಿಕೊಳ್ಳಬಾರದೆ." ಎಂದಳು.

ಗಿಳಿ ಅವಳ ಮೋರೆಯನ್ನು ನೋಡಹತ್ತಿತು. ಇದೇ ಹೊತ್ತಿಗೆ ಯಾಮಿನೀ ನಾಥನು ಬಂದ. ಅವನು ಇಡಿಯ ಉದ್ಯಾನದಲ್ಲಿಯೇ ಅವಳನ್ನು ಹುಡುಕಿ ಇಲ್ಲಿಗೆ ಬಂದ. ನಿಂತುಕೊಂಡೇ ನೀರಜಾ ಗಿಳಿಯೊಡನೆ ನಡೆಸಿದ ಮಾತನ್ನು ಕೇಳಹತ್ತಿದ. ನೀರಜಾ ಯಾಮಿನೀನಾಥನ ಕಡೆಗೆ ನೋಡಿದಳು. ಹುಡುಗ ರಂತೆ ನಕ್ಕು ಬಿಟ್ಟಳು; ಅವನೊಡನೆ ಮಾತನಾಡದೆಯೆ ಮತ್ತೆ ಗಿಳಿಯ ಜೊತೆ ಯಲ್ಲೇ ಮಾತನಾಡಹತ್ತಿದಳು.

ಯಾಮಿನೀನಾಥನು ಬಹಳ ಹೊತ್ತು ಸುಮ್ಮನೇ ನಿಂತುಕೊಂಡಿದ್ದ. ಕೊನೆಗೆ ವ್ಯಾಕುಲನಾಗಿ— "ನೀರಜಾ, ಯಾರ ಕೂಡ ಮಾತನಾಡುತ್ತಿ ದ್ದೀಯೆ?" ಎಂದ.

ನೀರಜಾ ಮೊದಲಿನಂತೆಯೇ ಕೆಳಗೆ ಮೊಗ ಮಾಡಿ— "ನನ್ನ ಗೆಳ ತಿಯ ಕೂಡ." ಎಂದಳು.

“ ನೀರಜಾ, ಸಾಯುವವರೆಗೂ ಗಿಳಿ ಮುಂತಾದ ಪಕ್ಷಿಗಳೇ ನಿಮ್ಮ ಗೆಳೆಯ-ಗೆಳತಿಯರಾಗುವರೆ? ನನ್ನ ಮನಸ್ಸಿನೊಳಗಿನ ಮಾತು ಮನಸ್ಸಿನೊಳಗೆಯೇ ಉಳಿಯಬೇಕೇನು ? ” ಇಷ್ಟು ಹೇಳಿ ಯಾಮಿನೀನಾಥನು ಒಮ್ಮೆ ಸುಯ್ದರೆದ.

ಬಹಳ ಹೊತ್ತು ಉತ್ತರದ ದಾರಿ ನೋಡಿದ. ಆದರೂ ನೀರಜಾ ಸುಮ್ಮನೇ ಇದ್ದಳು. ಆಗ ಮತ್ತೆ ಯಾಮಿನಿ ನಿಸ್ತಬ್ಧತೆಯನ್ನು ಭಂಗ ಮಾಡಿ—“ ನೀರಜಾ, ನಾನು ಇನ್ನೂ ಎಷ್ಟು ದಿವಸ ಈ ವೇದನೆಯನ್ನನುಭೋಗಿಸಲಿ? ” ಎಂದ.

ನೀರಜಾ— “ ಗಿಳಿಯಂತೂ ಮಲಗಿತು! ನಿಮಗೇಕೆ ಇನ್ನು ಕಷ್ಟ? ಎಂಥ ಯಾತನೆ ಹೇಳಿರಿ. ”

ಯಾಮಿನಿ— “ ನನ್ನ ಮನಃಕಾಂಕ್ಷೆ ಎಲ್ಲಿಯವರೆಗೆ ಅಪೂರ್ಣವಾಗಿಯೇ ಇರಬೇಕು? ”

ನೀರಜಾ— “ ಮನೋಕಾಂಕ್ಷೆಯೆ? ನೋಡಿರಿ. ನನ್ನ ಅಡವಿಯಲ್ಲಿ ಇಂಥ ದೊಡ್ಡ ದೊಡ್ಡ ಮನೆಗಳಿದ್ದಿಲ್ಲ. ಆದರೂ ನನಗೆ ಅವೇ ಸೇರುತ್ತಿದ್ದುವು, ಈಗಲೂ ಸೇರುತ್ತವೆ. ”

ಯಾಮಿನಿ— “ ನೀರಜಾ, ನನ್ನ ದುಃಖವು ನಿಮಗೆ ತಿಳಿಯದೆ? ನನ್ನ ದುಃಖದಲ್ಲಿ ನೀನೂ ಭಾಗಿಯಾಗಲಾರೆಯಾ? ನಿನಗೆ ದುಃಖವಾಗುವುದಿಲ್ಲವೆ? ನನ್ನ ಮಾತಿಗೆ ಉತ್ತರವನ್ನು ಕೂಡ ನೀನು ಕೊಡುವುದಿಲ್ಲವೇ? ”

ನೀರಜಾ— “ ಎಲಾ, ನಾನಂತೂ ಈ ತೋಟವನ್ನು ನೋಡಿ ಅನ್ಯಮನಸ್ಕಳಂತಾಗಿದ್ದೇನೆ. ನನ್ನ ಗುಡಿಸಲಿನ ಸುತ್ತುಮುತ್ತು ಇಂಥ ಸುಂದರವಾದ ಹೂವಿನ ಗಿಡ-ಮರಗಳಿಲ್ಲ. ನೀವು ಬರೆದ ಕೊನೆಯ ಕಾಗದವು ತಂದೆಗೆ ಮುಟ್ಟಿರಬಹುದೆ? ಪತ್ರ ಮುಟ್ಟಿದ್ದರೆ ಇಷ್ಟು ಹೊತ್ತಿಗೆ ಬಂದುಬಿಡುತ್ತಿದ್ದನಲ್ಲ? ಯಾವಾಗ ಅಲ್ಲಿಗೆ ಹೋಗುವೆನೊ, ಸುಖದಿಂದ ಮೊದಲಿನಂತೆ ಎಂದು ತಿರುಗಾಡುವೆನೊ ಎನಿಸಹತ್ತಿದೆ ನನಗೆ. ”

ಯಾಮಿನಿ— “ ವನದೇವಿ, ನಿಮ್ಮ ಇಚ್ಛೆಯಂತೆ ಕೆಲಸ ಮಾಡಿಲ್ಲವೇ? ನಿಮ್ಮ ಮಾತಿಗೆ ಯಾವಾಗ ಅಡ್ಡ ಬಂದಿದ್ದೇನೆ? ಹಾಂ, ಪತ್ರವನ್ನು ನಿನ್ನೆದುರಿನಲ್ಲಿಯೇ ಬರೆದಿದ್ದೆನಲ್ಲ. ”

ನೀರಜಾ— “ ನೀವು ನನ್ನ ಮನಸ್ಸಿನಂತೆ ಮಾಡುವವರೇ ? ಹಾಗಿದ್ದರೆ ಇಷ್ಟು ಹೊತ್ತಿಗೆ ಅಲ್ಲಿಗೆ ನನ್ನನ್ನು ಮುಟ್ಟಿಸಿ ಬರುತ್ತಿದ್ದಿರಿ. ಎಲೋ ಗಿಳಿ, ನನ್ನ ಕೂಡ ನೀನು ಬರುವೆಯಾ ? ಹೇಳು. ”

ಗಿಳಿ ಮತ್ತೆ ಪೊರಕಾಡಹತ್ತಿತು. ಅದು ತನ್ನ ಕೂಡ ಬರಲು ಸಿದ್ಧವಿದೆ ಯೆಂದು ನೀರಜಾ ಎಣಿಸಿದಳು.

ಯಾಮಿನೀನಾಥ— “ ಛೀ, ಈ ಮಾತಿನ ಪಲ್ಲವಿಯನ್ನು ಹಾಡಿ ನನಗೆ ವ್ಯಥಾ ಕಷ್ಟವನ್ನೇಕೆ ಕೊಡುವಿರಿ ? ನಿಮಗೇನು ಗೊತ್ತು. ನನ್ನ ಮಾತನ್ನು ನೀವು ಕೇಳದಿರುವುದರಿಂದ ನನಗಾಗುತ್ತಿರುವ ಕಷ್ಟವನ್ನು ತಿಳಿಯಲಾರಿರಿ. ಆದರೇನು ಮಾಡುವುದು ? ಇತ್ತ ನನಗೆ ತುಂಬ ಕೆಲಸಗಳಿವೆ. ಕಲಕತ್ತೆಯನ್ನು ಬಿಟ್ಟು ಒಂದು ದಿನ ಕೂಡ ಹೊರಗೆ ಹೋಗಲು ಬಿಡುವು ಇಲ್ಲ. ಇಲ್ಲವಾಗಿದ್ದರೆ ಎಂದೋ ನಿಮ್ಮನ್ನು ಕಳಿಸಿಬರುತ್ತಿದ್ದೆ. ನಿಮ್ಮನ್ನು ಕಳ್ಳರ ಕೈಯೊಳಗಿಂದ ಉಳಿಸಿದೆ, ನಿಮ್ಮ ಸಲುವಾಗಿ ಅದೆಷ್ಟೋ ಕಷ್ಟಗಳನ್ನನುಭವಿಸಿದೆ. ಅದಕ್ಕೆ ಪ್ರತಿ ಯಾಗಿ ನೀವು ನನ್ನ ಮಾತಿಗೆ ಉತ್ತರವನ್ನೂ ಸಹ ಕೊಡುವುದಿಲ್ಲವಲ್ಲವೇ ? ”

ನೀರಜಾ— “ ಮಾತಿಗೆ ಉತ್ತರವನ್ನು ಕೊಟ್ಟೇ ಕೊಡುತ್ತೇನೆ. ಆಹಾ ! ನನ್ನ ಆ ಚಿಗರೆ ಎಷ್ಟು ಸುಂದರವಿದ್ದಿತಲ್ಲ. ತಂದೆ ನನಗೆ ತಂದು ಕೊಟ್ಟಿದ್ದ. ಅದು ಇಲ್ಲಿ ಇದ್ದಿದ್ದರೆ ಗಿಳಿಯು ಕೂಡ ಎಷ್ಟು ಆನಂದದಿಂದ ಆಡುತ್ತಿತ್ತೊ ! ಎಲಾ, ನೀವು ಏನೋ ಹೇಳುತ್ತಿದ್ದಿರಲ್ಲ ? ”

ಯಾಮಿನಿ— “ ನನ್ನ ದೈವವೇ ಹಾಗಿದೆ. ಯಾರೇನು ಮಾಡುವುದು. ನಿಮ್ಮ ಮನಸ್ಸಿನೊಳಗಿನ ಸಂಗತಿಯನ್ನೂ, ನಿಮ್ಮ ಗುಣವನ್ನೂ ನಾನು ಇಲ್ಲಿಯವರೆಗೆ ಗುರುತಿಸಲಾರದೇ ಹೋದೆ. ನಾನು ಬಹಳ ದುರ್ದೈವಿ. ನಾನು ಸಾಯುವುದೇ ಲೇಸು. ”

ನೀರಜಾ— “ ಎಲಾ ಇದೇನು, ಇಂಥ ಅನಿಷ್ಟ ಮಾತುಗಳನ್ನೇಕೆ ಆಡು ತ್ತೀರಿ ? ನೀವು ಮನಬಿಚ್ಚಿ ನಿಮ್ಮ ಒಳದನಿಯನ್ನೇಕೆ ಹೇಳುವುದಿಲ್ಲ ? ”

ಯಾಮಿನಿ— “ ಇನ್ನೂ ಎಷ್ಟು ದಿನ ನಾನು ಹಾದಿ ಕಾಯಬೇಕು ? ನೀವು ನನ್ನ ಕೈಯನ್ನು ಹಿಡಿಯುವುದಿಲ್ಲವೆ ? ”

ನೀರಜಾ— “ ಇರಲಿ, ಒಳ್ಳೇದು. ನಿಮಗೆ ಗಿಳಿ ಎಲ್ಲಿ ಸಿಕ್ಕಿತು ? ”

“ ನನ್ನ ಮಾತಿಗೆ ಇದೇ ಉತ್ತರವೆ ? ” ಯಾಮಿನಿ ನೊಂದುಕೊಂಡು ಆರ್ತ ಸ್ವರದಲ್ಲಿ ನುಡಿದನು.

“ ಇಲ್ಲ, ಇಲ್ಲ, ನಾನಿನ್ನು ಗಿಳಿಯ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ. ಅತ್ತ ನೋಡಿದರೆ ನನ್ನ ಮನಸ್ಸು ಹೊಯ್ದಾಡುತ್ತಿದೆ. ಇನ್ನು ನೀವು ನಿಮ್ಮ ಮಾತು ಕೇಳಿರಿ. ” ನೀರಜಾ ಏಕಾಗ್ರತೆಯಿಂದ ಹೇಳಿದಳು.

“ ನೀರಜಾ, ವನದೇವಿ, ನಿಮ್ಮನ್ನು ಮದುವೆಯಾಗಬೇಕೆಂದು ನನ್ನ ಹಂಬಲ. ” ಯಾಮಿನೀನಾಥನು ಮತ್ತೆ ಹೇಳಿದ.

ನೀರಜಾ— “ ಏಕೆ ? ಇನ್ನೂ ಒಂದು ವರುಷ ಕಾಲ ಬೇಕು. ”

ಯಾಮಿನಿ— “ ಇದೇನು ? ಒಂದು ವರುಷ ಒಂದು ಯುಗವಾಗುವುದು ನನಗೆ. ”

“ ಇದು ಹೇಗೆ ಸಾಧ್ಯ ? ಹನ್ನೆರಡು ವರುಷವೆಂದರೆ ಒಂದು ಯುಗವೆಂದು ನಾನು ಶಾಸ್ತ್ರದಲ್ಲಿ ಓದಿದ್ದೇನೆ ! ” ನಕ್ಕು ಎಂದಳು ನೀರಜಾ.

ಯಾಮಿನಿ— “ ನೀರಜಾ, ಮದುವೆಯಾಗುವುದೇ ನಿಜವೆಂದಮೇಲೆ ಇಂದೇ ಏಕೆ ಆಗಬಾರದು ? ವರುಷಕಾಲವೇತಕ್ಕೆಬೇಕು ? ”

ನೀರಜಾ— “ ಏಕೆಂದರೆ, ಒಂದು ವರುಷದೊಳಗೆ ಅಪ್ಪ ಖಂಡಿತವಾಗಿಯೂ ಬರುವನು. ಒಂದು ವೇಳೆ ಬಾರದೆಹೋದರೆ ನಿಮ್ಮವಳಾಗಿಯೇ ಇರುವೆನು ! ಹೇಳಿರಿ, ಮತ್ತೇನು ಬೇಕು ? ”

ಯಾಮಿನಿ— “ ನಾನು ನಿಮ್ಮ ರಕ್ಷಣೆಯನ್ನು ಮಾಡಿದೆ. ಅದಕ್ಕೆ ನೀವು ನನ್ನ ಮಾತನ್ನು ಕೇಳುವುದಿಲ್ಲವೆ ? ನೀವು ಕೃತಘ್ನರಲ್ಲದೇ ಏನು ? ”

ನೀರಜಾ ಹುಬ್ಬುಗಂಟಿಕ್ಕಿದಳು. ಮುಕ್ತಾಮಣಿಯಂತಿದ್ದ ಹಲ್ಲುಗಳಿಂದ ಅಧರಗಳನ್ನು ಅವುಡುಗಚ್ಚಿದಳು— “ ನಾನು ಕೃತಘ್ನಳೆ ? ನನ್ನ ಮನಸ್ಸಿಲ್ಲದಿದ್ದರೂ ಮದುವೆಯಾಗಲು ಸಿದ್ಧಳಿದ್ದೇನೆಂದು ಹೇಳಿದೆನು. ಅಂದಮೇಲೆಯೂ ನಾನು ಕೃತಘ್ನಳೆ ? ” ಗಂಭೀರಭಾವದಿಂದ ಹೇಳಿದಳು ನೀರಜಾ.

ಯಾಮಿನಿ— “ ಮದುವೆಯಾಗಲು ನಿಮಗೆ ಮನಸ್ಸಿಲ್ಲ. ಇದೇ ಕೃತಘ್ನತೆಯ ಹೆಗ್ಗುರುತು. ಇಂಥ ಮಹಾಪ್ರೇಮಕ್ಕೆ ಇದೇ ಪ್ರತ್ಯುಪಕಾರವೆ ? ಇದಕ್ಕೆ ಕೃತಘ್ನತೆಯೆನ್ನದೆ ಮತ್ತೇನು ಹೇಳುವುದು ? ”

ನೀರಜಾ— “ ನಾನು ನಿಮ್ಮನ್ನು ಪ್ರೀತಿಸುವುದಿಲ್ಲವೆಂದು ನಿಮಗೆ ಅದಾರು ಹೇಳಿದರು ? ಅಪ್ಪನ ತರುವಾಯ ನಿಮ್ಮ ಸ್ಥಾನದ ದಾರಿಯನ್ನೇ ನೋಡುತ್ತೇನೆ. ನೀವು ನನ್ನ ಅಣ್ಣ ಆಗಿದ್ದರೆ ಇದಕ್ಕಿಂತ ಹೆಚ್ಚು ಪ್ರೀತಿ ಮಾಡುತ್ತಿದ್ದೆನೋ, ಇಲ್ಲವೊ, ನನಗೆ ಸಂಶಯವೆನಿಸುತ್ತದೆ. ”

ಯಾಮಿನಿ— “ ಇದು ಕೇವಲ ಬಾಯೊಳಗಿನ ಮಾತಾಯಿತು. ನೀವು ನಿಜವಾಗಿಯೂ ನನ್ನನ್ನು ಪ್ರೀತಿಸುತ್ತಿದ್ದರೆ ಒಂದು ವರುಷ ಕಾಲವನ್ನು ಹೇಳು ತ್ತಿದ್ದಿಲ್ಲ. ನಾನು ನಿಮ್ಮ ನೇತ್ರದ ಕಡೆಗೆ ಚಾತಕವು ಮೇಘವನ್ನು ನೋಡು ವಂತೆ ನೋಡುತ್ತೇನೆ. ಒಂದೊಂದು ಕ್ಷಣವು ಒಂದು ಯುಗದಂತೆ ನನಗೆ ಭಾಸವಾಗಹತ್ತಿದೆ. ”

ನೀರಜಾ— “ ನನಗೇನೂ ಹೆಚ್ಚು-ಕಡಿಮೆಯೆನಿಸುವುದಿಲ್ಲ. ”

ಯಾಮಿನಿ— “ ನಾನೆಂದು ನಿಮಗೆ ಹಾಗೆನಿಸುವುದಿಲ್ಲ. ಆದರೆ ನನ್ನ ಸ್ಥಳದಲ್ಲಿ ಪ್ರಮೋದನಿದ್ದಿದ್ದರೆ ? ”

ನೀರಜಾ ಪ್ರಮೋದನನ್ನು ಕುರಿತು ಯಾಮಿನಿಯ ಮುಂದೆ ಏನೂ ಹೇಳಿ ದ್ದಿಲ್ಲವಾದರೂ ಯಾಮಿನೀನಾಥನು ಮನಸ್ಸಿನೊಳಗೆಯೇ ಸಂದೇಹಪಡುತ್ತಿದ್ದ. ನೀರಜಾ ಪ್ರಮೋದನನ್ನು ಪ್ರೀತಿಸುತ್ತಾಳೆಂದು ಅವನ ಕಲ್ಪನೆಯಿತ್ತು. ಆದರೆ ಬಾಯಿ ಬಿಚ್ಚಿ ಇದನ್ನು ಹೇಳುವ ಸಾಹಸವಿದ್ದಿಲ್ಲ. ಇಂದು ಉತ್ತೇಜಿತ ವಾದ ಶಬ್ದಗಳಿಂದ ಉತ್ತೇಜಿತನಾಗಿದ್ದ. ಆವೇಶದಲ್ಲಿ ಬಂದು ಅನಾಯಾಸ ವಾಗಿ ಆಡಿಬಿಟ್ಟ. ನೀರಜಾ ಆ ಮಾತಿನ ಕಡೆಗೆ ತುಸುವಾದರೂ ಗಮನ ಕೊಡಲಿಲ್ಲ. “ ಪ್ರಮೋದಬಾಬುಗಳೇನು, ಇಲ್ಲಿಗೆ ಯಾವಾಗ ಬಂದು ಮುಖ ತೋರಿಸುವರು ? ” ಎಂದಳು ನೀರಜಾ.

ಯಾಮಿನಿ— “ ಪ್ರಮೋದ ಇಲ್ಲಿಗೆ ಬರಲಿ, ಬಾರದಿರಲಿ, ಅವನನ್ನು ತೆಗೆದುಕೊಂಡು ಏನು ಮಾಡುವಿರಿ ? ”

ನೀರಜಾ— “ ಏಕೋ, ಅವರನ್ನು ನೋಡಬೇಕೆಂದು ಮನಸ್ಸು ಆಗಾಗ ಹಾತೊರೆಯುತ್ತಿದೆ. ”

ಯಾಮಿನಿ— “ ನನ್ನ ಮುಂದೆ ಹೀಗೆ ಆಡಲು ನಾಚಿಕೆಯಾದರೂ ಬರುವುದಿಲ್ಲವೆ ? ”

ನೀರಜಾ – “ ನಾಚಿಕೆ, ನಾಚಿಕೆಯೆ ! ನಾಚಿಕೆಯೇತರದು ? ನಾನೇ ನಾದರೂ ಅಪರಾಧದ ಮಾತು ಆಡುತ್ತಿದ್ದೇನೆಯೆ ? ”

ಯಾಮಿನಿ— “ ನಿರ್ಲಜ್ಜೆ, ಕೃತಘ್ನೆ ! ಉಂಡಮನೆಯ ಗಳ ಎಣಿಸುವ ವಳು ನೀನು ! ನನಗೀಗ ಗೊತ್ತಾಯಿತು........... ”

ನೀರಜಾ – “ ಏಕೆ ಇನ್ನೊ ಒಂದು ಸಾರೆ ಹೇಳುತ್ತೇನೆ. ನಾನು ಕೃತಘ್ನೆ ! ನೀವು ಕೃತಘ್ನತೆಯಿಂದ ಅನುರೋಧ ಮಾಡಹತ್ತಿರುವದರಿಂದಲೇ

ನಾನೀಗ ನನ್ನನ್ನು ನಿಮಗೆ ಅರ್ಪಿಸಲು ಹೊರಟಿದ್ದೇನೆ. ಇದಕ್ಕಾಗಿ ನಾನು ಕೃತಘ್ನಳೆ? ಹೇಳಿರಿ. ಯಾರು ಕೃತಘ್ನರು?" ಇಷ್ಟು ಹೇಳುತ್ತ ಹೇಳುತ್ತ ನೀರಜಾನ ನೇತ್ರಗಳು ಕೆಂಗಿಡಿಯನುಗುಳಹತ್ತಿದುವು.

"ನಾನು ಸರಿಯಾಗಿ ತಿಳಿದುಕೊಂಡೆ. ನಿಮ್ಮ ಈ ಮಾತು ಕೇವಲ ಬಾಯಿಂದ ಹೊರಬಿದ್ದಿವೆ, ಮೇಲಿನ ಮಾತಿವು, ಒಳಗಿನವಲ್ಲ. ಹೊಟ್ಟೆಯೊಳಗೆ ಬೇರೆ ಮತ್ತೊಂದು ವಿಚಾರವಿದೆ........" ಯಾಮಿನಿ ನಕ್ಕು ಹೇಳಿದ.

ಯಾಮಿನಿಯ ಮಾತು ಇನ್ನೂ ಮುಗಿದಿದ್ದಿಲ್ಲ. ಇಷ್ಟರಲ್ಲಿ ಆಳು ಬಂದು— "ಒಬ್ಬ ಸಂನ್ಯಾಸಿ ನಿಮ್ಮನ್ನು ಕಾಣಲಿಚ್ಛಿಸುತ್ತಾರೆ." ಎಂದ.

ಸಂನ್ಯಾಸಿಯ ಹೆಸರನ್ನು ಕೇಳುವುದೊಂದೇ ತಡ. ಯಾಮಿನಿ ಹೌಹಾರಿದ. ಆ ಸಂನ್ಯಾಸಿ ಮತ್ತೆ ಯಾರೂ ಆಗಿರದೆ, ನೀರಜಾನ ತಂದೆಯೆಂಬುವನ್ನು ಅವನಿಗೆ ತಿಳಿದುಕೊಳ್ಳಲು ತಡವಾಗಲಿಲ್ಲ. ಯಾಮಿನಿ ಕೂಡಲೇ ಅಲ್ಲಿಂದ ಹೊರಟ.

## ಸಂಶಯ

ಯಾಮಿನೀನಾಥನೂ ಬಲ್ಲವನಿದ್ದ. ಈಗ ಸಂನ್ಯಾಸಿಗೆ ನೀರಜಾನ ವಿಷಯವೆಲ್ಲ ತಿಳಿದಿದೆ. ಇಂಥ ಸ್ಥಿತಿಯಲ್ಲಿ ಸುಳ್ಳು ಹೇಳುವುದೂ ಬಲಪೂರ್ವಕವಾಗಿ ನೀರಜಾನನ್ನು ತಡೆಯುವುದೂ ಬುದ್ಧಿವಂತಿಕೆಯಲ್ಲವೆಂದು ತಿಳಿದ. ಹೀಗೆ ಮಾಡುವುದು ಸುಲಭವಲ್ಲವೆಂದೂ ಭಾವಿಸಿದ. ಸಂನ್ಯಾಸಿಯನ್ನು ಮೇಲೆ ಕರೆದುಕೊಂಡು ಬರಲು ಆಜ್ಞಾಪಿಸಿದ. ಸಂನ್ಯಾಸಿ ಮೇಲೆ ಬಂದಕೂಡಲೇ ಯಾಮಿನಿ ಸನ್ಮಾನಪೂರ್ವಕವಾಗಿ ನಮಸ್ಕಾರ ಮಾಡಿ— "ಮಹಾಸ್ವಾಮಿ, ನೀವು ಇಲ್ಲಿಗೇಕೆ ದಯಮಾಡಿಸಿದಿರಿ?" ಎಂದು ಕೇಳಿದ.

ಸಂನ್ಯಾಸಿ— "ಸುಮ್ಮಗೆ ಮಾತನಾಡಿ ಹೊತ್ತುಗಳೆಯುವುದು ನನಗೆ ಬೇಡ. ನೀರಜಾನನ್ನು ಕರೆದುಕೊಂಡು ಹೋಗಲು ಬಂದಿದ್ದೇನೆ."

ಯಾಮಿನಿ— "ಹೂಂ, ನೀರಜಾ ಎಂಬ ಹೆಸರಿನ ಒಬ್ಬ ಹುಡುಗೆಯನ್ನು ಕಳ್ಳರ ಕೈಯಿಂದ ಬಿಡುಗಡೆ ಮಾಡಿ ನನ್ನಲ್ಲಿಟ್ಟದ್ದೇನೆ. ಆದರೆ

ಕ್ಷಮಿಸಿರಿ. ನಿಮ್ಮ ಗುರುತು, ಪರಿಚಯ ನನಗಿಲ್ಲ. ನಿಮ್ಮ ಕೈಗೆ ಆ ಹುಡುಗಿಯನ್ನು ಹೇಗೆ ಕೊಡಲಿ? "

ಸಂನ್ಯಾಸಿ— "ನಾನು ನಿಮಗೆ ಅಪರಿಚಿತನೇನೋ ಸರಿ. ಆದರೆ ನಾನೇ ನೀರಜಾನ ತಂದೆ. ನೀರಜಾನನ್ನು ಕೇಳಿ ಇದನ್ನು ಮನಗಾಣಬಹುದು. "

"ನೀವೇ ನೀರಜಾನ ತಂದೆಯೇ?" ವಿಸ್ಮಯವನ್ನು ತೋರಿಸುತ್ತ ಎಂದ ಯಾಮಿನಿ.

ಸಂನ್ಯಾಸಿ— "ಹೂಂ, ನಾನೇ ನೀರಜಾನ ತಂದೆ— ನೀರಜಾನೇ ನನ್ನ ಸಕಲ ಸಂಪತ್ತು. ಅವಳನ್ನು ಕಳೆದುಕೊಂಡಾಗಿನಿಂದ ನಾನೆಷ್ಟೋ ಕಷ್ಟ-ನಷ್ಟಗಳನ್ನನುಭವಿಸಿದೆ— ಹಗಲೆನ್ನಲಿಲ್ಲ, ರಾತ್ರಿ, ಬಿಸಿಲು, ಗಾಳಿ, ಮಳೆಯೆನ್ನಲಿಲ್ಲ; ಬೇಕುಬೇಕಾದಲ್ಲಿ ತಿರುಗಾಡಿದೆ. ಮನಸ್ಸಿನೊಳಗೊಂದು ಬೇಗೆ ಪ್ರಜ್ವಲಿಸುತ್ತಿತ್ತು. ಅದರಿಂದ ನಿರ್ದೋಷಿಗಳಿಗೂ ದೋಷಿಯೆಂದು ಹೆಸರಿಟ್ಟೆ. ಸಿರ್ದಯಿ! ನೀನು ನನಗೆ ಎಷ್ಟು ಕಷ್ಟ ಕೊಟ್ಟೆಯೆಂಬುದನ್ನು ಬಲ್ಲೆಯಾ?"

ಯಾಮಿನಿ ವಿಸ್ಮಯದ ನೋಟದಿಂದಲೇ ನೋಡಿ— "ಮಹನೀಯರೆ, ಇದನ್ನೇನು ಆಡುತ್ತಿದ್ದೀರಿ? ನೀರಜಾನನ್ನು ನಾನು ಅಗಲಿಸಿದೆನೆ?" ಎಂದ.

ಸಂ— "ಹೂಂ, ನೀನೇ. ಹಾಗಿರದಿದ್ದರೆ ಇಷ್ಟು ದಿನ ಮುಚ್ಚಿ ಏಕೆ ಇಡುತ್ತಿದ್ದೆ? ನೀನು ಅವಳನ್ನು ಉದ್ಧಾರ ಮಾಡಿದುದೇ ನಿಜವಾಗಿದ್ದರೆ, ಅವಳನ್ನು ನನಗೆ ಮುಟ್ಟಿಸುತ್ತಿದ್ದೆ. ಇಲ್ಲಿ ಏಕೆ ಇಟ್ಟುಕೊಂಡೆ, ಹೇಳು. ಪಾಮರ, ನೀರಜಾ ಈಗಲಾದರೂ ಕಳ್ಳರ ಬಲೆಯೊಳಗೇ ಇದ್ದಾಳೆ. ನಾನು ಬಲೆಯನ್ನು ಹರಿಯುವೆ. ಹುಡುಗರ ಕೈಯೊಳಗಿಂದ ಪಾರು ಮಾಡುವೆ."

ಯಾಮಿನಿ— "ಇದೊಂದು ಆಶ್ಚರ್ಯದ ಸಂಗತಿಯೇ ಸರಿ! ನಿಮ್ಮಲ್ಲಿ ಸ್ವಲ್ಪಾದರೂ ವಿವೇಕವಿದೆಯೆ? ನಾನು ನೀರಜಾನ ಜೀವವನ್ನುಳಿಸಿದ್ದೇನೆ. ಅದರಿಂದ ನನ್ನನ್ನು ನೀವು ಪ್ರೀತಿಸಬೇಕಾಗಿತ್ತು. ಅದನ್ನು ಬಿಟ್ಟು ಈ ತಿರಸ್ಕಾರವೆ! ನೀರಜಾನನ್ನು ನಿಮ್ಮಲ್ಲಿಗೆ ಕಳಿಸಬೇಕೆಂದೇ ನಾನು ಅದೆಷ್ಟೋ ಪತ್ರಗಳನ್ನು ಬರೆದಿದ್ದೇನೆ ಆದರೆ ದುರ್ದೈವ ಯಾರೇನು ಮಾಡುವುದು? ಅಲ್ಲಿ ನೀವು ಇರಲಿಲ್ಲ. ಆದರಿಂದ ನಿಮಗೆ ಒಂದೂ ಕಾಗದವು ಸಿಕ್ಕಿಲ್ಲ. ಇದರಲ್ಲಿ ನನ್ನದೇನು ತಪ್ಪು?"

ಸಂನ್ಯಾಸಿ— "ನಾನು ಸರಿಯಾಗಿ ವ್ಯವಸ್ಥೆ ಮಾಡಿ ಬಂದಿದ್ದೇನೆ. ನಾನು ಬೇಕಾದಲ್ಲಿರಲಿ, ಪತ್ರನನ್ನು ನನಗೆ ಮುಟ್ಟಿಸುವರು. ಆದರೆ ಕಾನಪುರ ದಿಂದ ಈ ವರೆಗೆ ಒಂದೂ ಕಾಗದವು ಸಿಕ್ಕಿಲ್ಲ "

ಯಾಮಿನಿ— "ಏನು ಗಡಬಿಡಿಯಾಗಿದೆಯೋ ಏನೊ, ನಾನೇನು ಹೇಳಲಿ? ಇಷ್ಟು ಮಾತ್ರಕ್ಕೇ ನಾನು ದೋಷಿಯಾದಂತಾಯಿತೆ? ನನಗೆ ಕಲಕತ್ತೆಯಲ್ಲಿ ಮಹತ್ವದ ಕೆಲಸವಿತ್ತು. ಇಲ್ಲವಾಗಿದ್ದರೆ ನಾನು ನಿಶ್ಚಯ ವಾಗಿಯೂ ನೀರಜಾನನ್ನು ನಿಮ್ಮಲ್ಲಿಗೆ ಕಳಿಸಿಬರುತ್ತಿದ್ದೆ. ಮಹಾರಾಯರೆ ಧನ್ಯವಾದಗಳು! ಉಪಕಾರ ತೀರಿಸಿದಿರಲ್ಲ, ಸಾಕು!! "

ಯಾಮಿನಿಯ ಮಾತುಗಳನ್ನು ಸಂನ್ಯಾಸಿ ಲಕ್ಷ್ಯಗೊಟ್ಟು ಕೇಳಿದ. ಈಗ ಅವನ ಸಂಶಯವು ಸರಿಯಿತು. ಯಾಮಿನಿ ಮತ್ತೆ ಹೇಳಿದ— "ಮಹನಿಯರೆ, ನಾನು ದೋಷಿಯೆಂದು ನಿಮಗೆ ಹೇಗೆ ಗೊತ್ತಾಯಿತು? ಇದನ್ನು ಕೇಳಲು ನನಗೆ ಬಹಳ ಆಶೆಯಿದೆ. ಮುಂದೆ ನಾನು ಯಾರ ಉಪ್ಕಾರವನ್ನೂ ಸರ್ವಥಾ ತಿಳಿದೂ ಮಾಡುವುದಿಲ್ಲ. ಇಲ್ಲಿ ಪ್ರತ್ಯಕ್ಷವಾಯಿತಲ್ಲ— ಉಪಕಾರ ಮಾಡಿದರೂ ಕಷ್ಟವನ್ನನುಭೋಗಿಸಬೇಕಾಗುತ್ತದೆ ಎಂಬುದು. "

"ತರುಣರು ಸೌಂದರ್ಯಕ್ಕೆ ಬಲಿಬಿದ್ದು ಅತಿ ಕೀಳು ಕೆಲಸವನ್ನಾದರೂ ಮಾಡುತ್ತಾರೆ." ಸಂನ್ಯಾಸಿ ಹೇಳಿದ. ಈಗವನು ತುಸು ಮೆತ್ತಗಾಗಿದ್ದ.

ಯಾಮಿನಿ— "ನಿಮ್ಮ ಮಾತು ನಿಜವಾಗಿದ್ದರೆ ನಾನು ಅವಳ ಕೂಡ ಮದುವೆಯಾಗುತ್ತಿದ್ದಿಲ್ಲವೆ? ಮದುವೆಯಾದ ಮೇಲೆ ನಿಮ್ಮ ಆಟವೇನು ನಡೆ ಯುತ್ತಿತ್ತು? ನೀರಜಾ ಒಪ್ಪಿರಲಿಕ್ಕಿಲ್ಲ, ಆದರಿಂದ ಮದುವೆ ನಿಂತಿದೆಯೆಂದು ನೀವು ತಿಳಿದಿಬಹುದು— ಹೀಗೂ ಇಲ್ಲ. ನೀರಜಾ ಈಗ ನನ್ನ ಅಂಕಿತ ದಲ್ಲಿದ್ದಾಳೆ. ಮನಸ್ಸು ಮಾಡಿದ್ದರೆ, ನಾನು ಬಲಾತ್ಕಾರದಿಂದಾದರೂ ಮದುವೆ ಯಾಗುತ್ತಿದ್ದೆ. ನೀರಜಾ ಅನಾಥಳಿದ್ದಳು. ನಾನು ಬೇಕಾದಹಾಗೆ ಅವಳ ಮೇಲೆ ಅತ್ಯಾಚಾರ ಮಾಡಬಹುದಾಗಿತ್ತು. ನಾನು ಅವಳನ್ನು ಎಷ್ಟು ಆರಾಮದಿಂದ ಇಟ್ಟಿದ್ದೇನೊ, ಹೋಗಿ ಅವಳನ್ನು ಕೇಳಿರಿ, ಎಂದರೆ ಗೊತ್ತಾಗುವುದು. "

ಯಾಮಿನಿಯ ಮಾತಿನಿಂದ ಸಂನ್ಯಾಸಿಯ ನೆತ್ತಿಗೇರಿದ ಸಿಟ್ಟು ಸಂಪೂರ್ಣ ವಾಗಿ ಇಳಿಯಿತು, ತಣ್ಣಗಾದ. ಯಾಮಿನಿ ನೋಡಿದ, ತನ್ನ ಮಾತಿನ ಪ್ರಭಾವವು ಸಂನ್ಯಾಸಿಯನ್ನು ಮತ್ತಿನಂತೆ ಆವರಿಸುತ್ತಿತ್ತು. ಅವನು ಮತ್ತೆ

ಮುಂದುವರಿಸಿದ: "ಮಹನೀಯರೆ, ಅನ್ಯಾಯವನ್ನು ನನ್ನ ತಲೆಯ ಮೇಲೆ ಹೇರುವ ಮುನ್ನ ಹೋಗಿ ನೀರಜಾಳನ್ನು ಕೇಳಿ ತಿಳಿದುಕೊಳ್ಳಿರಿ. ಅವಳಿಂದ ನಿಮಗೆ ಎಲ್ಲವೂ ಗೊತ್ತಾಗುವುದು. ಸುಮ್ಮನೆ ನನ್ನ ಮೇಲೆ ದೋಷಾರೋಪಣೆ ಮಾಡಬೇಡಿರಿ."

"ನೀವು ನಿಜವಾಗಿಯೂ ನೀರಜಾಳನ್ನು ಉದ್ಧರಿಸಿದ್ದೀರಾ? ಹಾಗಿದ್ದರೆ ನಾನು ನಿಮಗೆ ದ್ರೋಹಿಯೆಂದೆನಲ್ಲ, ಮಹಾ ಅಪರಾಧವಾಯಿತು!" ಸಂನ್ಯಾಸಿ ಹೇಳಿದ.

ಯಾಮಿನೀನಾಥನ ಮುಖಮಂಡಲವು ಅರಳಿತು. ಸಂತೋಷ ಸಾಗರದಲ್ಲಿ ತೇಲಾಡಹತ್ತಿದ— "ಮಹನೀಯರೆ, ನೀರಜಾಳನ್ನು ಉದ್ಧಾರ ಮಾಡಬೇಕಾದರೆ ನನಗೆ ಸಾಕುಬೇಕಾಯಿತು." ವಿನಯದಿಂದ ಹೇಳಿದ.

ಸಂನ್ಯಾಸಿ— "ಏನೇ ಆಗಲಿ, ಒಂದು ಮಾತನ್ನು ಕುರಿತು ನಾನು ನಿರ್ಣಯಕ್ಕೆ ಬಂದಿಲ್ಲ. ನೀವು, ಪ್ರಮೋದರಿಬ್ಬರ ವಿನಾ ಅಡವಿಗೆ ಬಂದು ಯಾರೂ ನನ್ನ ಮಗಳನ್ನು ನೋಡಿದ್ದಿಲ್ಲ. ಓಗಿದ್ದೂ— ನೀವು ಓಡಿಸಿಕೊಂಡು ಬಾರದೇ ಮತ್ತೆ ಯಾರು ಈ ಕೆಲಸ ಮಾಡಿದರು? ನೀವು ಮಾಡಿರದಿದ್ದರೆ, ಪ್ರಮೋದನು ಮಾಡಿರಬಹುದು!"

ಯಾಮಿನೀನಾಥನು ನಡುಗಿದ. ಕೈ ಹೊಸೆಯುತ್ತ ತಡೆದು ತಡೆದು "ಪ್ರಮೋದನೆ— ಪ್ರಮೋದನಲ್ಲ— ಅಲ್ಲ, ಈ ಮಾತು ಸರ್ವಥಾ ಅವನಿಂದಾಗಿಲ್ಲ ಆದರೆ ಪ್ರಮೋದನೇ— ಅಲ್ಲ, ನನಗೆ ನಂಬುಗೆಯಿದೆ— ಊಹೂಂ! ಇದೆಲ್ಲಿಯಾದರೂ ಸಾಧ್ಯವೆ? ಆದರೆ— ಜಗದೀಶ್ವರ! ನಿನಗೇ ಗೊತ್ತು— ಮನುಷ್ಯನ ಹೊಟ್ಟೆಯೊಳಗಿನ ಮಾತು ನನಗೇನು ಗೊತ್ತು?" ಎಂದ.

ಯಾಮಿನಿ ಮಾತನಾಡುವುದನ್ನು ನೋಡಿದರೆ, ಇವನಿಗೆ ಸ್ವಲ್ಪ-ಸ್ವಲ್ಪ ಗೊತ್ತಿದೆ. ಹೇಳಲು ಮನಸ್ಸಿಲ್ಲ ಎಂದು ಊಹಿಸಲು ಬರುವಂತಿತ್ತು.

ಸಂನ್ಯಾಸಿಗೆ ಮುಂದೆ ಕೇಳುವ ಮನಸ್ಸಾಗಲಿಲ್ಲ. ಮಾತನ್ನು ಅಲ್ಲಿಗೇ ನಿಲ್ಲಿಸಿದ. ಮಗಳನ್ನು ಭೆಟ್ಟಿಯಾಗಬೇಕೆಂದು ತಿಳಿಸಿದ.

ಯಾಮಿನಿ ತಾನೇ ಅವನನ್ನು ನೀರಜಾನಿಗೆ ಭೆಟ್ಟಿ ಮಾಡಿಸಿದ. ಇಷ್ಟು ದಿನಗಳಾದ ಮೇಲೆ ತಂದೆ-ಮಗಳು ಕೂಡಿದರು. ಅವನ ಮನಸ್ಸಿನಲ್ಲಿ ಬಗೆ ಬಗೆಯ ಭಾವಗಳ ಹುಚ್ಚುಹೊಳೆ ಕಟ್ಟು ಒಡೆದು ಕೊಸರಿಕೊಂಡು ಹರಿಯಹತ್ತಿತು. ನೀರಜಾ ತಂದೆಯನ್ನು ಬಿಗಿಯಾಗಿ ಅಪ್ಪಿಕೊಂಡಳು.

## ಸಂಪನ್ನನೊ ಅಥವಾ ಕಳ್ಳನೊ ?

ಯಾಮಿನಿ, ನೀರಜೆಯರೊಡನೆ ಸಂನ್ಯಾಸಿ ಮಾತನಾಡಿದ. ಆ ಮೇಲೆ ಯಾಮಿನಿ ನಿರ್ದೋಷಿಯೆಂದು ಗೊತ್ತಾಯಿತು. ನೀರಜಾಳನ್ನು ಓಡಿಸಿಕೊಂಡು ಬಂದಾಗ ಆ ದಿನ ರಾತ್ರಿ ಯಾಮಿನಿ ಕಾನಪುರದೊಳಗೆ ಇದ್ದಿಲ್ಲ.

ಸಂನ್ಯಾಸಿ ದೊಡ್ಡ ವಿಚಾರದ ತೊಡಕಿನಲ್ಲಿ ಬಿದ್ದ. ಯಾಮಿನಿ ನಿರ್ದೋಷಿ ಯಾದರೆ, ಇದರಲ್ಲಿ ದೋಷಿ ಯಾರು ? ಪ್ರಮೋದನೆ ? ಮುಂತಾಗಿ ಅವನು ಆಲೋಚನೆ ಮಾಡಹತ್ತಿದ— ಯಾಮಿನಿಯ ಮಾತುಗಳನ್ನು ನೋಡಿದರೆ, ಪ್ರಮೋದನೂ ಇದರೊಳಗೆ ಕೈ ಹಾಕಿದ್ದನೆನಿಸುತ್ತದೆ. ನೀರಜಾಳ ಮಾತು ಕೇಳಿದರೆ, ಅವನು ನಿರ್ದೋಷಿಯೆಂದು ಕಂಡುಬರುತ್ತದೆ. ಆದರೆ ಇದು ಹೇಗೆ ಸಾಧ್ಯ ? ಇವರಿಬ್ಬರಲ್ಲಿ ಒಬ್ಬರಂತೂ ಖಂಡಿತವಾಗಿ ದೋಷಿಯಿರಲೇಬೇಕು. ತುಡುಗರು ನನ್ನ ಮೇಲೆ ಆಕ್ರಮಣ ಮಾಡಿದ್ದರೆಂದು ನೀರಜಾ ಹೇಳುತ್ತಾಳೆ; ಇದು ನಂಬುವ ಮಾತಿಲ್ಲ. ಅವರು ಏನು ನೋಡಿ ಆಶೆಪಟ್ಟರು ? ಅವಳು ಆಭರಣಗಳನ್ನೂ ಹಾಕಿಕೊಂಡಿದ್ದಿಲ್ಲ. ದುಡ್ಡಿನ ಆಶೆಯನ್ನುಳಿದು ಕಳ್ಳರು ಆಕ್ರಮಣ ಮಾಡಬಹುದೆ ? ಇದು ಸಂಭವವಿದೆಯೆ ? ಇದು ಸಾಧ್ಯವಿದ್ದರೆ, ಯಾಮಿನಿ, ಪ್ರಮೋದರು ಆ ದಿವಸ ಬಂದರಲ್ಲ. ಅದಕ್ಕೂ ಮೊದಲೇ ಯಾರಾದರೂ ಏಕೆ ಆಕ್ರಮಣ ಮಾಡಲಿಲ್ಲ ? ಕಳ್ಳರಿಗೆ ಹಣದ ಆಶೆ ತೋರಿಸಿ ಯಾರಾದರೂ ಈ ಕೆಲಸ ಮಾಡಿಸಿರಬೇಕೆಂದೆನಿಸುತ್ತದೆ. ಇಂಥ ಕೆಲಸವನ್ನು ಯಾರು ಮಾಡಿಸಬಹುದು ? ಪ್ರಮೋದ, ಯಾಮಿನಿಯರನ್ನುಳಿದು ಮತ್ತೆ ಯಾರೂ ಅಲ್ಲಿ ನೀರಜಾಳನ್ನು ನೋಡಿಲ್ಲ. ಅವಳು ಅಡವಿಯಲ್ಲಿರುವುದು ಯಾರಿಗೂ ಗೊತ್ತಿಲ್ಲ. ಹೀಗಿರುವಾಗ ಯಾಮಿನಿ, ಪ್ರಮೋದರನ್ನು ಬಿಟ್ಟರೆ ಯಾರು ತಪ್ಪುಗಾರರು ? ಸಂನ್ಯಾಸಿಗೆ ಏನೂ ತೋಚದಾಯಿತು. ಅವನು ನಿರ್ಣಯಕ್ಕೇ ಬರಲಿಲ್ಲ. ದೊಡ್ಡ ಉಭಯ ಸಂಕಟದಲ್ಲಿ ಬಿದ್ದ. ನೀರಜಾ ಅಲ್ಲಿ ಸುಖದಿಂದ ಇದ್ದಳು. ಆದರಿಂದ ಸಂನ್ಯಾಸಿ ಆ ದಿವಸದ ಮಟ್ಟಿಗೆ ಅವಳನ್ನು ಅಲ್ಲಿಯೇ ಬಿಟ್ಟು ಮತ್ತೆ ಸಲಹೆ-ಸಹಕಾರಗಳನ್ನು ಕೇಳಲು ಭವಾನೀಪುರಕ್ಕೆ ಹೋದ. ಅಲ್ಲಿ ಆತನ ಆತ್ಮೀಯರೊಬ್ಬರು ಇದ್ದರು ವಾಚಕರೆ, ಆ ಆತ್ಮೀಯರು ಮತ್ತೆ ಯಾರೂ ಅಲ್ಲ, ನಿಮ್ಮ ಪೂರ್ವ ಪರಿಚಿತರಾದ ಮಿ. ಹಿರಣ್ಯ ಕುಮಾರರು. ಸಂನ್ಯಾಸಿ ಅಲ್ಲಿಗೆ ಹೋಗಿ ಹಿರಣ್ಯಕುಮಾರರಿಗೆ ಎಲ್ಲ ಸ್ಥಿತಿಯನ್ನು ವಿಸ್ತಾರಪೂರ್ವಕವಾಗಿ ಹೇಳಿದ.

" ನಿಮ್ಮ ಮಾತನ್ನು ಕೇಳುತ್ತಿರಲು ನನಗೆ ಯಾಮಿನೀನಾಥನ ಮೇಲೆ ಸಂಶಯ ಬರುತ್ತಿದೆ. " ಎಲ್ಲ ಸ್ಥಿತಿಯನ್ನು ಕೇಳಿ ಹಿರಣ್ಯಕುಮಾರರು ಹೇಳಿದರು.

" ಅದು ಹೇಗೆ? ಮೊದಲನೆಯ ಮಾತು, ನೀರಜಾನನ್ನು ಅಪಹರಿಸಿ ಕೊಂಡು ಬಂದ ರಾತ್ರಿ ಯಾಮಿನಿ ಇದ್ದಿಲ್ಲ. ಆದರ ಮುನ್ನಾ ದಿನ ರಾತ್ರಿಯೇ ಅವನು ಎಲ್ಲಿಗೋ ಹೋಗಿದ್ದ. ಇನ್ನು ಎರಡನೆಯ ಮಾತು, ಡೋಣಿಯ ಅಂಬಿಗನಿಂದ ನೀರಜಾನ ದುರ್ದಶೆಯನ್ನು ಕೇಳಿದ ಮೇಲೆಯೇ ಅವನು ಅಲ್ಲಿಗೆ ಹೋಗಿದ್ದಾನೆ. " ಉತ್ತರವಾಗಿ ಸಂನ್ಯಾಸಿ ಹೇಳಿದ.

" ಇದೆಲ್ಲ ಯಾಮಿನಿಯ ಜಾಲವಿರಬೇಕೆಂದು ನನಗೆನಿಸುತ್ತದೆ. ಯಾಮಿನಿ ಎಂಥ ಮಹಾಪುರುಷನಿದ್ದಾನೆಂಬುದು ನಿಮಗೆ ಗೊತ್ತಿಲ್ಲ. ಅವನನ್ನು ಕಂಡರೆ ನನಗಾಗುವುದಿಲ್ಲ. ಜಗತ್ತಿನಲ್ಲಿ ಅವನು ಮಾಡದ ಕೆಲಸವೊಂದೂ ಇಲ್ಲನೆಂದು ನಾನು ತಿಳಿಯುತ್ತೇನೆ. " ಎಂದರು ಹಿರಣ್ಯಕುಮಾರರು.

ಸಂನ್ಯಾಸಿ— " ನಿಜವೇ ರಾಯರೇ? ಯಾಮಿನಿ ಇಷ್ಟು ನೀಚನಿರು ವನೆ? ನೀರಜಾನ ಮಾತು ಕೇಳಿದರೆ ಹಾಗೆನಿಸುವುದಿಲ್ಲವಲ್ಲ. "

ಹಿರಣ್ಯ— "ಬಹಳ ಜನರು ಹೀಗೆ ಮೋಸ ಹೋಗುತ್ತಾರೆ. ಮೇಲಿ ನೋಡಿದ ಮಾತ್ರಕ್ಕೆ ಮನುಷ್ಯನ ಅಂತರಂಗ ತಿಳಿಯುವದು ಕಷ್ಟ. ಯಾಮಿನಿ ಎಷ್ಟು ಜನರನ್ನು ಹಾಳು ಮಾಡಿರುವನೊ ಎಷ್ಟು ಮನೆಗಳನ್ನು ನೆಲಸಮ ಮಾಡಿರುವನೊ, ಕಸಗುಡಿಸಿರುವನೊ, ದೇವರೇ ಬಲ್ಲ. "

ಸಂನ್ಯಾಸಿ— " ಅವನ ಸ್ವಭಾವವು ನೆಟ್ಟಗಿರದಿದ್ದರೂ, ಈ ಪ್ರಸಂಗ ದಲ್ಲಿ ಅವನು ನನಗೆ ನಿರ್ದೋಷಿಯೆಂದೇ ತಿಳಿದು ಬಂದಿದೆ. ಅದಕ್ಕೆ ಆಧಾರ ಗಳೂ ಬಹಳ ಇವೆ. ಯಾಮಿನಿಯ ಮಾತು ಕೇಳಿದರೆ ಪ್ರಮೋದನೇ ದೋಷಿ ಯೆಂದು ಸ್ಪಷ್ಟವಾಗುತ್ತಿದೆ. "

ಹಿರಣ್ಯ— " ಇದರಿಂದ ನನಗೆ ಮತ್ತಿಷ್ಟು ಸಂಶಯವೆನಿಸುತ್ತದೆ. ಏನೇ ಆಗಲಿ, ಅವನ ಕೂಡ ನಾನು ಒಂದು ಸಾರೆಯಾದರೂ ಮಾತನಾಡದ ವಿನಾ ಏನನ್ನೂ ನಿಶ್ಚಯವಾಗಿ ಹೇಳಲಾರೆ. ನಾನೇ ಏಕೆ ತಪ್ಪು ತಿಳಿದು ಕೊಂಡಿರಬಾರದು? "

ಸಂನ್ಯಾಸಿ— " ಒಳ್ಳೇದು, ಹಾಗಾದರೆ ಒಂದು ಸಾರೆ ಮಾತುಕತೆ

ಯಾಡಿರಿ. ಆದರೆ ಯಾಮಿನಿ ಇಂಥ ಮಹಾ ಪುರುಷನೆಂದು ಕಂಡುಬಂದರೆ, ನಾನು ಅವನನ್ನು ಬಿಡುವುದಿಲ್ಲ. ''

× × × ×

ಮರುದಿವಸ ಸಂನ್ಯಾಸಿ, ಯಾಮಿನಿಯನ್ನು ಹಿರಣ್ಯಕುಮಾರರಲ್ಲಿಗೆ ಕರೆದೊಯ್ದ; ಅವರಲ್ಲಿ ಮಾತುಕತೆ ನಡೆದುವು; ಆದರೆ ಯಾಮಿನಿಯ ಮಾತುಗಳನ್ನು ಕೇಳಿದಂತೆ ಹಿರಣ್ಯಕುಮಾರರ ಸಂಶಯವು ಹೆಚ್ಚಹತ್ತಿತು.

" ಸಂನ್ಯಾಸಿಗೆ ಬಹಳ ಪತ್ರ ಕಳಿಸಿದ್ದೇನೆಂದು ನೀವು ಹೇಳಿದಿರಿ; ಆದರೆ ಅವು ಸಂನ್ಯಾಸಿಗೆ ಏಕೆ ಮುಟ್ಟಲಿಲ್ಲ ? ಅವರಿಗೆ ಮುಟ್ಟದಿದ್ದರೆ, ನಿಮಗೆ ಏಕೆ ತಿರುಗಿ ಬರಲಿಲ್ಲ ? ಎಲ್ಲ ಪತ್ರಗಳೂ ಮಾಯವಾಗುವುವೆ ? " ಯಾಮಿನಿಗೆ ಹಿರಣ್ಯಕುಮಾರ ಕೇಳಿದರು.

" ನೀವು ನನ್ನ ಮೇಲೆ ವಿಶ್ವಾಸವಿಡಿರಿ ಅಥವಾ ಬಿಡಿರಿ. ಆದರೆ ನಾನು ಮಾತ್ರ ಸುಳ್ಳು ಹೇಳುವುದಿಲ್ಲ. ಸುಳ್ಳು ಹೇಳಿದರೆ, ಅಂದೇ ಈ ನಾಲಗೆಯನ್ನು ಸೀಳಿಕೊಳ್ಳುವೆ. ನಾನೂ ಮನುಷ್ಯ. ಬಹಳ ಪಾಪಗಳನ್ನು ಮಾಡಿರಬಹುದು. ಆದರೆ ನಾನು ಇಲ್ಲಿಯವರೆಗೆ ಸುಳ್ಳಾಡಿಲ್ಲ. ನನಗೆ ವೈರಿಯಾಗಿದ್ದವರೂ ಹೀಗೆ ಹೇಳಲಾರರು. " ಯಾಮಿನಿ ಹೇಳಿದನು.

ಹಿರಣ್ಯ— " ನಿಮ್ಮ ಮಾತಿನಲ್ಲಿ ವಿಶ್ವಾಸವಿಟ್ಟೆವೆಂದು ತಿಳಿಯುವಾ. ಮತ್ತೆ ನೀವೇನಾದರೂ ಹೇಳಬೇಕೆನ್ನುತ್ತೀರಾ ? ಆ ದಿವಸ ರಾತ್ರಿ ಪ್ರಮೋದನೊಬ್ಬನನ್ನೇ ಬಿಟ್ಟು ಅಲ್ಲಿಂದ ಏಕೆ ಬಂದಿರಿ ? ಇಬ್ಬರೂ ಕೂಡಿಯೇ ಹೋಗಿದ್ದಿರಿ. ಆದರೆ ಒಬ್ಬರೇ ತಿರುಗಿ ಬರಲು ಕಾರಣವೇನು ? ''

" ಆ ದಿವಸ ರಾತ್ರಿ ನಾನು ಇಲ್ಲಿಗೆ ಬಾರದೇ ಹೋಗಿದ್ದರೆ ಒಂದು ಪ್ರಕರಣದಲ್ಲಿ ನನ್ನ ಮನೆ ಹಾಳಾಗಿ ಹೋಗುತ್ತಿತ್ತು, ಪತ್ರವು ಕೈ ಸೇರಿದ ಕೂಡಲೇ ನಾನು ಹೊರಡಬೇಕಾಯಿತು. ಮತ್ತೆ ಏನು ಕೇಳಬೇಕೆನ್ನುತ್ತೀರಿ ? ಹೂಂ, '' ಗಾಬರಿಯಾಗಿ ಯಾಮಿನಿ ಹೇಳಿದ.

ಹಿರಣ್ಯ— " ಕಲಕತ್ತೆಯಲ್ಲಿ ಇಷ್ಟು ಮಹತ್ವದ ಕೆಲಸವಿದ್ದರೆ, ಅಲಾಹಾಬಾದಕ್ಕೆ ಏಕೆ ಹೋಗಿದ್ದಿರಿ ? ನೀವು ಅಲಾಹಾಬಾದದಲ್ಲಿಯೇ ಅಲ್ಲವೆ ನೀರಜಾನನ್ನು ಉದ್ಧಾರ ಮಾಡಿದುದು ? "

ಯಾಮಿನಿ— " ನೀವೇನು, ಕೋರ್ಟಿನಲ್ಲಿಯಂತೆ ನನ್ನ ಕೂಡ ವಾದ-ವಿವಾದ ಮಾಡುತ್ತಿರುವಿರಿ. ಕೆಟ್ಟ ದಿನಗಳು ಬರಹತ್ತಿದವೆಂದರೆ ಹೊನ್ನು

ಹಿಡಿದರೂ ಮಣ್ಣಾಗುವುದೆಂದು ಹೇಳುತ್ತಾರೆ ಸುಳ್ಳಲ್ಲ ನೋಡಿ. ಉಪಕಾರ ಮಾಡಿಯೂ ಅಪಕಾರವನ್ನು ಹೊರಬೇಕಾಗಿದೆ. ಸಂನ್ಯಾಸಿ ಮಹಾರಾಜರು ಹೇಳಿದರೆಂದು ಇಲ್ಲಿಯವರೆಗೆ ಬಂದಿದ್ದೇನೆ. ನೀವು ಬಾಯಿಗೆ ಬಂದಂತೆ ಕೇಳತೊಡಗಿದ್ದೀರಿ. ಆಗಲಿ. ಕೇಳಿರಿ, ನಾನು ಅಲಾಹಾಬಾದ ಸ್ಟೇಶನ್ನು ತಲ್ಪಿದಕೂಡಲೇ ನನಗೆ ಒಬ್ಬ ಸಹಾಯಕನು ಕೂಡಿದ. ' ಒಬ್ಬ ಸಾಕ್ಷಿದಾರ ಅಲಾಹಾಬಾದದಲ್ಲಿದ್ದಾನೆ. ಅವನು ಸಾಕ್ಷಿ ಹೇಳದಿದ್ದರೆ ಖಂಡಿತ ಸೋಲಾಗುವುದೆಂ'ದು ಆತನು ಹೇಳಿದ.

ಅದಕ್ಕಾಗಿ ಅವನೊಂದಿಗೆ ಹೋಗಬೇಕಾಯಿತು. ಆದರೆ ನನ್ನ ಅದೃಷ್ಟವೇ ಕೆಟ್ಟದ್ದಿದೆ. ಆ ಮನುಷ್ಯನು ಅಲ್ಲಿ ಸಿಗಲಿಲ್ಲ ಅವನು ಎರಡು ದಿನ ತಡೆದು ಬರುವನೆಂದು ಕೇಳಿದೆ. ಆದರಿಂದ ಅಲ್ಲಿಯೇ ಇರಬೇಕಾಯಿತು. "

ಹಿರಣ್ಮ— " ಅಲಾಹಾಬಾದಕ್ಕೆ ಬರುವ ಆವಶ್ಯಕತೆಯಿದ್ದರೆ, ಸಹಾಯಕನು ನಿಮಗೆ ಮೊದಲೇ ಏಕೆ ಬರೆಯಲಿಲ್ಲ ? "

ಯಾಮಿನಿ— " ನನಗೆ ಅವನು ಪತ್ರವನ್ನೇನೊ ಬರೆದಿದ್ದ. ಆಗ ಆ ಮನುಷ್ಯನ ಸಾಕ್ಷಿ ಅಗತ್ಯವಾಗಿ ಬೇಕೆಂಬುದು ಅವನಿಗೆ ಗೊತ್ತಿದ್ದಿಲ್ಲ.

ಹಿರಣ್ಮ— " ಹಾಂ, ಕಲಕತ್ತೆಯಿಂದ ನಿಮಗೆ ಪತ್ರ ಬಂದಿತ್ತು. ಅದರೊಳಗೆ ಯಾವಾಗ ಖಟ್ಲೆ ನಡೆಯುವುದೆಂದು ಬರೆದಿತ್ತು ? "

ಯಾಮಿನಿ— " ಐಯ್ದಾರು ದಿನಗಳ ಮೇಲೆ. "

ಹಿರಣ್ಮ— " ಎರಡು ದಿನದ ತರುವಾಯ ನೀವು ಅಲಾಹಾಬಾದವನ್ನು ಬಿಟ್ಟು ಖಟ್ಲೆಯ ಬಗೆಗೆ ಸರಿಯಾಗಿ ವ್ಯವಸ್ಥೆ ಮಾಡಿಕೊಂಡಿರಾ ? "

ಯಾಮಿನಿ— " ಸಾಕು ಇನ್ನು ಕ್ಷಮಿಸಿರಿ. ಇನ್ನು ಹೆಚ್ಚು ವಾದ-ವಿವಾದವು ಸರಿಯಲ್ಲ. ಮಹಶಯರೆ, ನೀವು ನನ್ನನ್ನು ಸುಳ್ಳನೆಂದೂ ಮೋಸಗಾರನೆಂದೂ ಸಿದ್ಧ ಮಾಡಹತ್ತಿರುವಿರಿ............ "

ಹಿರಣ್ಮ— " ಆಯಿತು. ಇನ್ನೊಂದೇ ಪ್ರಶ್ನೆ. ನೀರಜಾನ ದಾಸಿ ಅಲಾಹಾಬಾದಕ್ಕೆ ಬಂದಳು. ಅದೇ ಹೊತ್ತಿಗೆ ನೀವು ಗಟ್ಟಕ್ಕೆ ಏನು ಮಾಡಲು ಹೋಗಿದ್ದಿರಿ ? "

" ಬಂಡೆಗಲ್ಲಿಗೆ ಹಾಯಲು ಹೋಗಿದ್ದೆ. ಇನ್ನು ನಾನು ಏನೂ ಹೇಳುವುದಿಲ್ಲ. ನೀವು ನನಗೆ ಮರ್ಯಾದೆ ಕೊಡುವುದೇ ಇಲ್ಲ. " ಸಿಟ್ಟಿಗೆದ್ದು ಯಾಮಿನೀನಾಥನು ಹೇಳಿದ.

ಈಗ ಹಿರಣ್ಯಕುಮಾರ ಸಂನ್ಯಾಸಿಯ ಕಡೆಗೆ ತಿರುಗಿದರು. “ ನಿಮಗೇ ನಾದರೂ ತಿಳಿಯಿತೆ? ಎಲ್ಲ ಕೇಳಿದ್ದೀರಿ. ನೀವೂ ಸ್ವಲ್ಪ ವಿಚಾರ ಮಾಡಿರಿ. ಇವರಿಗೆ ದಾಸಿ ಬರುವುದು ಖಂಡಿತವಾಗಿಯೂ ಗೊತ್ತಿತ್ತು. ಅದೇ ಹೊತ್ತಿಗೆ ಯಾಮಿನಿ ನನಿಯು ದಂಡೆಗೆ ಹೋದರು. ಯಾಮಿನಿ ನಿಜವಾಗಿಯೂ ದೋಷಿಯೇ ಸರಿ. ತಾನು ನಿರ್ದೋಷಿಯೆಂಬು ದನ್ನು ಸಿದ್ಧಪಡಿಸಲು, ತುಡುಗರನ್ನು ಗೊತ್ತು ಮಾಡಿ ಅಲ್ಲಿಂದ ಅಂದೇ ರಾತ್ರಿ ಯಲ್ಲಿ ಹೊರಟಿರಬೇಕು. ಸ್ವತಃ ಸಂಚು ಮಾಡಿ, ಈಗ ನೀರಜಾನನ್ನು ರಕ್ಷಿಸಿದೆ ನೆಂದು ಹೇಳಿಕೊಳ್ಳುತ್ತಿದ್ದಾರೆ! ” ಸಂನ್ಯಾಸಿಯನ್ನುದ್ದೇಶಿಸಿ ಹೇಳಿದರು.

ಸಂನ್ಯಾಸಿ ಎಲ್ಲವನ್ನು ಕೇಳಿದ. ಯಾಮಿನಿಯೇ ನಿಜವಾಗಿ ದೋಷಿ ಯೆಂದು ಆತನಿಗೆ ನಂಬುಗೆಯಾಯಿತು. ಬೆಂಕಿಯಾದ. ಅವನ ಕಣ್ಣು ಕಿಡಿ ಕಾರಹತ್ತಿದುವು. ಆಗಲೇ ಸಂನ್ಯಾಸಿ ಸಿಟ್ಟಿನಿಂದ ಕಂಪಿಸುತ್ತ– “ ಯಾಮಿನಿ! ನೀವು ನನ್ನ ಮುಂದೆ ಜಾಣತನ ತೋರಿಸುತ್ತೀರಾ, ನಿಜವಾಗಿಯೂ ನೀವೇ ದೋಷಿ. ಎಂಥ ಭಯಂಕರವಾದ ಮಾತಿದು! ನಾನು ಇಂಥ ನರಾಧಮನ ಕೈಗೆ ನನ್ನ ಮಗಳನ್ನು ಕೊಡಬೇಕೆನ್ನುತ್ತಿದ್ದೆ!” ಎಂದು ಹೇಳಿದ.

“ ಸರ್ವನಾಶ! ಯಾಮಿನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆ ಮಾಡುವುದೆ! ಇದಕ್ಕಿಂತ ನೀರಜಾನನ್ನು ಬಾವಿಯೊಳಗೆ ದೂಡುವುದು ಲೇಸು. ನಿಮಗೆ ಮತ್ತೆಲ್ಲಿಯೂ ವರ ಸಿಗುವುದಿಲ್ಲವೆ? ಪ್ರಮೋದನಲ್ಲಿ ಬೇಕಾದಷ್ಟು ದೋಷಗಳಿರಬಹುದು. ಆದರೆ ಯಾಮಿನಿಗಿಂತ ಎಷ್ಟೋ ಪಾಲು ನೆಟ್ಟಗೆ. ನೀರಜಾ, ಪ್ರಮೋದನ ಕೂಡ ಮದುವೆಯಾದರೆ ಸುಖದಿಂದಿರುವಳೆಂಬುದು ನಿಮಗೆ ತಿಳಿದಿದೆ. ” ಎಂದರು ಹಿರಣ್ಯಕುಮಾರರು.

ಹಿರಣ್ಯಕುಮಾರರ ಪ್ರತಿಯೊಂದು ಮಾತು ಯಾಮಿನಿಗೆ ಭಲ್ಲೆಯಿಂದ ಇರಿದಂತಾಗುತ್ತಿತ್ತು. ಅವನಿಗೆ ತಡಕೊಳ್ಳುವುದಾಗಲಿಲ್ಲ. ಸಿಟ್ಟಿನ ಕಟ್ಟೆ ಒಡೆಯಿತು. “ ಕನ್ಯಾದಾನ ಮಾಡುವುದು ಬಿಡುವುದು ತಂದೆಯ ಕೆಲಸ; ನೀವು ನಡುವೆ ಅಡ್ಡಗಾಲು ಹಾಕುವವರು ಯಾರು. ನಿಮಗೇನು ಅಧಿಕಾರವಿದೆ? ” ಬಡಬಡಿಸಿದ ಯಾಮಿನಿ.

“ ಒಳ್ಳೇದು, ತಂದೆಯೇ ಹಿತಾಹಿತವನ್ನರಿತು ಕೆಲಸ ಮಾಡಲಿ. ” ರೇಗಿಕೊಂಡು ಹಿರಣ್ಯಕುಮಾರರೆಂದರು.

ಮಾತುಕತೆ ನಿಂತಿತು. ಸಂನ್ಯಾಸಿ ಎದ್ದು ಯಾಮಿನಿಯ ಮನೆಯಿಂದ ನೀರಜಾನನ್ನು ಕರೆದುಕೊಂಡು ಬರಲು ಹೊರಟ. ಯಾಮಿನಿಗೆ ಜೀವದೊಳಗೆ

ಜೀವ ಬಂದಿತು. ಅವನೂ ಸಂನ್ಯಾಸಿಯ ಕೂಡ ಹೊರಟ. ದಾರಿಯಲ್ಲಿ ಹೋಗುವಾಗ ಯಾಮಿನಿ ಮೆಲ್ಲಗೆ ಕೇಳಿದ—“ ಮಹನೀಯರೆ, ನೀವು ಅವರ ಮಾತನ್ನು ನಂಬಿ ನಾನು ದ್ರೋಹಿಯೆಂದು ಭಾವಿಸಿದಿರಾ ? ”

“ ನೀವು ನಿಜವಾಗಿಯೂ ದ್ರೋಹಿಗಳೇ ಹೌದು. ನೀವು ಮಾಡಿದ ಕೆಲಸಕ್ಕೆ ಶಿಕ್ಷೆಯನ್ನನುಭೋಗಿಸಲೇಬೇಕು. ” ಸಂನ್ಯಾಸಿ ಹೇಳಿದ.

ಯಾಮಿನಿ—“ ನೀವು ಹೀಗೆ ತಿಳಿದುದನ್ನು ನೋಡಿದಾಗಲೇ ನನಗೆ ಸಾಕಷ್ಟು ದಂಡವಾದಂತಾಯಿತು. ಇದಕ್ಕಿಂತ ಹೆಚ್ಚಿನ ಶಿಕ್ಷೆಯೇಕೆ ಮತ್ತೆ ? ನನಗೆ ಮತ್ತೆ ಏತರ ಹೆದರಿಕೆಯೂ ಇಲ್ಲ. ಒಂದು ವೇಳೆ ನಾನು ದ್ರೋಹಿ ಯೆಂದು ತಿಳಿದು, ನೀರಜಾನನ್ನು ನನಗೆ ಕೊಟ್ಟು ಮದುವೆ ಮಾಡದಿದ್ದರೆ, ಅದಕ್ಕಿಂತ ಹೆಚ್ಚಿನ ಶಿಕ್ಷೆ ಬೇರೆ ಮತ್ತಾವುದೂ ಉಳಿಯುವುದಿಲ್ಲ. ಆದರೆ ಮಹ ನೀಯರೆ! ನನ್ನ ಉಪಕಾರಕ್ಕೆ ಇದೇ ಪ್ರತ್ಯುಪಕಾರವೆ ? ಪುರಸ್ಕಾರವೆ ? ”

“ ಪುರಸ್ಕಾರವೆ ! ನೀವು ಪುರಸ್ಕಾರದ ಪ್ರತ್ಯಾಶೆಯುಳ್ಳಿರುವಿರೇನು ? ನೀರಜಾನನ್ನು ಅಪೇಕ್ಷಿಸುತ್ತೀರಾ ? ಹೆಳವ ಕೆಮ್ಮರನುದಿಯ ಫಲವನಾಶಿ ಸಿದ್ದಂತೆ ! ಗಿಡ್ಡ ಮನುಷ್ಯನು ಗುಡ್ಡವನ್ನೇರಿ ಪೌರ್ಣಿಮೆಯ ಚಂದ್ರನನ್ನು ಹಿಡಿಯಲಿಚ್ಛಿಸಿದಂತೆ ! ” ಸಿಟ್ಟಿನಲ್ಲಿ ಸಂನ್ಯಾಸಿ ಮಾತನಾಡಿದ.

ಯಾಮಿನಿ — “ ಮಹನೀಯರೆ, ಒಳ್ಳೇದು ! ನಾನು ಹುಡುಗನೇ ಸರಿ. ನಿಮ್ಮ ಮಗಳನ್ನು ಪ್ರಮೋದನಿಗೆ ಕೊಟ್ಟು ಮದುವೆ ಮಾಡಿರಿ. ಅವನು ನಿರ್ದ್ರೋ ಗುಣವಂತನಲ್ಲವೇ—ಅವನನ್ನೇ ಹಿಡಿಯಿರಿ. ಆದರೆ ನನ್ನದೊಂದು ಮಾತನ್ನು ಕೇಳಿರಿ ಹೀಗೆ ಮಾಡುವ ಮುನ್ನ ನೀರಜಾನ ಅಭಿಪ್ರಾಯವನ್ನು ಕೇಳಿರಿ.”

ಮಾತನಾಡುತ್ತ ಇಬ್ಬರೂ ಯಾಮಿನೀನಾಥನ ಮನೆ ಸೇರಿದರು ಇಂದು ಸಂನ್ಯಾಸಿ ನೀರಜಾನನ್ನು ಮೇಣೆಯಲ್ಲಿ ಕುಳ್ಳಿರಿಸಿಕೊಂಡು ತನ್ನ ಕೂಡ ಕರೆದು ಕೊಂಡು ಹೋಗಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದ. ಪಲ್ಲಕ್ಕಿ ಒದುವು ದಿನ್ನೂ ಹೊತ್ತು ಇತ್ತು. ಅವನಿಂದ ನೀರಜಾನ ಕೂಡ ಮಾತನಾಡಹತ್ತಿದ. ಯಾಮಿನಿಯ ಮೇಲೆ ಸಂಶಯ ತಾಳುವುದನ್ನು ನೋಡಿ ನೀರಜಾ— “ ಅಸಂಭವ, ಇದು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ. ಯಾಮಿನಿ ನಿರ್ದ್ರೋಹಿ. ನಾನು ಬೇಕಾದರೆ ಆಣೆ ಮಾಡಿ ಹೇಳುತ್ತೇನೆ. ಹಿರಣ್ಯಕುಮಾರರು ಅಂಥ ವಿಶ್ವಾಸಕ್ಕೆ ಬಲಿ ಬಿದ್ದು ಹೀಗೆ ಹೇಳಿದ್ದಾರೆ. ಅವರ ಮಾತನ್ನು ನಂಬಿ ಉಪ ಕಾರ ಮಾಡಿದವರಿಗೆ ದ್ರೋಹಿಯೆಂದರೆ ಮಹಾ ಪಾಪ ಬರುವುದು ಇದರಿಂದ ನನಗೂ ಆ ಜೀವನ ಕಷ್ಟವಾಗುವುದು. ಪ್ರಮೋದರಾಗಲಿ, ಯಾಮಿನೀಯ

ರಾಗಲಿ, ಈ ಕೆಲಸವನ್ನು ಮಾಡಿಲ್ಲ. ಪ್ರೇಕರಿಗಾರೋ ಆಕ್ರಮಣ ಮಾಡಿದ್ದರು. ಏಕೊ, ಏನೊ, ನೀನು ಈ ಜನರ ಮೇಲೆಯೇ ಆರೋಪ ಹೊರಿಸುತ್ತಿ!” ಎಂದಳು.

ಮಗಳ ದೃಢ ವಿಶ್ವಾಸವನ್ನು ನೋಡಿ ತಂದೆಯ ಮನಸ್ಸು ಹೊಯ್ದಾಡ ಹತ್ತಿತು

## ದೇವರ ಗುಡಿಯಲ್ಲಿ ದೆವ್ವ !

ಯಾಮಿನಿ ನೀರಜಾನನ್ನು ಸಂನ್ಯಾಸಿಯ ಹತ್ತಿರ ಬಿಟ್ಟ. ತಾನು ಮತ್ತೊಂದು ಕೋಣೆಯೊಳಗೆ ಹೋಗಿ ಕುಳಿತುಕೊಂಡ. ಓರಣ್ಯಕುಮಾರರ ಮಾತು ಕೇಳಿದಾಗಿನಿಂದ ಅವನ ಮೈ ನಡುಗುತ್ತಿತ್ತು. ಪ್ರಮೋದನ ಕೂಡ ನೀರಜಾನ ವಿವಾಹವೆ! ನೀರಜಾನನ್ನು ಅವಳಿಗೆ ಕೊಡದಿದ್ದರೂ ಅಷ್ಟೆ, ಅವನು ಸಹಿಸಿಕೊಳ್ಳುವನು. ಆದರೆ ಪ್ರಮೋದನಿಗೆ ಕೊಟ್ಟು ಮದುವೆ ಮಾಡುವುದು ಅವನಿಗೆ ಅಸಹ್ಯವೆನಿಸುವುದು. ಅದಕ್ಕಾಗಿ ಪ್ರತೀಕಾರವನ್ನು ಕುರಿತು ಆಲೋಚಿಸುತ್ತಿದ್ದ. ಹೊತ್ತು ಕೈಗೆ ಬಂದಿತ್ತು. ಆದರೂ ನೀರಜಾನ ಕೂಡ ಮದುವೆಯಾಗಲು ಸಾಧ್ಯವಾಗಲಿಲ್ಲ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಇದಕ್ಕಾಗಿ ಅವನು ಅನುತಾಪ ಪಡುತ್ತಿದ್ದ.

ಇಲ್ಲಿ ಒಂದು ಪ್ರಶ್ನೆಯೇಳುವುದು. ನೀರಜಾನನ್ನು ಮದುವೆಯಾಗಲೇ ಬೇಕೆಂದು ಅವನ ಮನಸ್ಸಿನಲ್ಲಿದ್ದರೆ, ಇಲ್ಲಿಯವರೆಗೆ ಸುಮ್ಮನೇಕೆ ಇದ್ದ? ನೀರಜಾ ತನ್ನ ಕೈಯೊಳಗೇ ಇರಲಿಲ್ಲವೇ? ಯಾಮಿನಿಯಂಥ ಮನುಷ್ಯನು ಬಲಪೂರ್ವಕವಾಗಿ ಮದುವೆಯಾದರೆ ಯಾರು ತಡೆಯುವರು ?

ಬಹಳ ಅಡೆ-ತಡೆಗಳು ಮದುವೆಗೆ ಅಡ್ಡ ಬಂದುವು. ಇದಕ್ಕೆ ಉತ್ತರವಾಗಿ ವಾಚಕರಿಗೆ ಇಷ್ಟನ್ನೇ ಹೇಳಬಯಸುತ್ತೇವೆ. ನೀರಜಾನನ್ನು ಯಾಮಿನಿ ಮನೆಗೆ ತಂದ. ಆಗ ಅವನ ತಾಯಿ, ಚಿಕ್ಕಮ್ಮ ತನ್ನ ಮಾತನ್ನು ಕೇಳುವರೊ ಹೇಗೆ ಎಂಬುದನ್ನು ಅವನು ವಿಚಾರ ಮಾಡಲಿಲ್ಲ. ತಿಳಿಸಿ ಹೇಳಿದರೆ ಅವರು ಒಪ್ಪಬಹುದೆಂದು ನಂಬಿದ್ದ. ಇಲ್ಲವಾದ್ದರೆ ಅವನು ಅವಳನ್ನು ಬೇರೊಂದು ಮನೆಯಲ್ಲಿಯೇ ಇಡುತ್ತಿದ್ದ. ನೀರಜಾ ಮನೆಗೆ ಬಂದಳು. ಮದುವೆಯ ಪ್ರಸ್ತಾಪವೂ ಹೊರಟಿತು. ಆಗ ತಾಯಿ, ಚಿಕ್ಕಮ್ಮ ಮರುಗಹತ್ತಿದರು!

ನೀರಜಾಳ ಕುಲ-ಗೋತ್ರಗಳು ಗೊತ್ತಿದ್ದಿಲ್ಲ. ಆದರಿಂದ ಗಡಿಬಿಡಿ ಆರಂಭ ವಾಯಿತು. ಯಾಮಿನಿ ಬಹಳ ಹಟ ಹಿಡಿದಮೇಲೆ ಹಣ್ಣು ಹಣ್ಣಾದ ದೊಡ್ಡಮ್ಮ ನೀರಜಾಳ ಕೂಡ ಸಂಬಂಧ ಬೆಳಿಸಿದರೆ ತನ್ನ ಅಯ್ದು ಲಕ್ಷ ರೂಪಾಯಿಗಳಲ್ಲಿ ಒಂದು ಕವಡಿಯನ್ನೂ ಕೊಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟಳು. ಈ ಮಾತಿನಿಂದ ಯಾಮಿನಿ ದೊಡ್ಡ ಸಂಕಟದಲ್ಲಿ ಬಿದ್ದ. ಒಂದು ಕಡೆಗೆ ನೀರಜಾ, ಇನ್ನೊಂದು ಕಡೆಗೆ ಅಯ್ದು ಲಕ್ಷ ರುಪಾಯಿಯ ಆಶೆ! ಕೊನೆಗೆ ಲಕ್ಷ್ಮಿಯೇ ಗೆದ್ದಳು.

ಇಷ್ಟಾದರೂ ಯಾಮಿನಿಗೆ ನೀರಜಾಳ ಆಶೆ ತಪ್ಪಲಿಲ್ಲ. ಮುದುಕಿ ಮಡಿಯುವ ಹಾದಿಯನ್ನು ನೋಡಹತ್ತಿದ. ಮುದುಕಿಯೆಂದಮೇಲೆ ಕೇಳುವು ದೇನು? ಹಾಸಿಗೆಗೂ ಅವಳಿಗೂ ಗಂಟು. ಬಹಳವಾದರೆ ಅವಳು ಒಂದು ವರುಷ ಬದುಕುವಳು. ಇಷ್ಟು ಸ್ವಲ್ಪ ಅವಧಿಗಾಗಿ ಅವನು ಅಯ್ದು ಲಕ್ಷ ರುಪಾಯಿಗಳನ್ನು ಒದೆದು ನೋಡುವನೆ? ಯಾಮಿನೀನಾಥನೂ ಚತುರ!

ಅತ್ತ ಮುದುಕಿ ಮಡಿಯಬೇಕು, ಇತ್ತ ಮದುವೆಯಾಗಬೇಕು. ಅದ ರಿಂದ ಸದ್ಯಕ್ಕೆ ಸ್ಥಗಿತವಾಯಿತು. ಯಾಮಿನೀನಾಥನಿಗೆ ನೀರಜಾಳ ಕೂಡ ಮಾತನಾಡಲೂ ಹೆಚ್ಚು ಅವಕಾಶ ಸಿಗುತ್ತಿದ್ದಿಲ್ಲ. ಬಹಳ ಪ್ರಯಾಸ ಪಟ್ಟಮೇಲೆ ಒಮ್ಮೊಮ್ಮೆ ಏಕಾಂತದಲ್ಲಿ ನೀರಜಾ ಭೆಟ್ಟಿಯಾಗುತ್ತಿದ್ದಳು. ಅವಳು ಮನೆಯೊಳಗೆ ಇರುವದೇ ಕಡಮೆ. ವಿಶೇಷವಾಗಿ ಉದ್ಯಾನದಲ್ಲಿಯೇ ತಿರುಗಾಡುತ್ತಿದ್ದಳು. ಆದರೆ ಅಲ್ಲಿಯೂ ಯಾಮಿನಿಯ ತಂಗಿ ಅಥವಾ ದಾಸಿ ಮತ್ತೆ ಯಾರಾದರೂ ಹಿಂದೆ ಇದ್ದೇ ಇರುತ್ತಿದ್ದರು. ಅದರಿಂದ ಮನಬಿಚ್ಚಿ ನೀರಜಾಳ ಕೂಡ ಮಾತನಾಡಲು ಯಾಮಿನಿಗೆ ಹೊತ್ತೇ ಸಿಗುತ್ತಿದ್ದಿಲ್ಲ. ನೀರಜಾ ಒಬ್ಬಳೇ ಯಾವಾಗ ಸಿಗುವಳೊ, ಯಾವಾಗ ನಾನು ನನ್ನ ಬಯಕೆ ಗಳನ್ನು ಅವಳ ಮುಂದಿಡುವೆನೊ ಎಂದು ಸದಾ ಚಿಂತಿಸುತ್ತಿದ್ದ. ನೀರಜಾ ಒಬ್ಬಳೇ ಸಿಕ್ಕರೆ ತೀರಿತು. ಕೂಡಲೇ ಮದುವೆಯ ಮಾತನ್ನೇ ಹೇಳುತ್ತಿದ್ದ. ಅವಳ ಮನೋಭಾವವನ್ನು ತಿಳಿದುಕೊಳ್ಳಲು ಹವಣಿಸುತ್ತಿದ್ದ. ನೀರಜಾ ಮದುವೆಗೆ ಅಡ್ಡಿ ಮಾಡುತ್ತಾಳೆಂದು ತಿಳಿದುಕೊಂಡ. ಬಲಪೂರ್ವಕವಾಗಿ ವಿವಾಹವಾದರೆ ಕೇವಲ ಹಣವಷ್ಟೇ ಹಾಳಾಗುವುದಿಲ್ಲ. ನೀರಜಾಳ ಶ್ರದ್ಧಾ ಪ್ರೇಮಗಳೂ ಕಡಮೆಯಾಗುವುವು ಮುಂತಾಗಿ ಯಾಮಿನಿ ವಿಚಾರ ಮಾಡುತ್ತಿದ್ದ.

ಯಾಮಿನಿಯ ಮನಸ್ಸು ಬೇಕಾದಷ್ಟು ಕಲುಷಿತವಾಗಿರಲಿ, ಆದರೆ ತೋರಿಕೆಗೆ, ಜನರಿಗೆ ಒಳ್ಳೆಯವನೆಂದು ಕಾಣುವಂತೆ ಪ್ರಯತ್ನಮಾಡುತ್ತಿದ್ದ. ಅವನು ಎಂದೂ ಅಕಾರಣ ನಿಂದೆಯನ್ನು ಸಹಿಸಿಕೊಳ್ಳುತ್ತಿದ್ದಿಲ್ಲ. ಮುಖಸ್ತುತಿ ಯೆಂದರೆ ಸಾಕು, ಕೈಯಿಂದ ನಾಲ್ಕು ದುಡ್ಡನ್ನೂ ಖರ್ಚುಮಾಡುತ್ತಿದ್ದ. ನೀರಜಾ ಅವನನ್ನು ಸಚ್ಚರಿತ್ರನೆಂದು ತಿಳಿದಿದ್ದಳು. ಶ್ರದ್ಧಾ-ಭಕ್ತಿಗಳಿಂದ ಕಾಣುತ್ತಿದ್ದಳು. ಎಂದಮೇಲೆ ಯಾಮಿನಿ ಆ ಭಕ್ತಿಯನ್ನು, ಸ್ವಲ್ಪ ಹೊತ್ತಿಗಾಗಿ, ಶಕ್ತಿಬಲದಿಂದ ನಷ್ಟಪಡಿಸುವನೇ? ಈ ಎಲ್ಲ ಕಾರಣಗಳಿಂದಲೇ ಯಾಮಿನಿ ವಿವಾಹವನ್ನು ಒಂದು ವರ್ಷದವರೆಗೆ ಮುಂದುವರಿಸಿದ್ದ.

ನೀರಜಾನನ್ನು ಪಡೆದ ಮಾತ್ರಕ್ಕೆ ಅವನ ಕೆಲಸ ತೀರಲಿಲ್ಲ. ಹಣವನ್ನು ಪಡೆಯುವುದೂ ಒಂದು ದೊಡ್ಡ ಕೆಲಸವಿತ್ತು. ಅದರಿಂದ ಮದುವೆ ಮುಂದೆ ಬಿದ್ದಿತು. ಆದರೆ ಈಗ ಅದನ್ನು ಕುರಿತು ಹೇಳಿಸಹತ್ತಿದ. ಇದೀಗ ಯಾಮಿನಿಯ ದೊಡ್ಡಮ್ಮ ಗಂಗಾಸಾಗರಕ್ಕೆ ಹೋಗಿ ದೇಹವನ್ನೂ ಇಟ್ಟಳು. ಆಗಿನಿಂದ ಯಾಮಿನಿಗೆ ಹೇಳತೀರದಷ್ಟು ಆನಂದ, ಮುಗಿಲು ಮೂರೇ ಗೇಣು ಉಳಿಯಿತು. ಇನ್ನು ನೀರಜಾನನ್ನು ಕೈಹಿಡಿಯಲು ಏನೂ ಅಡ್ಡಿಯಿಲ್ಲವೆಂದು ಅವನ ಮತ. ಬೇಕಾದಾಗ ಮದುವೆಯಾಗಬಹುದು. ಆದರೆ ಮನುಷ್ಯನು ಆಲೋಚಿಸಿದಂತೆ ಕೆಲಸಗಳಾಗುವುದಿಲ್ಲ. ತಾನೊಂದು ಬಗೆದರೆ ದೈವ ತಾನೊಂದು ಬಗೆವುದು. ಯಾಮಿನಿಯ ಎಲ್ಲ ಆಶೆಗಳ ಕಟ್ಟನ್ನು ಹುಚ್ಚು-ಹೊಳೆ ಬಂದು ಕೊಚ್ಚಿಕೊಂಡು ಹೋಯಿತು.

ಇದೇ ಸಮಸ್ಯೆಯನ್ನು ಬಿಡಿಸುತ್ತ ಯಾಮಿನಿ ಕುಳಿತುಕೊಂಡಿದ್ದ. ಆಮೇಲೆ ಒಬ್ಬ ದ್ವಾರಪಾಲಕನನ್ನು ಕರೆದು ಏನೋ ಅಪ್ಪಣೆಮಾಡಿ ಕಳಿಸಿದ. ಸ್ವಲ್ಪ ಸಮಯದಲ್ಲಿಯೇ ಅವನು ಒಬ್ಬನನ್ನು ಕರೆದುಕೊಂಡು ಬಂದ. ಹೊಸ ಮನುಷ್ಯನನ್ನು ಒಳಗೆ ಬಿಟ್ಟು ದ್ವಾರಪಾಲಕನು ಮತ್ತೆ ಹೊರಟುಹೋದ. ಏನೇನನ್ನೋ ಯಾಮಿನಿ ಆತನಿಗೆ ತಿಳಿಸಿಹೇಳುತ್ತಿದ್ದ. ಬಹಳ ಹೊತ್ತು ಮಾತುಕತೆ ನಡೆದಿದ್ದುವು. ಬಂದ ವ್ಯಕ್ತಿಯ ಮಾತಿನಲ್ಲಿ ಸಿಟ್ಟು ಹೆಚ್ಚಾಗಿತ್ತು. ಯಾಮಿನಿಗೆ ಆತನೆಂದ, "ನೀವು ಹೇಳಿದ ಎಷ್ಟೋ ಕೆಲಸಗಳನ್ನು ನಾನು ಮಾಡಿದ್ದೇನೆ; ಆದರೆ ಈ ಕೆಲಸವು ಮಾತ್ರ ನನ್ನಿಂದಾಗದು, ಕ್ಷಮಿಸಿರಿ."

ಯಾಮಿನಿ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿದ, ಹುಬ್ಬು ಗಂಟಿಕ್ಕಿದ. "ನಿನ್ನ ಮನಸ್ಸು, ಆದರೆ ನೋಡು, ಸರಿಯಾಗಿ ವಿಚಾರ ಮಾಡು." ಎಂದ.

ಈ ಮಾತಿಗೆ ಬಂದವನು ಏನೂ ಉತ್ತರಕೊಡದೆ ಹೊರಟುಹೋದ. ಯಾಮಿನಿ ಮತ್ತೊಬ್ಬ ಆಳನ್ನು ಕರೆದ. ಬಹಳ ಹೊತ್ತು ವಾಗ್ವಾದಗಳಾದುವು. ಕೊನೆಗೆ ಆ ಆಳುನು ಒಪ್ಪಿಕೊಂಡು ಕೆಲಸದಮೇಲೆ ಹೊರಟುಹೋದ. ಈಗ ಯಾಮಿನಿ ಒಬ್ಬನೇ ಆದ. ಕುಳಿತುಕೊಂಡು ಆಲೋಚನೆ ಮಾಡಹತ್ತಿದ. ಪೂರ್ವದಿಕ್ಕಿನಲ್ಲಿ ಒಂದೆರಡು ತಾರಗಳು ಮೂಡಹತ್ತಿದುವು. ಅಲ್ಲಿಯೇ ಕುಳಿತು ಕೊಂಡು ಆ ತಾರೆಗಳನ್ನು ನೋಡಿ ಯಾಮಿನೀನಾಥನು ತನ್ನ ವಿಚಾರಗಳಲ್ಲಿ ಮುಳು-ಮುಳುಗಿ ಏಳಹತ್ತಿದ. ಇಷ್ಟರೊಳಗೆಯೇ ಆ ಕೋಣೆಯೊಳಗೆ ಸಂನ್ಯಾಸಿ ಕಾಲಿಟ್ಟ. ಅವನು ಹೊರಡಲು ಅಪ್ಪಣೆ ಬೇಡಲು ಬಂದಿದ್ದ.

ಸಂನ್ಯಾಸಿ—“ ಯಾಮಿನೀನಾಥ, ಈಗ ನಾನಂತೂ ನೀರಜಾನನ್ನು ಕರೆದುಕೊಂಡು ಹೋಗುತ್ತೇನೆ. ಆದರೆ ಒಂದು ಮಾತು, ನಾನು ನೀರಜಾನ ಕೂಡ ಮಾತನಾಡಿ, ಅವಳ ಮಾತನ್ನು ಕೇಳಿ, ದಂಗುಬಡಿದಂತಾಗಿದ್ದೇನೆ. ನೀವು ದೋಷಿಯೆಂದು ಈಗ ಹೇಳಲಾರೆ; ಆದರೆ....”

ಯಾಮಿನಿ—“ ಮಹನೀಯರೆ! ನಾನು ನಿಮ್ಮಲ್ಲಿ ಒಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಾನು ನೀರಜಾನಿಗೆ ಯೋಗ್ಯನಲ್ಲ. ನೀವು ದಯ ಮಾಡಿ ನೀರಜಾನನ್ನು ಉದ್ಧರಿಸಿದ ಮಾತನ್ನು ಮರೆಯಿರಿ. ನೀರಜಾನಿಗೂ ಹೀಗೆಯೇ ಹೇಳಿರಿ. ಆದರೆ....”

ಹೀಗೆ ಹೇಳುತ್ತ ಹೇಳುತ್ತ ಯಾಮಿನಿ ಅಧೀರನಾದ. ಸಂನ್ಯಾಸಿಯ ಚರಣಗಳನ್ನು ಹಿಡಿದುಕೊಂಡು “ ಆದರೆ, ಮಹನೀಯರೆ! ಅಪರಾಧವಿಲ್ಲದೆಯೇ ನನಗೆ ದೋಷಿಯೆಂದು ಹೆಸರಿಡಬೇಡಿರಿ. ” ಎಂದ.

ಸಂನ್ಯಾಸಿ—“ ಎಲಾ! ಯಾಮಿನೀನಾಥ, ಇದನ್ನೇನು ಹೇಳುತ್ತೀರಿ! ಏಳಿರಿ, ಏಳಿರಿ. ”

ಯಾಮಿನಿ—“ ಮಹನೀಯರೆ, ತರ್ಕದ ಬಲದಿಂದ ಎಲ್ಲವೂ ಸಿದ್ಧವಾಗುತ್ತಿದ್ದರೆ, ಈಶ್ವರನ ಅಸ್ತಿತ್ವವನ್ನು ಕುರಿತು ಈ ಎಲ್ಲ ಗಡಿಬಿಡಿಯೇಕೆ ನಡೆಯುತ್ತಿತ್ತು? ನೀವು ಶಾಸ್ತ್ರಜ್ಞರಿರುವಿರಿ, ನಾನು ನಿಮಗೆ ಹೇಳಬೇಕೆ? ”

ಸಂನ್ಯಾಸಿ—“ ಇಲ್ಲ. ನಾನು ನೀವು ದೋಷಿಯೆಂದು ಇನ್ನೂ ತಿಳಿದಿಲ್ಲ. ಇಂದು ನೀರಜಾನನ್ನು ಕರೆದುಕೊಂಡು ಹೋಗುತ್ತೇನೆ. ಆ ಅಪರಾಧಿಯ ಪತ್ತೆ ಹತ್ತದಿದ್ದರೆ ಕೃತಜ್ಞತಾಪೂರ್ವಕವಾಗಿ ನಾನು ನೀರಜಾನನ್ನು ತಂದು ನಿಮ್ಮ ದಾಸಿಯನ್ನಾಗಿ ಮಾಡುವೆ. ”

ಇದೇ ಹೊತ್ತಿಗೆ ನೀರಜಾ ಅಲ್ಲಿಗೆ ಬಂದಳು. "ಅಪ್ಪ, ನಾನು ಸಿದ್ಧಳಾಗಿದ್ದೇನೆ. ನಡೆ" ಎಂದಳು.

ಸಂನ್ಯಾಸಿ, ನೀರಜಾ ಇಬ್ಬರೂ ಯಾಮಿನಿಯಿಂದ ಅಪ್ಪಣೆ ಪಡೆದು ಹೊರಟರು.

ಯಾಮಿನಿ ದ್ವಾರಪಾಲಕನನ್ನು ಕರೆದ. "ಆಗಲೇ ಒಬ್ಬನನ್ನು ಕೆಲಸದ ಸಲುವಾಗಿ ಕಳಿಸಿದ್ದೇನೆ. ಈಗ ಆ ಕೆಲಸದ ಆವಶ್ಯಕತೆಯಿಲ್ಲವೆಂದು ಹೇಳಿ ಅವನನ್ನು ಕರೆದುಕೊಂಡು ಬಾ." ಎಂದು ಹೇಳಿದ.

ಬಹಳ ಹೊತ್ತಿನಮೇಲೆ ದ್ವಾರಪಾಲಕನು ಬಂದು—"ರಾಯರೆ, ಬಹಳ ಹುಡುಕಿದೆ ಆದರೂ ಅವನು ಸಿಗಲಿಲ್ಲ." ಎಂದ.

## ಗುಪ್ತ ಶತ್ರು

ಅಂದೇ ಹೊತ್ತು ಮುಳುಗಿದಮೇಲೆ ಪ್ರಮೋದನು ಯಾಮಿನಿಯ ಮನೆಯಕಡೆ ಕಾಲು ನಡಿಗೆಯಿಂದಲೇ ಹೊರಟಿದ್ದ. ಚೌರಂಗಿಯೊಳಗೆ ಹಾಯ್ದು ಭವಾನೀಪುರದ ದಾರಿಗೆ ಬಂದ. ಕತ್ತಲೆಯ ರಾತ್ರಿ. ದಾರಿಯ ಮೇಲೆ ಬೆಳಕಿರಲಿಲ್ಲ. ಬೀದಿಯ ಮಿಣುಕು ದೀಪಗಳು ಮಾತ್ರ ಅಲ್ಲಲ್ಲಿ ಕಾಣುತ್ತಿದ್ದುವು. ಅದನ್ನು ನೋಡಿ ಆಗಸದಲ್ಲಿದ್ದ ಒಂದೆರಡು ನಕ್ಷತ್ರಗಳು ನಗುತ್ತಿದ್ದುವು ಒಮ್ಮೊಮ್ಮೆ ನಾಯಿಗಳು ಬೊಗಳುವುದರಿಂದ, ಪಕ್ಷಿಗಳು ಚಿಲಿಪಿಲಿ ಎನ್ನುವುದರಿಂದ, ಅವು ಮೇಲೆ-ಕೆಳಗೆ ಹಾರಾಡುವುದರಿಂದ ಪ್ರಮೋದನ ವಿಚಾರಗಳು ನಡುವೆಯೇ ನಿಲ್ಲುತ್ತಿದ್ದುವು. ದಾರಿಯಮೇಲೆ ಮನುಷ್ಯರ ಓಡಾಟವು ಬಹಳವಿದ್ದಿಲ್ಲ. ಒಬ್ಬಿಬ್ಬರು ಓಡಾಡುತ್ತಿದ್ದರು. ಕತ್ತಲೆಯಲ್ಲಿ ಅವರನ್ನು ಗುರುತಿಸುವುದು ಕಠಿಣವಾಗಿತ್ತು. ಪ್ರಮೋದನಿಗೂ ಇದರ ಚಿಂತೆಯಿದ್ದಿಲ್ಲ. ಅವನು ಎಲ್ಲಿಯೂ ಅತ್ತ-ಇತ್ತ ನೋಡುತ್ತಿದ್ದಿಲ್ಲ. ಕೇವಲ ತನ್ನ ವಿಚಾರದೊಳಗೇ ಮಗ್ನನಾಗಿ ಕತ್ತಲೆಯನ್ನು ಸೀಳಿಕೊಂಡು ಒಂದೇಸಮನೆ ಹೊರಟಿದ್ದ. ಒಮ್ಮೆಲೇ ಪಿಸ್ತೂಲಿನ ಸಪ್ಪಳವಾಯಿತು. ಗಾಬರಿಯಾಗಿ ಹಿಂದಿರುಗಿ ನೋಡಹತ್ತಿದ.

ಇಬ್ಬರು ಓಡುವುದು ಕಾಣಿಸಿತು. ತನಗೇ ಗುರಿಯಿಟ್ಟು ಪಿಸ್ತೂಲನ್ನು ಹೊಡೆದರೆಂದು ಪ್ರಮೋದನಿಗೆ ಮನವರಿಕೆಯಾಯಿತು. ಅವರಿಬ್ಬರೂ ಕತ್ತಲೆ

ಯೊಳಗೆ ಎಲ್ಲಿಯೋ ಮಟಮಾಯವಾದರು. ಹತ್ತಿರವೇ ಇದ್ದ ಒಂದು ದೊಡ್ಡ ಮಳಿಗೆಯಲ್ಲಿ ಅವರು ಹೊಕ್ಕರೆಂದು ಪ್ರಮೋದನಿಗೆ ತಿಳಿಯಿತು. "ಚೌಕೀದಾರ! ಚೌಕೀದಾರ!" ಎನ್ನುತ್ತ ಅವನು ಆಕಡೆಗೆಯೇ ಸಾಗಿದ.

ಕೂಟದೊಳಗಿದ್ದ ಸಿಪಾಯಿಯನ್ನು ಕರೆದು ಪ್ರಮೋದನು—"ನಿಮಗೆ ಕಾಣಿಸಲಿಲ್ಲವೆ; ಯಾರೋ ಈಗ ನನ್ನಮೇಲೆ ಗುಂಡುಹಾರಿಸಿದರು?" ಎಂದು ಹೇಳಿದ.

"ಇಲ್ಲ, ಬಾಬುಸಾಹೇಬರೆ! ಯಾವ ಹುಡುಗನಾದರೂ ಪಟಾಕ್ಷಿ ಹಾರಿಸಿರಬಹುದು, ನೀವೇನೂ ಗಾಬರಿಯಾಗಬೇಡಿರಿ." ಸಿಪಾಯಿ ಕೂಡಲೇ ಉತ್ತರ ಕೊಟ್ಟ.

"ಅಲ್ಲ, ಅಲ್ಲ, ನಾನು ಸರಿಯಾಗಿ ಕೇಳಿದ್ದೇನೆ. ಅದು ಗುಂಡಿನ ಸಪ್ಪಳವೇ ನಿಜ. ನೀವು ನನ್ನ ಕೂಡ ಬನ್ನಿರಿ; ಗುಂಡು ಹಾರಿಸಿದವರು ಈ ದೊಡ್ಡ ಮಳಿಗೆಯೊಳಗೆ ನುಗ್ಗಿ ಹೋದರು."

"ನಡೆಯಿರಿ, ಆದರೆ ಆ ಮಳಿಗೆಯೊಳಗೆ ಒಂದು....ಅಥವಾ....ದೇವರೆ! ....ನೀವು ನಡೆಯಿರಿ."

"ಬೇಗಬೇಗ ನನ್ನ ಕೂಡ ಬನ್ನಿರಿ" ಎಂದು ಪ್ರಮೋದನು ವೇಗವಾಗಿ ಆ ಮಳಿಗೆಯಕಡೆಗೆ ಸಾಗಿದ. ಚೌಕೀದಾರನೂ "ಯಾರವರು, ಯಾರಲ್ಲಿ?" ಎನ್ನುತ್ತ ಅವನ ಹಿಂದೆ ಹಿಂದೆ ಹೊರಟ.

ಇಬ್ಬರೂ ಮಳಿಗೆಯನ್ನು ತಲುಪಿದರು. ಆ ಮಳಿಗೆಗೆ ಒಂದು ಹಿತ್ತಿಲಿತ್ತು. ಅಲ್ಲಿ ಅವರಿಗೆ ಯಾರೂ ಸಿಗಲಿಲ್ಲ ಮತ್ತೆ ಗುಂಡುಹಾರಿದ ಸಪ್ಪಳ ಕೇಳಿಸಿತು. ಈಸಾರೆ ಗುಂಡು ಸರ-ಸರ ಸಪ್ಪಳವಾಡುತ್ತ ಪ್ರಮೋದನ ಕಿವಿಯ ಹತ್ತಿರ ಹಾಯ್ದುಹೋಯಿತು. ತುಸು ದೂರದಲ್ಲಿ ಇಬ್ಬರು ಓಡಿಹೋಗುವುದು ಕಾಣಿಸಿತು.

ಪ್ರಮೋದನನ್ನು ಹೊಡೆಯಬೇಕೆಂದೇ ಪಿಸ್ತೂಲನ್ನು ಹೊಡೆದಿದ್ದರೆಂದು ಈಸಾರೆ ಸಂಪೂರ್ಣವಾಗಿ ಸ್ಪಷ್ಟವಾಯಿತು. ಅವರಿಗೆ ಸೋಜಿಗವೆನಿಸಿತು. ಸ್ವಲ್ಪ ಸಮಯ ಅಲ್ಲಿಯೇ ನಿಂತುಕೊಂಡಿದ್ದು, ಅವನು ಮತ್ತೆ ಆ ಕೊಲೆಗಾರರನ್ನು ಬೆನ್ನಟ್ಟಿದ. ತುಸು ದೂರ ಹೋದ. ಯಾರೂ ಸಿಗಲಿಲ್ಲ, ಆಗ ಅವನು ಮಳಿಗೆಯ ಆ ಬಾಗಿಲಿನ ಕಡೆಗೆ ನಡೆದ. ಬಾಗಿಲಲ್ಲಿ ಬೆಳಕು ಕಾಣಿಸುತ್ತಿತ್ತು. ಒಬ್ಬ ದ್ವಾರಪಾಲಕನು ಕಾವಲು ಮಾಡುತ್ತಿದ್ದ. ಒಳಗೆ ಹೋಗಿ ಪ್ರಮೋದನು

ಅವನನ್ನು ಕೇಳಿದ—" ಈಗ ಪಿಸ್ತೂಲು ಹಿಡಿದುಕೊಂಡು ಹೋಗುವವರನ್ನು ಕಂಡೆಯಾ ? "

" ಇಲ್ಲ, ನಾನಂತೂ ನೋಡಲಿಲ್ಲ. " ದ್ವಾರಪಾಲಕನು ಉತ್ತರಕೊಟ್ಟ. ಪ್ರಮೋದನು ಅಲ್ಲಿಂದ ಮತ್ತೆ ರಸ್ತೆಯಕಡೆಗೆ ತಿರುಗಿದ. ಪಿಸ್ತೂಲನ್ನು ಕೈಯೊಳಗೆ ಹಿಡಿದುಕೊಂಡಿದ್ದ. ಒಬ್ಬನು ಅದೇ ಕೋಣೆಯೊಳಗೆ ಹೊಕ್ಕ. ಒಳಗಿನ ಬೆಳಕು ಆ ಮನುಷ್ಯನ ಮೋರೆಯಮೇಲೆ ಬಿದ್ದಿತು. ಪ್ರಮೋದನು ಕೂಡಲೇ ಗುರುತುಹಿಡಿದ. ಅವರು ಹಿರಣ್ಯಕುಮಾರರು ! ಅವರ ಕೈಯೊಳಗೆ ಪಿಸ್ತೂಲು, ಉಡುಗೆ ಅಸ್ತವ್ಯಸ್ತ, ಬಹಳ ದಣಿದಿದ್ದರು. ಇದೆಲ್ಲವನ್ನು ಪ್ರಮೋದನು ನೋಡಿದ. ಹಿರಣ್ಯಕುಮಾರರು ಈ ವೇಷದಲ್ಲಿಯೆ ! ಅವನು ಹೌಹಾರಿದ.

ಪ್ರಮೋದನ ಮಸ್ತಕದೊಳಗೆ ನಾನಾಸಂದೇಹಗಳು ಸುಳಿಯಹತ್ತಿದವು. ಅವನು ಆಲೋಚನೆ ಮಾಡಹತ್ತಿದ—" ಇದೇನು ? ಹಿರಣ್ಯಕುಮಾರರು ಈ ವೇಷದಲ್ಲಿಯೇಕೆ ? ಇದು ಹೇಗೆ ಸಾಧ್ಯ ? ನನ್ನನ್ನು ಹೊಡೆದರೆ ಅವರಿಗಾಗುವ ಲಾಭವೇನು ? ಅವರಿಗೆ ನನ್ನನ್ನು ನೋಡಿದರೆ ಆಗುವುದಿಲ್ಲ, ನಿಜ. ಇದಕ್ಕಾಗಿಯೇ ಅವರು ಆದಿವಸ ಬಿಟ್ಟಿಯಲ್ಲಿ ನನಗೆ ದಂಡ ಮಾಡಿದರು. ಆದರೆ ಅವರು ನನ್ನನ್ನು ಕೊಲ್ಲಲು ಏಕೆ ಪಣ ತೊಟ್ಟಿದ್ದಾರೆ ?—ನಾನೂ ಹಾಗೆಯೇ. ಅವರನ್ನು ಕಂಡರೆ ನನಗಾಗುವುದಿಲ್ಲ, ನನ್ನ ಮೈಯೆಲ್ಲ ಉರಿಯುತ್ತದೆ. ಆದರೆ ನನ್ನ ಮನಸ್ಸಿನೊಳಗೆ ಎಂದೂ ಇಂಥ ವಿಚಾರವು ಬಂದಿಲ್ಲವಲ್ಲ ! ಇಲ್ಲ, ಇದು ಸಾಧ್ಯವಿಲ್ಲ. ನನ್ನನ್ನು ಹೊಡೆಯುವುದರಿಂದ ಹಿರಣ್ಯರಿಗೆ ಬರುವ ಲಾಭವಾದರೂ ಅಷ್ಟರಲ್ಲಿಯೇ ಇದೆ ! ಅಕಾರಣವಾಗಿ ನಾನು ಹೀಗೆ ವಿಚಾರ ಮಾಡಬಾರದು. ಹೀಗೆ ವಿಚಾರ ಮಾಡುವುದರಿಂದಲೇ ಮನುಷ್ಯನು ಕೆಡುತ್ತಾನೆ. ಆದರೆ ಇದೇನು ಸಾಮಾನ್ಯ ಮಾತಲ್ಲ. ಹಿರಣ್ಯರ ಕೈಯಲ್ಲಿ ಈಗ ಪಿಸ್ತೂಲು ಇದೆ. ಇದನ್ನು ನೋಡಿದರೆ ಯಾರಿಗೆ ತಾನೇ ಸಂದೇಹವಾಗುವುದಿಲ್ಲ ? ಈಗ ತುಸುಹೊತ್ತಿನ ಮುಂಚೆ ಮನೆಯ ಹಿತ್ತಿಲಕಡೆಗೆ ಪಿಸ್ತೂಲು ಹೊಡೆದರು. ಒಬ್ಬನು ಇದೇ ಮನೆಯೊಳಗೆ ಹೋಗುವುದನ್ನು ಕಣ್ಣಾರೆ ಕಂಡೆ. ಇಂಥ ಪರಿಸ್ಥಿತಿಯಲ್ಲಿ ಸಂಶಯವು ಹುಟ್ಟದಿರುವುದೆ ? ಕೈಯಲ್ಲಿ ಪಿಸ್ತೂಲು ಇರಲು ಇನ್ನು ನೂರಾರು ಕಾರಣಗಳಿರಬಹುದು. ಕಾರಣವನ್ನು ತಿಳಿಯದೆಯೇ ನಾನು ವೃಥಾ ಸಂಶಯಪಡುತ್ತಿರುವೆ. ಮತ್ತೆ ಯಾರಾದರೂ ಸಣ್ಣವರಾಗಿದ್ದರೆ

ದುಡ್ಡಿನ ಆಶೆಗೆ ಮಾಡಿಸಿರೆಂದು ಎಣಿಸುತ್ತಿದ್ದೆ. ಹಿರಣ್ಯಕುಮಾರರು ದುಡ್ಡಿನ ಆಶೆಗೆ ಹೀಗೆ ಮಾಡುವರೆ? ಇಲ್ಲ, ಸಾಧ್ಯವಿಲ್ಲ. ಮತ್ತೆ ಇದಕ್ಕೆ ಬೇರೆ ಯಾವ ಕಾರಣವಿರಬಹುದು? ಅಕಾರಣವಾಗಿ ಅವರು ನನ್ನನ್ನೇಕೆ ಹೊಡೆಯುವರು? ನಾನು ವೃಥಾ ಇಂಥ ಸಂದೇಹಗಳಿಗೆ ಎಡೆಗೊಟ್ಟು ಹೃದಯವನ್ನು ಕಲಂಕಿತ ಮಾಡಲಾರೆ ಕಾರಣವಿಲ್ಲದೆ ಇದೆಲ್ಲ ಆಗಲು ಸಾಧ್ಯವಿಲ್ಲ.

ಪ್ರಮೋದನ ಮನಸ್ಸಿನೊಳಗೆ ಒಮ್ಮೆ ಸಂಶಯ, ಮತ್ತೊಮ್ಮೆ ವಿಶ್ವಾಸ ತಲೆಯೆತ್ತತೊಡಗಿದುವು. ಅವನಿಗೆ ಏನೂ ತೋಚಲಿಲ್ಲ. ತನ್ನ ಮನಸ್ಸಿನ ಉದ್ವೇಗವನ್ನು ಕಡಿಮೆಮಾಡಿಕೊಳ್ಳಲು, ಯಾಮಿನಿಯೊಡನೆ ಮಾತನಾಡಲು ಬಯಸಿ ಅತ್ತಕಡೆಗೆ ಭರದಿಂದ ಸಾಗಿದ. ದಾರಿಯೊಳಗೂ ಆಲೋಚನೆ ನಡೆದೇ ಇತ್ತು.—ನನಗಾರು ಅಂಥ ಗುಪ್ತಶತ್ರುಗಳಿದಾರೆ? ಇಂಥ ರಾತ್ರಿಯಲ್ಲಿ ನನ್ನನ್ನು ಹೊಡೆಯಲು ಪಿಸ್ತೂಲು ಹಿಡಿದು ಬೆನ್ನುಹತ್ತುವುದೆ?—

"ಎಲಾ, ಇದೇನು ಪ್ರಮೋದ, ನೀನು ಇಂದು ಇಷ್ಟೇಕೆ ಹೊತ್ತು ಮಾಡಿಬಂದೆ? ಒಂಬತ್ತಕ್ಕೆ ಬರುವೆನೆಂದು ಹೇಳಿದ್ದೆ. ಎರಡು ತಾಸು ತಡ ಮಾಡಿಬಿಟ್ಟೆ, ನೋಡು, ಹನ್ನೊಂದು ಹೊಡೆದಿದೆ." ಯಾಮಿನಿ ಅವನನ್ನು ಕಾಣುತ್ತಲೇ ವ್ಯಗ್ರತೆಯಿಂದ ಕೇಳಿದ.

ಪ್ರಮೋದನು ಸಂಕ್ಷೇಪವಾಗಿ ಎಲ್ಲ ಕತೆಯನ್ನು ಹೇಳಿದ. ಯಾಮಿನಿ ಕೇಳಿ ಬಹಳ ಆಶ್ಚರ್ಯದಿಂದ ಹೇಳಿದ-"ಪ್ರಮೋದ, ಬಹಳ ಒಳಿತಾಯಿತು, ದೇವರಾಗಿಯೇ ಇಂದು ನಿನ್ನನ್ನು ಉಳಿಸಿದ."

ಯಾಮಿನಿ ಪರಿಸ್ಥಿತಿಯ ಲಾಭಕ್ಕೆ ಹೊಂಚುಹಾಕಿದ. ಕೂಡಲೇ ಅವನು ಇದನ್ನು ಅಪಾರ್ಥದಿಂದ ಹೇಳಲು ಮನಸ್ಸಿನೊಳಗೆ ಎಣಿಕೆಹಾಕ ಹತ್ತಿದ. ಒಂದೇ ಹೊಡೆತಕ್ಕೆ ಇಬ್ಬರು ಶತ್ರುಗಳನ್ನು ಸಂಹರಿಸಲು ಇದು ಒಳ್ಳೆಯ ಹೊತ್ತು ಎಂದು ಎಣಿಸಿದ.

ಪೂರ್ವಪರಿಚ್ಛೇದದಲ್ಲಿ ಬರೆದ ಘಟನೆಯನಂತರ ಯಾಮಿನಿ ಹಿರಣ್ಯಕುಮಾರರಮೇಲೆ ರಕ್ತಕಾರುತ್ತಿದ್ದ. ಹಿರಣ್ಯಕುಮಾರರೇ ಸಂನ್ಯಾಸಿಯ ಮುಂದೆ ಯಾಮಿನಿ ದೋಷಿಯೆಂದು ಮುಕ್ತಕಂಠದಿಂದ ಹೇಳಿದ್ದರು. ಹಿರಣ್ಯರೇ ಪ್ರಮೋದನ ಪಕ್ಷಗಟ್ಟಿದ್ದರು; ನೀರಜಾನ ವಿವಾಹವು ಯಾಮಿನಿಯಕೂಡ ಆಗುವುದನ್ನು ನಿಷೇಧಿಸಿದ್ದರು. ಸೇಡುತೀರಿಸಲು ಯಾಮಿನಿಗೆ ಈಗ ಹೊತ್ತು ಒದಗಿ ಬಂದಂತಾಯಿತು.

ಪ್ರಮೋದನ ಮಾತನ್ನು ಕೇಳುತ್ತಲೇ ಅವನು ಹಾರಿಬಿದ್ದು ಕೇಳಿದ—" " ಏನು ಪ್ರಮೋದ, ನೀನು ಹಿರಣ್ಯಕುಮಾರರ ಕೈಯೊಳಗೆ ಪಿಸ್ತೂಲನ್ನು ನೋಡಿದೆಯಾ ? ನಿಜವಾದ ಸಂಗತಿ ನನಗೀಗ ಹೊಳೆಯಿತು."

" ಏನು ? ನಿನ್ನ ಮಾತಿನ ಅರ್ಥವೇ ನನಗಾಗಲಿಲ್ಲ. ನನ್ನಂತೆಯೇ ನಿನಗೂ ಅವನ ಬಗ್ಗೆ ಸಂಶಯವಾಗುತ್ತಿದೆಯೋ ?" ಪ್ರಮೋದನು ವಿಸ್ಮಯದಿಂದ ಕೇಳಿದ.

" ಮುಂಚೆಕಡೆಯ ಬಾಗಿಲಿನಿಂದೋ,—ಅಥವಾ ಹಿತ್ತಿಲಕಡೆಯ ಬಾಗಿಲಿನಿಂದೋ—ಎಲ್ಲಿ ಹೋಗುವುದನ್ನು ನೋಡಿದೆ ?" ಯಾಮಿನಿ ಅವನ ಮಾತಿಗೆ ಉತ್ತರ ಕೊಡದೆಯೆ ಕೇಳಿದ.

ಪ್ರಮೋದ—" ಹಿತ್ತಿಲ ಬಾಗಿಲಿನಿಂದ."

ಯಾಮಿನಿ—" ಹಾಗಾದರೆ ಈ ಕೆಲಸ ಆ ಪಾಖಂಡಿಯದೇ ನಿಶ್ಚಯ."

ಪ್ರಮೋದ—" ಅವರು ನನ್ನನ್ನು ಹೊಡೆಯುವರೆ ?—ಛೆ, ಅವರು ಅಕಾರಣವಾಗಿ ನನ್ನನ್ನೇಕೆ ಕೊಲ್ಲುವರು ?"

ಯಾಮಿನಿ—" ಕಾರಣವೇತಕ್ಕೆ ಬೇಕು ?— ಈ ಮಹಾ ಪಾಪಕಾರ್ಯವು ಆ ನೀಚನದೇ."

ಪ್ರಮೋದನು ಗಡ-ಗಡನೆ ನಡುಗಿದ. " ಹಿರಣ್ಯರನ್ನು ಬೇಕಾದಷ್ಟು ಕೆಟ್ಟ ದೃಷ್ಟಿಯಿಂದ ನೋಡುತ್ತಿರಬಹುದು; ಆದರೆ ನಾನು ಅವರ ಮೇಲೆ ಸಂಶಯವಿಡಲಾರೆ. ಅವರಲ್ಲಿ ಅವಿಶ್ವಾಸವಿಡಲು ಕಾರಣವೂ ಇಲ್ಲ. ಇಲ್ಲ—ಇಲ್ಲ—ಹೀಗೆ ಅವರು ಮಾಡಲಾರರು. ಅಕಾರಣವಾಗಿಯೇ ಯಾರಾದರೂ ಹೀಗೇಕೆ ಮಾಡುವರು ?" ಎಂದು ನುಡಿದ ಪ್ರಮೋದ.

ಯಾಮಿನಿ—" ಅದೆಲ್ಲ ನಿನಗೆ ತಿಳಿಯದು ಪ್ರಮೋದ, ಅದಕ್ಕೆಂದೇ ನೀನು ಹೀಗೆ ಮಾತನಾಡುವುದು. ಹಿರಣ್ಯನಿಗೂ ಸನ್ಯಾಸಿಗೂ ಏನೋ ಸಂಬಂಧವಿರಬೇಕು. ಅವನು ಅವನ ಆತ್ಮೀಯ ಬಂಧು."

ಪ್ರಮೋದ—" ಇಲ್ಲ, ನನಗೆ ಅದೆಲ್ಲ ತಿಳಿಯದು."

ಯಾಮಿನಿ—" ನೀರಜಾಳನ್ನು ಕರೆದುಕೊಂಡು ಹೋಗಲು ಆ ದಿವಸ ಸಂನ್ಯಾಸಿ ಬಂದಿದ್ದಿಲ್ಲವೆ? ಆತನ ಕೂಡ ಹಿರಣ್ಯಕುಮಾರರೂ ಇದ್ದರು. ಅವರ ಮಾತಿನಿಂದಲೇ ನಾನು ತಿಳಿದುಕೊಂಡೆ, ಅವನು ನಿನ್ನನ್ನು ಕೀಳು ದೃಷ್ಟಿಯಿಂದ ಕಾಣುತ್ತಾನೆ."

“ ಸಂನ್ಯಾಸಿ ನೀರಜಾಳನ್ನು ಕರೆದುಕೊಂಡು ಹೋದನೆ ? ” ಪ್ರಮೋದನು ಸಿಟ್ಟುಸಿರೊಂದನ್ನು ಬಿಟ್ಟು ಕೇಳಿದ.

ಯಾಮಿನಿ—“ ಹೌದು ಪ್ರಮೋದ. ಇದನ್ನೇ ನಿನಗೆ ಹೇಳಲು ಕರೆಸಿಕೊಂಡಿದ್ದೆ. ”

ಪ್ರಮೋದ—“ ಮುಂದೆ ಹೇಳು, ಏನಾಯಿತು ? ”

ಯಾಮಿನಿ—“ ಮಾತು ಮಾತಾಡುತ್ತಿರುವಾಗ ನಿನ್ನ ಮಾತು ಹೊರಟಿತು. ಸಂನ್ಯಾಸಿ ನಿನ್ನ ಗುಣವನ್ನು ಬಹಳ ಹೊಗಳಿದ. ನಾನಾದರೂ ಪ್ರಮೋದನು ನೀರಜಾಳಿಗೆ ಯೋಗ್ಯ ವರನೆಂದು ಹೇಳಿದೆ. ನೀನು ಎಲ್ಲ ರೀತಿಯಿಂದಲೂ ನೀರಜಾಳಿಗೆ ಯೋಗ್ಯನಿರುವೆ. ಪ್ರಮೋದನ ಕೂಡ ನೀರಜಾನ ವಿವಾಹವಾಗುವುದೆಂದು ಹಿರಣ್ಮಯನು ತಿಳಿದುಕೊಂಡ. ಅವನು ಸಿಟ್ಟಿಗೆದ್ದು ಸಿಕ್ಕಾಪಟ್ಟೆ ಮಾತನಾಡಿದ. ಇದನ್ನು ಕೇಳಿ ನಾನಾದರೂ ಸಿಟ್ಟಿಗೆದ್ದೆ. ನನಗೂ ಹಿರಣ್ಮಯನಿಗೂ ಬಾಯಿಗೆ ಬಾಯಿ ಹತ್ತಿತು. ವಾದ-ವಿವಾದ ನಡೆಯಿತು. ಹಿರಣ್ಮಯಕುಮಾರನಿಗೆ ಸೋಲಾಗುವ ಹೊತ್ತು ಬಂದಿತು. ಅಲ್ಲಿಂದ ಎದ್ದು ಹೊರಟುಹೋದ. ಆ ಮೇಲೆ ಹಿರಣ್ಮಯ ನೀರಜಾನ ಕೂಡ ಮದುವೆಯಾಗಲಿಚ್ಛಿಸುತ್ತಾನೆಂದು ಸಂನ್ಯಾಸಿ ನನಗೆ ಹೇಳಿದ. ಆಗ ನನಗೆ ನಿಜವಾದ ಸಂಗತಿ ತಿಳಿಯಿತು. ಈಗ ನಿನ್ನ ಮಾತನ್ನು ಕೇಳಿ ನನಗೆ ಇನ್ನೂ ವಿಶ್ವಾಸವಾಯಿತು, ಈ ಕೆಲಸವು ಅವನದೇ, ಅನ್ಯಥಾ ಇದು ಮುಂದಿಯ ಕೆಲಸವಲ್ಲ. ನಿನಗಿಷ್ಟು ತಿಳಿಯುವುದಿಲ್ಲವೇ ? ನೀನೀಗ ಅವನ ಮಾರ್ಗದಲ್ಲಿಯ ಮುಳ್ಳು. ಆ ಮುಳ್ಳನ್ನು ಅವನು ಮುಂದೊಗೆಯ ಬೇಕೆನ್ನುತ್ತಾನೆ. ”

ಈ ಮಾತುಗಳನ್ನು ಕೇಳಿ ಪ್ರಮೋದನು ದಂಗುಬಡಿದಂತಾದ. ಈಗ ಅವನಿಗೆ ಎಲ್ಲ ಸಂಗತಿ ಸ್ಪಷ್ಟವಾಗಿ ತಿಳಿಯಿತು. ಕಾರಣವು ಗೊತ್ತಾಯಿತು. ಈಗ ಅವನ ದೃಷ್ಟಿಯಲ್ಲಿ ಹಿರಣ್ಮಯಬಾಬು ದೋಷಿಯಾದರು. ಕಾರಣವಿಲ್ಲದೆಯೇ ಒಬ್ಬರು ಇನ್ನೊಬ್ಬರಿಗೆ ದೋಷಿಯೆಂದು ಹೆಸರಿಡುವರೆ ? ಹಿರಣ್ಮಯರನ್ನು ದೋಷಿಯೆಂದು ತಿಳಿದು ಪ್ರಮೋದನು “ ನರಾಧಮ ! ನಾನು ನಿನಗೇನೂ ಅನಿಷ್ಟ ಮಾಡಿದ್ದಿಲ್ಲ, ಆದರೆ ನೀನು ನನಗೆ ಬಾಲ್ಯದಿಂದಲೂ ಕೈತೊಳೆದುಕೊಂಡು ಬೆನ್ನು ಹತ್ತಿರುವೆ. ” ಎಂದ.

ಈಗ ಯಾಮಿನಿಯ ಇಚ್ಛೆ ಈಡೇರುವ ಲಕ್ಷಣಗಳು ಕಂಡು ಬಂದುವು. “ ನನಗಂತೂ ತಲೆಕೆಟ್ಟು ಹೋಗಿದೆ. ಏನು ಮಾಡಿ ಆ ಚಂಡಾಲನನ್ನು ಬಗ್ಗು

ಬಡಿಯಬೇಕು, ನನಗೆ ಹೊಳೆಯದಾಗಿದೆ. ಅವನ ಮೇಲೆ ಕೊಲೆಯ ಆರೋಪವನ್ನು ಹೇರಿ ಖಟ್ಲೆ ನಡೆಸಬೇಕು. '' ಎಂದು ಹೇಳಿದ ಯಾಮಿನಿ.

ಪ್ರಮೋದನು ತಿರಸ್ಕಾರದ ನಗೆಯೊಂದನ್ನು ನಕ್ಕ. '' ಅವರ ಮೇಲೆ ಖಟ್ಲೆ ನಡೆಸಿದರೆ, ನನ್ನ ಮಾನ ಹೋಗುವುದು, ಇದು ನನ್ನಿಂದಾಗದು." ಎಂದು ನುಡಿದ.

ಹಿರಣ್ಯನಿಗೆ ದಂಡ ಮಾಡಿಸಬೇಕೆಂಬ ಅಭಿಪ್ರಾಯದಿಂದ ಯಾಮಿನಿ ಬಹಳ ಹೇಳಿದ; ಪ್ರಮೋದ ಒಪ್ಪಲಿಲ್ಲ. ಬಹಳ ಹೇಳಿದ ಮೇಲೆ ಪ್ರಮೋದನು—'' ಅವರ ವಿರುದ್ಧ ಏನೂ ಆಧಾರವಿಲ್ಲ. ಖಟ್ಲೆ ಮಾಡುವುದಾದರೆ ಹೇಗೆ ಮಾಡುವುದು ? ಅವರು ಕೈಯೊಳಗೆ ಪಿಸ್ತೂಲು ಹಿಡಿದುದನ್ನು ನೋಡಿದ್ದೇನೆಂಬುದೊಂದೇ ಅಲ್ಲವೆ? ಅದನ್ನು ಅವರು ಅಲ್ಲಗಳೆಯಬಹುದು." ಎಂದು ಹೇಳಿದ.

ಯಾಮಿನಿ—'' ಆಧಾರವಿರದಿದ್ದರೆ ಖಟ್ಲೆಯನ್ನು ಕಿತ್ತಿ ಹಾಕುವರು, ಆದರೆ ಕೊಲೆಯ ಹೆಸರಿನಿಂದ ಖಟ್ಲೆ ನಡೆಸಿದರೆ ಅವನಿಗೆ ಸಾಕಷ್ಟು ಅಪಮಾನವಾಗುವುದಲ್ಲ. ''

ಪ್ರಮೋದ—'' ಬೇಡ, ಮಂದಿಯ ಮಾನವನ್ನು ಕಳೆಯಲು ನನಗೇನೂ ಇಚ್ಛೆಯಿಲ್ಲ. ಇದರಿಂದ ನಾನೇ ಮಾನ ಕಳೆದುಕೊಳ್ಳುವೆ. ಹಿರಣ್ಯಕುಮಾರರ ಗುಣ ಗೊತ್ತಾಯಿತು, ಇಷ್ಟೇ ಸಾಕು. ''

ಯಾಮಿನಿ ಎಲ್ಲ ರೀತಿಯಿಂದಲೂ ಪ್ರಯತ್ನ ಮಾಡಿ ನೋಡಿದ, ಆದರೆ ನಾಟಲಿಲ್ಲ. ಆಗ ಅವನು ಬೇರೆ ಹಂಚಿಕೆ ಹುಡುಕಿದ. ಮಾತು ಬದಲಿಸಿದ. ನೀರಜಾನ ಸುದ್ದಿಯೆಂದರೆ ಪ್ರಮೋದನು ಸಂತೋಷದಿಂದ ಮಾತನಾಡುವನೆಂದು ಯಾಮಿನಿ ಭಾವಿಸಿಕೊಂಡ. '' ಹೂಂ, ಸಹೋದರ! ಇಷ್ಟು ಹೊತ್ತಾದರೂ ನಿನಗೆ ಏನೂ ಹೇಳಲಿಲ್ಲ. ಸಂನ್ಯಾಸಿ ನೀರಜಾನನ್ನು ನನಗೆಯೇ ಕೊಡಲು ನಿಂತಕಾಲಮೇಲೆ ಸಿದ್ಧನಿದ್ದ. ಆದರೆ ನಾನು ನೀರಜಾನಿಗೆ ಯೋಗ್ಯವರನಲ್ಲವೆಂದೂ, ನೀನೇ ಅವನಿಗೆ ಯೋಗ್ಯವರ ಎಂದೂ ಬಹಳ ಹೇಳಿದೆ. ಆದರೂ ಅವನು ಪ್ರತ್ಯುಪಕಾರ ಮಾಡಬೇಕೆಂಬ ಅಭಿಪ್ರಾಯದಿಂದ ನನ್ನನ್ನೇ ಅಳಿಯನನ್ನು ಮಾಡಿಕೊಳ್ಳಲು ನಿಶ್ಚಯ ಮಾಡಿದ್ದಾನೆ. '' ಎಂದು ಹೇಳಿದ.

ಇದನ್ನು ಕೇಳಿ ಪ್ರಮೋದನ ಹೊಟ್ಟೆಯೊಳಗೆ ಕಸಿವಿಸಿ ಯಾಯಿತು. ಈ ಮಾತು ಅವನ ಹೃದಯವನ್ನು ಬರ್ಚಿಯಿಂದ ಇರಿಯಹತ್ತಿತು. ಮುಳ್ಳಿನಂತೆ ಅಳುಕಹತ್ತಿತು. ಅವನ ಚೇತರಿಸಿಕೊಳ್ಳಲು ಪ್ರಯತ್ನ ಪಟ್ಟು ಆಲೋಚನೆ ಮಾಡಹತ್ತಿದ—ಹೀಗೆ ವಿಚಾರ ಮಾಡುವುದು ಅನ್ಯಾಯವೆಂದು ಬಗೆದು ಅದನ್ನು ಹೃದಯದಿಂದ ಕಿತ್ತೊಗೆಯಲು ಅವನು ದೃಢಸಂಕಲ್ಪ ಮಾಡಿದ. ಯಾಮಿನಿ ನೀರಜಾನ ಕೈ ಹಿಡಿಯುವುದು ಸೌಭಾಗ್ಯವೇ ಸರಿ. ನಾನು ಪವಿತ್ರ ಪ್ರೇಮದಿಂದ ಅವಳನ್ನು ಪ್ರೀತಿಸುತ್ತಿದ್ದೆ, ಇಷ್ಟರಿಂದಲೇ ಸಂತುಷ್ಟನಾಗಬೇಕು, ಮುಂತಾಗಿ ಅವನು ಆಲೋಚಿಸಹತ್ತಿದ.

ಇದೇ ಪ್ರಕಾರ ಅವನು ತನ್ನ ಚಿತ್ತಕ್ಕೆ ಧೈರ್ಯ ಕೊಡಹತ್ತಿದ, “ ನಾನು ನನ್ನ ಸ್ವಾರ್ಥ ಇಚ್ಛೆಗಳೆಲ್ಲವನ್ನೂ ಬಲಿಕೊಡುವೆ. ನೀರಜಾನ ಸುಖದಲ್ಲಿ ಭಾಗಿಯಾಗುವೆ. ಅವಳ ಸುಖವೇ ನನ್ನ ಸುಖವೆಂದೆಣಿಸುವೆ.” ಎಂದು ಅವನು ನಿಶ್ಚಯ ಮಾಡಿಕೊಂಡ. ಈ ವಿಚಾರಗಳು ತಲೆದೋರಿದ ಮೇಲೆ ಪ್ರಮೋದನ ಹೃದಯವು ಶಾಂತವಾಯಿತು. ಆದರೂ ಏಕೋ ಖಿನ್ನನಾದ. ಎಷ್ಟೋ ಪ್ರಯತ್ನ ಮಾಡಿದ. ಆದರೂ ಅವನು ಮೊದಲಿನಂತೆ ಪ್ರಸನ್ನತಾ ಪೂರ್ವಕವಾಗಿ ಮಾತನಾಡಲು ಸಮರ್ಥನಾಗಲಿಲ್ಲ. ಒಂದು ಕಡೆಗೆ ಮನಸ್ಸನ್ನು ಸಂತಯಿಸುವ ಹಂಬಲ, ಇನ್ನೊಂದು ಕಡೆಗೆ ಮನಸ್ಸಿನ ಪ್ರಬಲ ತರಂಗಗಳು, ಎರಡೂ ಅತಿವೇಗದಿಂದ ಹೃದಯದೊಳಗುದಯಿಸಹತ್ತಿದುವು. ಈಗ ಪ್ರಮೋದನ ನೇತ್ರಗಳಲ್ಲಿ ಗಂಭೀರ ಚಿಂತೆಯ ಭಾವವೂ, ಅಧರಗಳ ಮೇಲೆ ಅನಿಚ್ಛೆಯ ನಗೆಯ ನಿರುಜ್ವಲ ಆಭಾಸವೂ ಕಾಣಿಸಹತ್ತಿದುವು. ಆದರೂ ಪ್ರಮೋದನು ಬಲವಂತವಾಗಿ ಹೃದಯದ ಭಾವಗಳನ್ನು ಮುಚ್ಚಿಡಲು ಯತ್ನಿಸುತ್ತಿದ್ದ; ಆದರೆ ಅನಿಚ್ಛೆಯಿಂದ ನಗುತ್ತಿದ್ದುದರಿಂದ ಅವನ ಮನಸ್ಸಿನ ಭಾವವು ಇಮ್ಮಡಿಯಾಗಿ ವೇಗದಿಂದ ಹೊರಹೊಮ್ಮುತ್ತಿತ್ತು, ಪ್ರಮೋದನು ನಿರುತ್ತರನಾದ. ಅವನ್ನು ನೋಡಿ ಯಾಮಿನಿಯೂ ಸುಮ್ಮನಾದ.

ಪ್ರಮೋದನಿಗೆ ಅಲ್ಲಿ ಹೆಚ್ಚುಹೊತ್ತು ನಿಲ್ಲುವುದಾಗಲಿಲ್ಲ. ಅವನಿಗೆ ಎಲ್ಲವೂ ಶೂನ್ಯವಾಗಿ ಕಾಣಿಸಹತ್ತಿತು. ಪೃಥ್ವಿ ಶೂನ್ಯ! ಆಕಾಶವೂ ಶೂನ್ಯ! ಪೃಥ್ವಿಯ ಮೇಲೆ ಮನುಷ್ಯರೇ ಅವನಿಗೆ ಕಾಣಿಸುತ್ತಿದ್ದಿಲ್ಲ. ಸಮಸ್ತ ದಿಕ್ಕುಗಳು ಶೂನ್ಯವಾಗಿ, ಅಂಧಕಾರ-ಮಯವಾಗಿ ಕಾಣಿಸಹತ್ತಿದುವು. ಆಕಾಶ

ದೊಳಗೆ ಚಂದ್ರನಿಲ್ಲ, ನಕ್ಷತ್ರಗಳಿಲ್ಲ, ಮೇಘಮಾಲೆಗಳಿಲ್ಲ, ಎಲ್ಲಿಯೂ ಏನೂ ಕಾಣಿಸುತ್ತಿದ್ದಿಲ್ಲ. ಎಲ್ಲವೂ ಶೂನ್ಯವಾಗಿದ್ದಿತು. ಪ್ರಮೋದನು ಕೆಳಗೆ, ಮೇಲೆ, ಎಡ-ಬಲಕ್ಕೆ ಎಲ್ಲ ಕಡೆಗಡೆ ಹುಡುಕಿ ನೋಡಿದ. ಎಲ್ಲ ಸ್ಥಾನಗಳೂ ಅವನಿಗೆ ಶೂನ್ಯ, ಅಂಧಕಾರಮಯ ಕಾಣಿಸಹತ್ತಿದುವು.

* * * * *

ಮೂರು ನಾಲ್ಕು ದಿನಗಳಾಗಿರಬಹುದು, ಕನಕಲತೆಯ ಒಂದು ಪತ್ರ ಬಂದಿತು. ಸುಶೀಲಾ ದೊಡ್ಡಮ್ಮ ಬೇನೆಯಿಂದ ಇದ್ದಾಳೆಂದು ಬರೆದಿದ್ದಳು, ಕಾಗದವು ಕೈಸೇರುತ್ತಲೇ ಅಂದೇ ರಾತ್ರಿ ಪ್ರಮೋದ ಅಲಾಹಾಬಾದಕ್ಕೆ ಹೊರಟುಹೋದ. ಗಾಡಿಯೊಳಗೆ ಯಾಮಿನಿ ಕೂಡಿದ. ಸಂನ್ಯಾಸಿಯ ಬಳಿಗೆ ಕಾನಪುರಕ್ಕೆ ಹೋಗುತ್ತಿದ್ದೇನೆಂದು ಅವನು ಹೇಳಿದ.

ಅಲಾಹಾಬಾದವನ್ನು ತಲ್ಪಿದರು. ಅಲ್ಲಿ ಒಂದೆರಡು ದಿನ ಇರಲು ಪ್ರಮೋದನು ಯಾಮಿನಿಗೆ ಆಗ್ರಹ ಮಾಡಿದ. ಯಾಮಿನಿಗೂ ಏನೂ ಅಡ್ಡಿಯಿದ್ದಿಲ್ಲ. ಅವನು ಪ್ರಮೋದನ ಆಗ್ರಹದ ಮೇರೆಗೆ ಒಂದೆರಡು ದಿವಸ ಅಲಾಹಾಬಾದದಲ್ಲಿರಲು ನಿಶ್ಚಯ ಮಾಡಿಕೊಂಡ.

## ಭಯಂಕರ ದೃಶ್ಯ

ಸುಶೀಲೆ ಬೇನೆ ಬೀಳುವುದಕ್ಕಿಂತ ಮೊದಲು ನಡೆದ ಒಂದು ಸಂಗತಿಯನ್ನು ಇಲ್ಲಿ ಬರೆಯುವುದು ಅವಶ್ಯಕವೆನಿಸುತ್ತದೆ. ಕನಕಲತಾನ ಹನ್ನೆರಡು ದಿನದ ಶಿಕ್ಷೆ ಇನ್ನೂ ಮುಗಿದಿಲ್ಲ. ಕತ್ತಲೆಯ ರಾತ್ರಿ, ಮೋಡ ಮುಸುಕಿದೆ, ಒಂದೇ ಸವನೆ ಮಳೆ ಸುರಿಯುತ್ತಿದೆ. ಇಷ್ಟು ಹೊತ್ತಿನಲ್ಲಿ ಒಂದು ಕೋಣೆಯೊಳಗೆ ಬಾಲಿಕಾ ಕನಕಲತಾ ಒಬ್ಬಳೇ ಮಲಗಿಕೊಂಡಿದ್ದಾಳೆ. ಕೋಣೆಯೊಳಗೆ ದೀಪವಿಲ್ಲ. ಆಗಾಗ ಗುಡುಗು–ಸಿಡಿಲಿನ ಅಬ್ಬರವು ಕೇಳಿಸುತ್ತದೆ. ಸಿಡಿಲಿನ ಕಡಕಡಾಟವು ಹೆಚ್ಚಿತು. ಕೂಡಲೇ ಹುಡುಗೆ ಬೆಚ್ಚಿಬಿದ್ದಳು! ಕತ್ತಲೆಯಲ್ಲಿ ಅವಳು ಹೆದರಿ ಎದ್ದು ಕುಳಿತುಕೊಂಡಳು. ಬೆಳಕು ಬೀಳಲಿ, ಹೊರಗಿನ ದೃಶ್ಯವು ಕಾಣಿಸಲಿ ಎಂಬ ಅಭಿಪ್ರಾಯದಿಂದ ಬಾಗಿಲನ್ನು ತೆರೆದಳು. ಒಮ್ಮೆಲೇ ಅವಳ ಕಿವಿಗೆ ಸುಮಧುರ ಸಂಗೀತಧ್ವನಿಯೊಂದು ಬಿದ್ದಿತು.

ಇದೇ ಹೊತ್ತಿಗೆ ಸಿಡಿಲೊಂದು ಗರ್ಜಿಸಿತು, ಮಿಂಚು ಮಿಂಚಿ ಮಾಯವಾಯಿತು. ಅದರ ಕೂಡ ಹಾಡೂ ನಿಂತಿತು. ಸುಶೀಲಾ ಕನಕನ ಕೋಣೆಗೆ

ಬಂದಳು. ಮಳೆ-ಗಾಳಿ, ಗುಡುಗು-ಸಿಡಿಲು ಇರುವಂಥ ಇಂಥ ವೇಳೆಯಲ್ಲಿ ಕನಕ ಒಬ್ಬಳೇ ಇದ್ದಳು. ಅದನ್ನು ಕಂಡು ಅವಳು ನಡುಗಿದಳು, ಮನಸ್ಸಿನೊಳಗೆಯೇ ಹೆದರಿದಳು. ಆದರೆ ಮನಸ್ಸಿಗೆ ಹೇಳಿಕೊಳ್ಳುತ್ತಿದ್ದಳು, ಕನಕನ ಈ ಗುಣಗಳಿಂದಲ್ಲೇ ಈ ಕಷ್ಟವಾಗಿದೆ—ಏನು ಮಾಡಬೇಕು? ಸಿಡಿಲಿನ ಅಬ್ಬರಕ್ಕೆ ಮನೆ ಕಂಪಿಸಿತು; ಸುಶೀಲೆಯ ಕಣ್ಣಲ್ಲಿ ದೀಪ ಹಚ್ಚಿದಂತಾಯಿತು. ಕೂಡಲೆ ಹತ್ತಿರವಿದ್ದ ಮರವೊಂದು ಉರಿಯುತ್ತಿರುವದು ಕಂಡಿತು. ಆಗ ಸುಶೀಲಾನ ಮನಸ್ಸಿನ ಭಾವವು ಬದಲಾಯಿತು. ಈ ಬೆಂಕಿ ಕನಕನ ಕೋಣೆಗೂ ಹತ್ತಿದರೆ ಹೇಗೆ, ಎಂಬ ವಿಚಾರವು ಸುಶೀಲೆಗೆ ಹೊಳೆಯಿತು. ಅದರಿಂದ ಅವಳು ವ್ಯಾಕುಲಳಾಗಿ ಆ ಕಡೆಗೆಯೇ ಓಡಿದಳು. ಈ ಕಾಂಡವು ಅವಳನ್ನೂ ಸುತ್ತುವರಿಯುವುದೆಂದು ಗಾಬರಿಯಾದಳು. ಅದರಿಂದ ಕನಕ ಕಾಲನ ತುತ್ತಿಗೆ ಬಲಿಯಾಗುವಳು. ಎಂದು ಯೋಚಿಸುತ್ತ ಅವಳು ಆಗಸದತ್ತ ಕತ್ತೆತ್ತಿ ನೋಡಿದಳು. ಆ ಸಿಡಿಲಿನ ಮಧ್ಯದಲ್ಲಿ ಕನಕನ ತಾಯಿ ಸುಶೀಲಾ ನಿಂತುಕೊಂಡು—“ನೀನೇ ಇಂದು ನನ್ನ ಮಗಳು ಕನಕನನ್ನು ಕೊಂದೆ, ನಿನ್ನ ಕಟಕಟಿಗೇ ಅವಳ ಜೀವನವು ಮಣ್ಣುಗೂಡಿತು.” ಎನ್ನುತ್ತಿರುವಂತೆ ಭಾಸವಾಯಿತು.”

ಸುಶೀಲಾ ಅತ್ತ ಹೊರಳಿದಳು “ಕನಕ! ಕನಕ!” ಎಂದು ಒದರುತ್ತ ಮನೆಯೊಳಗೆ ಬಂದು ನೋಡಿದಳು. ಕನಕ ಪಲ್ಲಂಗದ ಮೇಲೆ ಕುಳಿತುಕೊಂಡಿದ್ದಾಳೆ. ಅವಳು ಜೀವಂತ ಇದ್ದಾಳೆ. ಅವಳನ್ನು ನೋಡಿ ಸುಶೀಲಾನ ಜೀವದೊಳಗೆ ಜೀವ ಬಂದಿತು. ಸುಶೀಲಾ ಮುಂದೆ ಬಂದು ಹುಡುಗೆಯ ಮುಖಕ್ಕೆ ಮುದ್ದಿಟ್ಟಳು. ಇದೇ ಹೊತ್ತಿಗೆ ಮತ್ತೆ ಸಂಗೀತ ಧ್ವನಿ ಅವಳ ಕಿವಿಗೆ ಬಿದ್ದಿತು.

ಹಾಡನಾಲಿಸಲು ಸುಶೀಲಾ ಕಿವಿಗಳನ್ನೊಡ್ಡಿದಳು. ಆದರೆ ಕೂಡಲೆ ಹಾಡು ನಿಂತಿತು. ಹಾಡುವವರನ್ನು ನೋಡಬೇಕೆಂದು ಅವಳು ತೆರೆದ ಬಾಗಿಲಿನ ಕಡೆಗೆ ನೋಡಿದಳು. ಯಾರ ಸುಳಿವೂ ಇದ್ದಿಲ್ಲ. ಆ ಧ್ವನಿ ಹತ್ತಿರದಲ್ಲಿಂದಲೇ ಬರುತ್ತಿದೆಯೆಂದು ಮನವರಿಕೆಯಾಗುತ್ತಿತ್ತು. ತುಸು ಹೊತ್ತಿನ ಮೇಲೆ ಮತ್ತೆ ಯಾರೋ ಹಾಡಿದರು—

ಹಾಡನ್ನು ಕೇಳಿ ಸುಶೀಲಾನ ತಲೆ ತಿರುಗಹತ್ತಿತು. ಎಷ್ಟೋ ವಿಷಯಗಳು ಅವಳ ತಲೆಯೊಳಗೆ ಸುಳಿಯಹತ್ತಿದುವು. ಆ ಬಾಲ್ಯಕಾಲದ ಜೀವನ,

ಸುಖ, ದುಃಖ ಎಲ್ಲವೂ ಆಗ ಅವಳಿಗೆ ನೆನಪಾದುವು. ಸುಶೀಲಾ ಆಶ್ಚರ್ಯಾನ್ವಿತಳಾಗಿ ಹಾಡನ್ನು ಕೇಳಬೇಕೆಂಬ ಅಭಿಪ್ರಾಯದಿಂದ ನಿರೀಕ್ಷಿಸ ಹತ್ತಿದಳು, ಹಾಡು ಮತ್ತೆ ಕೇಳಿಸಲಿಲ್ಲ, ಆದರೆ ಮುಂದೆ ಯಾರೋ ಬರುತ್ತಿರುವುದು ಮಾತ್ರ ಕಾಣಿಸಿತು. ಮೆಲ್ಲ-ಮೆಲ್ಲಗೆ ಅವನು ಹತ್ತಿರವೇ ಬಂದ. ಒಮ್ಮೆಲೇ ಮತ್ತೆ ಕೋಲ್ಮಿಂಚೊಂದು ಮಿಂಚಿ ಮಾಯವಾಯಿತು. ಆ ಬೆಳಕಿನಲ್ಲಿ ಆ ಮನುಷ್ಯನು ಸುಶೀಲಾನನ್ನು ನೋಡಿದ. ಸುಶೀಲಾನೂ ಅವನನ್ನು ನೋಡಿದಳು. ಚಕಿತಳಾಗಿ ಅವಳು ಅವನ ಕಡೆಗೆಯೇ ನೋಡುತ್ತ ನಿಂತಳು. ಒಬ್ಬರನ್ನೊಬ್ಬರು ನೋಡಿದರು. ನೋಟವು ಒಂದಾಗುತ್ತಲೇ ಸುಶೀಲಾ ಮೂರ್ಛಿತಳಾಗಿ, ಬಿರುಗಾಳಿಯ ಏಟಿಗೆ ಸಿಕ್ಕು ಬೀಳುವ ಮರದಂತೆ ಭೂಮಿಯ ಮೇಲೆ ಬಿದ್ದಳು !

## ಕನಕಲತಾ ನಿರ್ದೋಷಿಯಾದಳು

ಆ ಮೂರ್ಛೆಯ ನಂತರ ಸುಶೀಲಾ ಜ್ವರದಿಂದ ಪೀಡಿತಳಾದಳು. ಹುಟ್ಟಿದಾಗಿನಿಂದ ಒಂದೆ ಸವನೆ ಕಷ್ಟದಿಂದಲೇ ಕಾಲ ಕಳೆದಿದ್ದಳು. ಆದರಿಂದ ಅವಳ ಮೈಯೊಳಗೆ ಏನೂ ಇದ್ದಿಲ್ಲ. ದೇಹವು ಕಂದಿ ಕುಂದಿತ್ತು. ಯಾವಾಗಲೂ ಬೇನೆಗೆ ತುತ್ತಾಗಿರುತ್ತಿದ್ದಳು. ತಾನು ಸತ್ತ ಮೇಲೆ ಪ್ರಮೋದ, ಕನಕರನ್ನು ನೋಡುವವರಾರು, ಅವರು ಪರದೇಶಿಯಾಗುವರು, ಎಂದುಕೊಂಡು ತನ್ನ ದೇಹವನ್ನು ಜತನದಿಂದ ಇಟ್ಟುಕೊಳ್ಳುತ್ತಿದ್ದಳು. ಆದರೆ ಈ ದೇಹದ ಮೇಲೆ ಅವಳ ಪ್ರಭುತ್ವವು ಉಳಿಯಲಿಲ್ಲ. ಈ ಸಾರೆ ಅವಳ ಬೇನೆ ಬಲಿಯಿತು.

ಕನಕ ಅನ್ನ, ನೀರು, ನಿದ್ದೆಗಳನ್ನು ತೊರೆದಳು. ಹಗಲಿರುಳು ಸುಶೀಲಾನ ಸೇವೆಯಲ್ಲಿಯೇ ಇರುತ್ತಿದ್ದಳು. ಕನಕನ ಸೇವಾ-ಶುಶ್ರೂಷೆಯಿಂದ ಸುಶೀಲಾನ ಬೇನೆ ಬಹುಮಟ್ಟಿಗೆ ಕಡಿಮೆಯಾಯಿತು. ಆದರೆ ಮಾನಸಿಕ ಕಷ್ಟವು ಎಂದಿನಂತೆ ಇದ್ದಿತು. ಅವಳ ಸೇವೆಯನ್ನು ನೋಡಿ ಸುಶೀಲಾ ಬೆರಗಾದಳು, ಅವಳಿಗೆ ಆಶ್ಚರ್ಯವೆನಿಸಿತು. ಕನಕ ಕಳವು ಮಾಡುತ್ತಾಳೆ, ಅವಳು ಮಿಥ್ಯಾವಾದಿ, ದೇವರ ಮೇಲೆ ಭಕ್ತಿ ಇಲ್ಲ, ಆದರೂ ಅವಳು ದೇವಿಯಂತೆ ಸೇವೆ ಮಾಡುತ್ತಾಳೆ! ಇಷ್ಟು ಪ್ರೇಮ, ಇಷ್ಟು ಸ್ವಾರ್ಥತ್ಯಾಗ, ಇದೇನ

ಸಾಮಾನ್ಯವೆ? ಇವು ಮನುಷ್ಯೋಪರಿಗುಣಗಳು! ಮುಂತಾಗಿ ಸುಶೀಲಾ ವಿಚಾರ ಮಾಡಹತ್ತಿದಳು. ಹೀಗೆ ವಿಚಾರ ಮಾಡುತ್ತ ಸುಶೀಲಾನ ದೃಷ್ಟಿ ವಿಷಾದಮಯ ಸುವರ್ಣ ಪ್ರತಿಮೆಯಂತಿದ್ದ ಕನಕನ ಕಡೆಗೆ ಬೀಳುತ್ತಲೇ ಅವಳು ಮುಗ್ಧಳಾಗುತ್ತಿದ್ದಳು. ಎವೆಯಿಕ್ಕದೆಯೇ ಅವಳನ್ನು ನೋಡುತ್ತಿದ್ದಳು. ಅವಳ ಸರಳ ವಿಷಣ್ಣಮುಖವನ್ನು ಬಿಟ್ಟು ಅವಳ ಕಣ್ಣುಗಳು ವಿಮುಖವಾಗುತ್ತಿದ್ದಿಲ್ಲ. ಅವಳು ತನ್ನ ಮನಸ್ಸಿನೊಳಗೆಯೇ ವಿಚಾರ ಮಾಡುತ್ತಿದ್ದಳು— "ಈ ದೇವೀ ಮೂರ್ತಿಯನ್ನು ನೋಡಿ, ಇವಳಲ್ಲಿ ಅವಗುಣಗಳಿವೆಯೆಂದು ಯಾರು ಹೇಳಬಹುದು? ಒಂದು ವೇಳೆ ಇವಳಲ್ಲಿ ಕುಸುವಾದರೂ ದೋಷ ವಿದ್ದರೆ, ಸೃಷ್ಟಿಯ ಯಾವ ವಸ್ತುವಿನಲ್ಲಿ ದೋಷವಿಲ್ಲ? ಜಗತ್ತಿನ ಮೇಲೆ ಯಾರನ್ನು ನಂಬಲು ಸಾಧ್ಯವಿದೆ? ಹೀಗೆ ವಿಚಾರ ಮಾಡುತ್ತಿರಲು ಅವಳ ಕಣ್ಣುಗಳಿಂದ ಎರಡು ಹನಿ ನೀರು ಬಿದ್ದವು. ಪಾಪ ಕನಕ, ಅವಳಿಗೇನು ಗೊತ್ತು ನಿಜವಾದ ಸಂಗತಿ? ವ್ಯಥೆಯಿಂದ ಸುಶೀಲಾ ಅಳುತ್ತಿದ್ದಾಳೆಂದು ಅವಳ ಕಲ್ಪನೆ. ಅವಳೂ ವ್ಯಾಕುಲಳಾದಳು. ಆದರೆ ಅವಳ ಕಷ್ಟವನ್ನು ನಿವಾರಣೆ ಮಾಡುವ ಬಗೆ ಹೇಗೆ ಎಂಬುದನ್ನು ಅವಳು ಅರಿಯಳು.

ಇದೇಪ್ರಕಾರ ದಿನದಮೇಲೆ ದಿನಗಳುರುಳಹತ್ತಿದುವು. ಪ್ರಮೋದನಿಗೆ ಕನಕಲತಾ ದೊಡ್ಡಮ್ಮ ಬೇನೆಬಿದ್ದ ಸುದ್ದಿಯನ್ನು ಪತ್ರದ ಮುಖಾಂತರ ತಿಳಿಸಿದಳು. ಅದಕ್ಕಾಗಿಯೇ ಪ್ರಮೋದ ಯಾಮಿನಿಯಕೂಡ ಊರಿಗೆಬಂದ.

ಮನೆಯನ್ನು ಸೇರುತ್ತಲೇ ಪ್ರಮೋದನು ಮೊದಲು ಸುಶೀಲಾನ ಬಳಿಗೆ ಹೋದ. ಅವನನ್ನು ನೋಡಿ ಸುಶೀಲಾ ಆನಂದಸಾಗರದಲ್ಲಿ ತೇಲಾಡಹತ್ತಿದಳು.—"ಮಗೂ, ನೀನುಬಂದೆ, ಸಂತೋಷವಾಯಿತು. ಸಾಯುವದಕ್ಕಿಂತ ಮೊದಲು ನಿನ್ನಕೂಡ ಕೆಲವು ಮಾತನಾಡುವುದಿದೆ." ಸುಶೀಲಾ ಪ್ರಮೋದನಿಗೆ ಹೇಳಿದಳು.

ಕನಕ ಈಗ ಅಲ್ಲಿ ಇದ್ದಿಲ್ಲ. ಯಾವುದೋ ಕೆಲಸಕ್ಕೆ ಅವಳು ಇನ್ನೊಂದು ಕೋಣೆಗೆ ಹೋಗಿದ್ದಳು.

ಸುಶೀಲಾನ ಮಾತುಕೇಳಿ ಪ್ರಮೋದನ ಕಣ್ಣುಗಳಲ್ಲಿ ನೀರೂರಿತು. —"ದೊಡ್ಡಮ್ಮ, ಇಂಥ ಮಾತುಗಳನ್ನೇಕೆ ಆಡುತ್ತಿ? ಅನಿಷ್ಟವನ್ನು ಆಡಬಾರದು." ಎಂದ.

ಸುಶೀಲಾ—" ಇಲ್ಲ ಮಗು, ಈ ಸಾರಿ ನಾನು ಉಳಿಯುವುದಿಲ್ಲ. ನನಗೆ ಆಯುಷ್ಯ ತುಂಬಿಬಂದಿದೆ. ನನ್ನನ್ನು ಅಲ್ಲಿ ಎಲ್ಲರೂ ಕೈಮಾಡಿ ಕರೆಯುತ್ತಿದ್ದಾರೆ. ಆ ದಿವಸ ರಾತ್ರಿ ಅಕ್ಕನನ್ನು ನೋಡಿದ್ದೆ. ಅನಂತರ ಸ್ಪಷ್ಟರೂಪದಿಂದ........"

ಇದನ್ನು ಹೇಳುತ್ತ ಹೇಳುತ್ತ ಅವಳ ವಾಕ್‌ಶಕ್ತಿ ಕುಗ್ಗಿತು ಆ ದಿವಸ ರಾತ್ರಿ ನಡೆದ ಘಟನೆ ನೆನಪಿಗೆ ಬರುತ್ತಲೇ ಸುಶೀಲಾ ನಡುಗಿದಳು. ಅದೇ ಅಂಧಕಾರಮಯವಾದ ಘನಘೋರವೃಷ್ಟಿಯಲ್ಲಿ ಮಿಂಚು ಮಿಂಚಿದಂತಾಯಿತು. ಸುಶೀಲಾನಿಗೆ ಮತ್ತೆ ಅದೇ ಮನುಷ್ಯಮೂರ್ತಿ ಕಾಣಿಸಿತು. ಭಯದಿಂದ ಸುಶೀಲಾನ ದೇಹವು ಕಂಪಿಸಿಸಿತು. " ಇದೋ ನೋಡು, ನನಗೆ ಪ್ರತ್ಯಕ್ಷವಾಗಿ ಕಾಣಿಸುತ್ತಾರೆ ! " ಎಂದು ಮತ್ತೆ ಹೇಳಿದಳು. ಸುಶೀಲಾನ ಮೋರೆಯಮೇಲೆ ಆನಂದದ ರೇಖೆಗಳು ಮತ್ತೆ ಮೂಡಿದುವು. ಅವಳು ತನ್ನಷ್ಟಕ್ಕೆ ತಾನೇ ಅಸ್ಪಷ್ಟಸ್ವರದಲ್ಲಿ ಎನ್ನಹತ್ತಿದಳು—" ಇಷ್ಟು ದಿನ ಬಿಟ್ಟು, ಈಗ ನೆನಪು ಮಾಡಿದಿರಾ—ಇಂದು....ನೀವು ನನಗೆ ದರ್ಶನ ಕೊಟ್ಟಿರಿ.....ಇಂದು ಈಗ ನನ್ನ ಅಂತ್ಯಕಾಲವು ಕುಣಿಯುತ್ತ ಮುಂದೆ ನಿಂತಿದೆ...."

ಸುಶೀಲಾನ ಮಾತಿನಿಂದ ಪ್ರಮೋದನು ಭಯಭೀತನಾದ· " ನೀನು ಇದನ್ನೇನು ಆಡುತ್ತೀ ! " ಪ್ರಮೋದನು ಹೇಳಿದ.

ಸುಶೀಲಾನ ಸ್ವಪ್ನವು ಭಂಗವಾಯಿತು. ಕಣ್ದೆರೆದು ನೋಡಿದಳು ಅಲ್ಲಿ ಯಾವ ಮೂರ್ತಿಯೂ ಇಲ್ಲ, ಯಾರೂ ಇಲ್ಲ ! ಕೇವಲ ತಾನೇ ಪ್ರಲಾಪಿಸುತ್ತಿದ್ದಾಳೆ. " ಇದೇನು ? ನಾನು ಕನಸು ನೋಡುತ್ತಿದ್ದೇನೆಯೆ ? ಕಣ್ಣಿಗೆ ಬೀಳುವುದು ಸಾಧ್ಯವಿಲ್ಲ ಎಂದಮೇಲೆ ಕನಸಿನಲ್ಲಿ ಕಾಣಿಸಿಕೊಂಡುದು ಹೇಗೆ, ತಿಳಿಯಲೊಲ್ಲದು. ಏನೇ ಆಗಲಿ, ಪ್ರಮೋದ, ನಿನಗೊಂದು ಮಾತು ಹೇಳುವದಿದೆ. " ಎಂದಳು ಸುಶೀಲಾ.

" ಅದೇನು? ಹೇಳಬಾರದೆ. " ಉತ್ಸುಕತೆಯಿಂದ ಪ್ರಮೋದನು ಕೇಳಿದ.

" ನನ್ನ ಅಂತ್ಯಕಾಲವು ಸಮೀಪಿಸಿದೆ. ಕನಕನನ್ನು ನೋಡಿಕೋ. ಅವಳ ಸ್ವಭಾವವು ಮೊದಲಿನಂತಿಲ್ಲ. ಅವಳ ಸ್ವಭಾವವನ್ನು ಸುಧಾರಿಸಲು ಪ್ರಯತ್ನ ಮಾಡು. ನನ್ನ ಮನಸ್ಸಿಗೆ ಅವಳು ಬಹಳ ಕಷ್ಟಕೊಟ್ಟಿದ್ದಾಳೆ. "

ಕನಕನು ಮಾಡಿದ ಗುರುತರ ಅಪರಾಧಗಳನ್ನು ಹೇಳುತ್ತ ಒಂದು ದೊಡ್ಡ ಉಸಿರ್ಗರೆದು ಸುಶೀಲಾ ಮತ್ತೆ—" ಅವಳ ಸ್ವಭಾವವು ಕೆಟ್ಟಿದೆ.

ಕೆಡುವ ಮುನ್ನವೇ ಅವಳೇಕೆ ಸಾಯುಲಿಲ್ಲವೋ ಏನೋ. ಪ್ರಮೋದ, ಅವಳನ್ನು ಸುಧಾರಿಸಲು ಶಕ್ತಿಮೀರಿ ಯತ್ನಿಸು.'' ಎಂದು ಹೇಳಿದಳು.

ಪ್ರಮೋದ ಎಲ್ಲವನ್ನೂ ಕೇಳಿದ. ಅವನ ಚಿತ್ತವು ವ್ಯಾಕುಲವಾಯಿತು. ಅನುತಾಪ, ಕೃತಜ್ಞತೆಗಳಿಂದ ಅವನ ಹೃದಯವು ಉಕ್ಕಿಬಂದಿತು. ಕನಕನು ತನಗಾಗಿ ಬಹಳ ಕಷ್ಟಪಟ್ಟಿದ್ದಳು. ಅವೆಲ್ಲವನ್ನು ಗಮನಕ್ಕೆ ತಂದುಕೊಂಡ. ಅವನ ಕಣ್ಣುಗಳಲ್ಲಿ ನೀರೂರಿತು. ಅವನು ಸುಶೀಲಾನ ಮುಂದೆ ಕುಳಿತುಕೊಂಡು ತನ್ನ ತಪ್ಪನ್ನು ಒಪ್ಪಿಕೊಂಡ. ಸುಶೀಲಾನ ಪುಸ್ತಕಗಳನ್ನು ಪ್ರಮೋದನೇ ಸೂರೆಮಾಡಿದ್ದ. ಅಸ್ತವ್ಯಸ್ತ ಮಾಡಿದ್ದ. ಪ್ರಮೋದನಿಗಾಗಿಯೇ ಕನಕನಿಗೆ ರುಪಾಯಿ ಬೇಕಾಗಿದ್ದುವು. ಪ್ರಮೋದನು ತಿಳಿಸಕೂಡದೆಂದು ಬರೆದಿದ್ದರಿಂದ ಕನಕಲತಾ ಈ ಮಾತನ್ನು ಸುಶೀಲಾನಿಗೆ ಹೇಳಿದ್ದಿಲ್ಲ. ಈ ಎಲ್ಲ ಸಂಗತಿಗಳನ್ನು ತಿಳಿಸಿ ಪ್ರಮೋದನು ತನ್ನ ಎಲ್ಲ ತಪ್ಪನ್ನೂ ಒಪ್ಪಿಕೊಂಡ.

* * * *

ಕನಕಲತಾ ನಿರ್ದೋಷಿಯಾದಳು. ಈಗ ಸುಶೀಲಾನ ಆನಂದಕ್ಕೆ ಸೀಮೆಯೇ ಇರಲಿಲ್ಲ. ಅವಳ ಹೃದಯವು ಹಗುರಾಯಿತು. ಒಂದು ದೊಡ್ಡ ಭಾರ ಇಳಿದಂತಾಯಿತು ಸುಶೀಲಾನಿಗೆ.

## ದೇವಿಯೊ ಏನು ಮಾನವಿಯೊ ?

ಚಂಚಲಮನಸ್ಸಿನವರಲ್ಲಿ ದೃಢತೆಯಿರುವುದಿಲ್ಲ. ಅವರ ಮನಸ್ಸು ಯಾವಾಗಲೂ ಹೋರಾಯಂತ್ರದ ಮುಳ್ಳಿನಂತೆ ಹೊಯ್ದಾಡುತ್ತಿರುತ್ತದೆ. ಅವರಲ್ಲಿ ಕೇವಲ ಅಸ್ಥಿರವಿಚಾರಗಳೇ ಇರುತ್ತವೆ. ಅಲಾಹಾಬಾದಕ್ಕೆ ಬಂದ ಮೇಲೆ ಯಾಮಿನಿ ಕನಕನ ರೂಪಲಾವಣ್ಯಕ್ಕೆ ಮನಸೋತ. ಕನಕನಮುಂದೆ ನೀರಜಾ ತುಚ್ಛಳೆಂದು ತೋರಹತ್ತಿದಳು. ನೀರಜಾನ ಸ್ಥಾನವನ್ನು ಈಗ ಕನಕನು ಆಕ್ರಮಿಸಿದಳು. ಅವನ ಮನಸ್ಸಿನೊಳಗೆ ಈಗ ಕನಕನು ನೆಲಸಿದಳು. ನೀರಜಾ ಕಾಡು ಕುಸುಮ, ಬೇರೆ ಕುಸುಮಗಳಿರದಿದ್ದಾಗ ಕಾಡು ಕುಸುಮವೇ ಮಹತ್ವದ್ದಾಗಿತ್ತು. ಗತಿಯಿಲ್ಲದವಳು ಗಂಡನನ್ನು ಹಾಡಿದಂತೆ! ಅಡವಿಯಲ್ಲಿ ನೀರಜಾ ಒಬ್ಬಳೇ ಇರುವುದರಿಂದ ಅವಳ ಸೌಂದರ್ಯವು ಎದ್ದು ಕಾಣುತ್ತದೆ. ಆದರೆ ಕನಕಲತಾ ? ಎಲ್ಲೆಡೆಯಲ್ಲಿಯೂ, ಸಮಸ್ತಕಾಲದಲ್ಲಿಯೂ,

ಸಮಾನವಾಗಿ ಅವಳಿಗೆ ಮಾನ ಸಿಗುತ್ತದೆ. ಆದರವಿರುತ್ತದೆ. ವನದೊಳಗೆ ನೂರಾರು ಹೂಗಳರಳಿದ್ದರೂ ಗುಲಾಬಿಯನ್ನು ಜನರು ಆದರಿಸುತ್ತಾರೆ. ಗುಲಾಬಿ ಹೂಗಳ ರಾಣಿಯೆಂದು ತಿಳಿಯುತ್ತಾರೆ. ಗುಲಾಬಿಯಂಥ ಕನಕ ನನ್ನು ನೋಡಿ ಅವನು ನೀರಜಾಳನ್ನು ಮರೆತುಬಿಟ್ಟರೆ ಆಶ್ಚರ್ಯವೇನು ? ಇಲ್ಲಿ ಇನ್ನೊಂದು ಮಾತು ಅಡಕವಾಗಿದೆ: ನೀರಜಾ ಕೈವಶವಾಗುವುದು ದುರ್ಲಭ ವೆಂದು ಕಂಡುಬಂದಾಗ ಅವನ ಲಾಲಸೆ ಅತ್ಯಧಿಕವಾಗುತ್ತಿತ್ತು; ಆದರೆ ನೀರಜಾ ಸಿಗುವುದು, ತನ್ನವಳಾಗುವುದು ಸಹಜವೆಂದೆನಿಸಿದಾಗ ಅವಳ ಮರ್ಯಾದೆ ಕಡಮೆಯಾಯಿತು. ಕರೆದು ಹೆಣ್ಣುಕೊಟ್ಟರೆ ಅಳಿಯನಿಗೆ ಮಲರೋಗ ಬಂದಿತೆಂಬಂತಾಯಿತು! ಮನಸ್ಸು ಈರೀತಿಯಿರುವಾಗ ನೀರಜಾನ ಪ್ರೇಮವು ತನ್ನ ಸ್ಥಾನವನ್ನು ಹೇಗೆ ಕಾಯ್ದುಕೊಳ್ಳಬಲ್ಲದು ?

ಕಾನಪುರಕ್ಕೆ ಬರಲು ಸಂನ್ಯಾಸಿ ಯಾಮಿನಿಗೆ ಪತ್ರ ಬರೆದಿದ್ದ. ಅದಕ್ಕಾ ಗಿಯೇ ಅವನು ಹೊರಟಿದ್ದು. ಸಂನ್ಯಾಸಿ ನೀರಜಾನ ಪಾಣಿಗ್ರಹಣ ಮಾಡಿ ಸಲಿಕ್ಕೆಂದೇ ಕರೆದಿದ್ದನೆಂದೂ ಅವನಿಗೆ ಸಂಪೂರ್ಣ ಆಶೆಯಿತ್ತು. ಎರಡು ದಿನಗಳ ಬದಲು ಅಯ್ದಾರು ದಿನಗಳು ಕಳೆದು ಹೋದರೂ ಯಾಮಿನಿ ಕಾನ ಪುರಕ್ಕೆ ಹೋಗುವ ಮಾತನ್ನೇ ಎತ್ತಲಿಲ್ಲ. ಈಗ ಯಾಮಿನಿಗಿರುವುದೆಂದರೆ ಒಂದು ಚಿಂತೆ ಮಾತ್ರ, ಕನಕನನ್ನು ಹೇಗೆ ಪಡೆಯಬೇಕೆಂಬುದು. ನೀರಜಾನ ಮೇಲೆ ಪ್ರಮೋದ ಜೀವಕಳೆದುಕೊಳ್ಳುತ್ತಾನೆಂಬುದು ಯಾಮಿನಿಗೆ ಚೆನ್ನಾಗಿ ಗೊತ್ತಿತ್ತು. ನೀರಜಾನ ವಿವಾಹವನ್ನು ಪ್ರಮೋದನಕೂಡ ಮಾಡಿದರೆ, ಅವನು ತನ್ನ ಸೋದರಿಯನ್ನು ತನಗೆ ಕೊಡುವನೆಂದು ಅವನು ಯೋಚಿಸಿದ.

ಒಂದುದಿನ ಮಾತಿಗೆ ಮಾತು ಬಂದಾಗ ಯಾಮಿನಿ ಪ್ರಮೋದನಿಗೆ— "ಪ್ರಮೋದ, ಎರಡು ದಿನಗಳ ಮಟ್ಟಿಗೆಂದು ಬಂದೆ, ಆದರೆ ಅಯ್ದಾರು ದಿನ ಗಳಾದುವು, ಇನ್ನು ನಾನು ಬೇಗನೇ ಹೋಗಬೇಕು. ಆದರೆ—" ಎಂದು ಹೇಳಿದ.

ಯಾಮಿನಿ ಇಷ್ಟು ಹೇಳಿ ಸುಮ್ಮನಾದ. ಯಾವುದೋ ಮಾತನ್ನು ಮರೆ ಸಲು ಯತ್ನಿಸುವನೆಂದು ಕಂಡಿತು. ಆ ಮಾತನ್ನು ತಿಳಿದುಕೊಳ್ಳಲು-ಪ್ರಮೋ ದನು ಬಹಳ ಆಗ್ರಹಪಡಿಸಿದ. ಆಗ ಯಾಮಿನಿ ಹೇಳಿದ—"ಬಹಳ ದಿನ ಗಳಿಂದಲೂ ನಿನಗೆ ಒಂದು ಮಾತನ್ನು ಹೇಳಬೇಕೆನ್ನುತ್ತಿದ್ದೇನೆ; ಆದರೆ ಏಕೋ ಏನೊ ಹೇಳುವುದಾಗಲೊಲ್ಲದು!"

ಪ್ರಮೋದನು ನಕ್ಕು ಹೇಳಿದ—" ಏಕೆ ಹೇಳಬಾರದೆ ! "

" ಇಲ್ಲ, ನಿನಗೆ ಹೇಳದೆ ಇರುವುದು ನನ್ನಿಂದಾಗದು. ಸಹೋದರ ಪ್ರಮೋದ, ನೀರಜಾಳನ್ನು ನನಗೆ ಕೊಟ್ಟು ಮದುವೆ ಮಾಡಲಿಕ್ಕೆಂದೇ ಸಂನ್ಯಾಸಿ ನನ್ನನ್ನು ಕರೆದಿದ್ದಾನೆ ಕಾನಪುರಕ್ಕೆ. ಆದರೆ ನನಗೆ ಮದುವೆ ಯಾಗುವ ಮನಸ್ಸಿಲ್ಲ. ಅದಕ್ಕೇ ನಾನು ಅಲ್ಲಿಗೆ ಹೋಗಲು ಹಿಂದೆ ಮುಂದೆ ನೋಡುತ್ತಿದ್ದೇನೆ. " ಗಂಭೀರನಾಗಿ ಯಾಮಿನಿ ಹೇಳಿದ.

" ನೀರಜಾಳನ್ನು ಮದುವೆಯಾಗಲು ನಿನಗೆ ಮನಸ್ಸಿಲ್ಲವೆ ? " ಆಶ್ಚರ್ಯ ದಿಂದ ಪ್ರಮೋದನು ಕೇಳಿದ.

" ಇಲ್ಲ, ನನಗೆ ಮನಸ್ಸಿಲ್ಲ "

ವಿಸ್ಮಯಪೂರ್ಣ ನೇತ್ರಗಳಿಂದ ಪ್ರಮೋದನು ಯಾಮಿನಿಯನ್ನು ನಿಟ್ಟಿಸ ಹತ್ತಿದ. ಕಾತರಸ್ವರದಲ್ಲಿ ಯಾಮಿನಿ ಹೇಳಿದ " ಅವಳನ್ನು ಕೈ ಹಿಡಿಯಲು ನನಗೆ ಆಶೆಯಿಲ್ಲ. ನಿಜವಾಗಿ ಇದು ಸೋಜಿಗದ ಸಂಗತಿ, ಆದರೆ ನೀನು ಆಶ್ಚರ್ಯಪಡಬೇಡ, ಪ್ರಮೋದ, ಇದಕ್ಕೂ ಒಂದು ಕಾರಣವಿದೆ. "

" ಇದಕ್ಕೂ ಕಾರಣವಿದೆಯೆ ? ನೀರಜಾಳನ್ನು ನೋಡಿದವರು ಅನು ರಕ್ತರಾಗದೇ ಇರುವರೆ ? " ಮೆಲ್ಲಗೆ ಪ್ರಮೋದನು ಕೇಳಿದ.

" ಅದೇನೊ ನಿಜ; ನಾನು ಅವಳನ್ನು ಪ್ರೀತಿಸುವುದಿಲ್ಲವೆಂದು ನೀನು ತಿಳಿಯಬೇಡ; ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ. ಆದರೆ ನಾನು ಅವಳಿಗೆ ತಕ್ಕವನಲ್ಲ, ನಾನು ಅವಳ ಕೈ ಹಿಡಿಯಲಾರೆ, " ಯಾಮಿನಿ ಉಸುರಿದ.

" ನೀನು ನೀರಜಾಳಿಗೆ ತಕ್ಕವನಲ್ಲವೆ ? ಹಾಗಾದರೆ ಯಾರು ತಕ್ಕ ವರೋ ನನಗಂತೂ ತಿಳಿಯಲೊಲ್ಲದು ? "

" ಜನರು ಬೇಕಾದುದನ್ನು ಆಡಿಕೊಳ್ಳಲಿ, ನಿಜವಾಗಿಯೂ ನಾನು ಅವ ಳಿಗೆ ತಕ್ಕವನಲ್ಲ. ನೀರಜಾ ನನ್ನನ್ನು ಪ್ರೀತಿಸುವುದಿಲ್ಲ. ಅವಳ ಪ್ರೇಮವು ನನ್ನ ಮೇಲಿಲ್ಲ. "

ಪ್ರಮೋದನಿಗೆ ಈಗ ಯಾಮಿನಿ ಒಲ್ಲೆನೆನ್ನುವುದರ ಅರ್ಥವು ಗೊತ್ತಾ ಯಿತು. ಯಾಮಿನಿಯ ವಿಷಾದಭರಿತ ಸ್ವರದಿಂದ ಅವನ ಹೃದಯವೇದನೆ ಯನ್ನೂ ಅನುಭವ ಮಾಡಿಕೊಂಡ. ಎಲ್ಲವನ್ನೂ ತಿಳಿದುಕೊಂಡು ಅವನು ಸುಮ್ಮನಾದ.

“ ಪ್ರಮೋದ, ನಿನಗೆ ಹೇಳಬೇಕಾದ ಮಾತು ಇನ್ನೂ ಇವೆ. ನೀರಜಾ ಯಾರಲ್ಲಿ ಅನುರುಕ್ತಳಾಗಿರುವಳೆಂಬುದು ನಿನಗೆ ಗೊತ್ತಿದೆಯೆ ?—ಅವಳು ನಿನ್ನನ್ನೇ ಪ್ರೀತಿಸುತ್ತಾಳೆ.” ಸ್ವಲ್ಪ ಹೊತ್ತಿನಮೇಲೆ ಮತ್ತೆ ಯಾಮಿನಿ ಹೇಳಿದ.

ಯಾಮಿನಿಯ ಮಾತು ಕೇಳಿ ಪ್ರಮೋದನ ಮನಸ್ಸಿನೊಳಗೆ ಆನಂದದ ತೆರೆಗಳು ಎದ್ದುವು. ಯಾಮಿನಿಯ ಕಷ್ಟಕ್ಕೆ ಕಾರಣ ತಾನೇ ಎಂದು ಅವನಿಗೆನಿಸುತ್ತಲೇ ಅವನ ಆನಂದವು ಆರಿತು.

“ ಸಹೋದರ, ನನಗದು ತಿಳಿಯದೆ ? ನೀನು ಒಳಗೊಳಗೆಯೇ ನೀರಜಾನನ್ನು ಪ್ರೀತಿಸುತ್ತಿರುವೆ. ಅದಕ್ಕೆಂದೇ ನಾನು ನಿಮ್ಮಿಬ್ಬರ ಪ್ರೇಮಕ್ಕೆ ಅಡ್ಡ ಬರಬಾರದೆಂದು ಆಣೆ ಮಾಡಿದ್ದೇನೆ. ನಾನೇ ಪ್ರಯತ್ನ ಮಾಡಿ ನಿಮ್ಮಿಬ್ಬರನ್ನು ಪವಿತ್ರ ಬಂಧನದಲ್ಲಿ ಬಂಧಿಸಬೇಕೆಂದು ನಿಶ್ಚಯ ಮಾಡಿಕೊಂಡದ್ದೇನೆ.” ಯಾಮಿನಿ ಹೇಳಿದ.

ಯಾಮಿನಿಯ ನಿಸ್ವಾರ್ಥ ಭಾವವನ್ನು ನೋಡಿ ಪ್ರಮೋದನು ವಿನಯದಿಂದ ಅವನ ಕಡೆಗೆ ನೋಡಹತ್ತಿದ. ಯಾಮಿನಿಯು ದೇವಪುರುಷನೋ ಅಥವಾ ಮಾನವನೊ, ಪ್ರಮೋದನಿಗೆ ಚೆನ್ನಾಗಿ ತಿಳಿಯಲಿಲ್ಲ.

“ ನಿನ್ನಂಥ ಗೆಳೆಯನ ಮುಂದೆ ಮುಚ್ಚುಮರೆಯೇಕೆ ? ನಾನು ನೀರಜಾನನ್ನು ನೋಡಿದಾಗಿನಿಂದ ಅವಳನ್ನು ಪ್ರೀತಿಸುತ್ತಿದ್ದೇನೆ. ಇನ್ನೂ ಅವಳ ಮೂರ್ತಿ ನನ್ನೆದೆಯಲ್ಲಿ ವಾಸ ಮಾಡಿದೆ, ಯಾಮಿನಿ ಬಾಬೂ ! ನಾನು ಹೇಳುವುದನ್ನು ನಂಬು,–ನಾನು ಅವಳ ಮೇಲೆ ಎಷ್ಟೇ ಮುಗ್ಧನಾಗಿರಲಿ, ನೀರಜಾ ದೊರೆಯದಿದ್ದರೆ ನನಗೆ ಎಷ್ಟೇ ಕಷ್ಟವಾಗಲಿ, ನಿನ್ನನ್ನು ದುಃಖಸಾಗರದಲ್ಲಿ ನೂಕಿ ಅವಳನ್ನು ಮದುವೆಯಾಗಲು ನನಗೂ ಮನಸ್ಸಿಲ್ಲ.—ಈ ಲಾಭದಿಂದ ನನಗೆಂದೂ ಸುಖವು ಸಿಗಲಾರದು.”

ಯಾಮಿನಿ–“ ನೀನೇಕೆ ಇದನ್ನೆಲ್ಲ ಯೋಚಿಸುತ್ತಿ ? ನೀನು ಒಂದು ವೇಳೆ ಅವಳ ಕೈ ಹಿಡಿಯದಿದ್ದರೂ, ನಾನು ಅವಳನ್ನು ಮದುವೆಯಾಗುವುದಿಲ್ಲ. ನೀರಜಾ ನನ್ನನ್ನು ಪ್ರೀತಿಸುವುದಿಲ್ಲ. ಇದೆಲ್ಲ ನನಗೆ ತಿಳಿದಿದ್ದರೂ ನಾನು ಹೀಗೆ ಮಾಡಬಹುದೆ ? ಹಾಂ, ನೀವಿಬ್ಬರೂ ಮದುವೆಯಾದರೆ, ನೀರಜಾ ಸುಖದಿಂದಿರುವಳು. ಅವಳನ್ನು ನೋಡಿ ನಾನೂ ಸುಖಿಯಾಗುವೆ.”

ಪ್ರಮೋದನು ಯಾಮಿನಿಯ ಮಾತಿನ ಇಂಗಿತವನ್ನು ಅರಿತುಕೊಂಡ, ಅವನಿಗೆ ಬಂದಂತಹ ಪ್ರಸಂಗವು ತನಗೆ ಬಂದಿದ್ದರೂ ಪ್ರಮೋದನು ಹಾಗೇ ಮಾಡುತ್ತಿದ್ದ. ಅದು ತನ್ನ ಇಚ್ಛಾನುಸಾರವಾದುದರಿಂದ ಸಹಜವಾಗಿಯೇ ಸಮಂಜಸವೆಂದು ತೋರಿತವನಿಗೆ. ಆದಾಗ್ಯೂ ಅವನು ಯಾಮಿನಿಯ ಮನ ವೊಲಿಸಲು ಪ್ರಯತ್ನಿಸಿದ, ಯಾಮಿನಿ ಕೇಳಲೇ ಇಲ್ಲ. "ನಿನಗೆ ಗೊತ್ತಿ ದೆಯೆ—ನೀನು ನೀರಜಾಳನ್ನು ಕೈ ಹಿಡಿಯದಿದ್ದರೆ ನನಗೆ ಅತೀವ ವೇದನೆ ಯಾಗುವುದು. ನನ್ನ ಹೃದಯವು ನಿನಗೆ ಚೆನ್ನಾಗಿ ತಿಳಿದಿದ್ದರೆ ನೀನು ಹೀಗೆ ಆಡುತ್ತಿದ್ದಿಲ್ಲ. ನಾನೇ ಸ್ವತಃ ಈ ಪ್ರಸ್ತಾವವನ್ನು ನಿನ್ನ ಮುಂದೆ ಇಡುತ್ತಿ ದ್ದೇನೆ. ನೀನು ಮದುವೆಯಾದರೆ ನನಗೆ ತುಸುವಾದರೂ ದುಃಖವಾಗುವು ದಿಲ್ಲವೆಂದು ತಿಳಿ. ಹುಂ, ನೀನು ಇದಕ್ಕೆ ಒಪ್ಪದೇ ಹೋದರೇ ನನಗೆ ಖಂಡಿತ ದುಃಖವೆನಿಸುವುದು." ಎಂದು ಹೇಳಿದ ಯಾಮಿನಿ.

ಪ್ರಮೋದನ ಮನಸಿನೊಳಗೆ ಅನೇಕ ವಿಚಾರಗಳು ಮೂಡಹತ್ತಿದುವು. ಯಾಮಿನಿಯ ಮಾತಿಗೆ ಏನೂ ಉತ್ತರ ಕೊಡಲಾರದಾದ. ಅವನ ಮೌನ ವನ್ನು ಕಂಡು ಪ್ರಮೋದನು ಒಪ್ಪಿದನೆಂದು ಅರ್ಥ ಮಾಡಿಕೊಂಡು— "ಇಂದೆಯೇ ನಾನು ಕಾನಪುರಕ್ಕೆ ಹೋಗುವೆ. ಸಂನ್ಯಾಸಿಗೆ ಹೇಳಿ ನಿನ್ನ ಮದುವೆಯನ್ನು ಗೊತ್ತು ಮಾಡಿ ಬರುವೆ." ಎಂದು ಹೇಳಿದ.

ಇಬ್ಬರೂ ಬಹಳ ಮಾತನಾಡಿದರು. ಯಾಮಿನೀನಾಥನು ಅಂದೇ ಕಾನ ಪುರಕ್ಕೆ ಹೋದ. ಪ್ರಮೋದನು ಹಗಲೆಲ್ಲ ವಿಷಾದ, ಆಹ್ಲಾದಗಳ ಚಿಂತೆ ಯಲ್ಲಿ ಮುಳುಗಿದ್ದ. ನೀರಜಾ ತನ್ನ ಕೈ ಹಿಡಿಯುವಳೆಂದು ಅವನ ಮನಸಿಗೆ ಆಹ್ಲಾದ, ಉಲ್ಲಾಸ. ಕನಸಿನಲ್ಲಿಯೂ ಅವನು ಹೀಗೆ ಆಲೋಚಿಸಿದ್ದಿಲ್ಲ. ಆಶಾತೀತವಾದ ವಸ್ತು ಕೈಗೆ ಬಂದಂತೆನಿಸಿತವನಿಗೆ. ತನ್ನ ಸುಖಕ್ಕಾಗಿ ಪರಮ ಮಿತ್ರನು ನಿರಾಶೆಯ ಹೊನಲನ್ನು ಹೊಗುವನಲ್ಲ ಎಂಬುದು ಅವನ ವಿಷಾ ದಕ್ಕೆ ಕಾರಣವಾಗಿದ್ದಿತು.

## ಮೃತ್ಯುಶಯ್ಯೆ

ಕ್ರಮಶಃ ದಿವಸಗಳು ಕಳೆಯಹತ್ತಿದುವು. ಸುಶೀಲಾನಿಗೆ ಗುಣವಾಗುವ ಆಶೆಯೇನೂ ಕಂಡುಬರಲಿಲ್ಲ. ಜಡ್ಡು ಒಮ್ಮೆ ಒಂದೆರಡು ದಿನ ಕಡಿಮೆ

ಯಾಗುತ್ತಿತ್ತು, ಮತ್ತೊಮ್ಮೆ ಒಮ್ಮೆಲೇ ಹೆಚ್ಚುತ್ತಿತ್ತು. ಪ್ರಮೋದನು ಅಲ್ಲಿ ಬಹಳ ದಿವಸ ಇರುವಂತಿದ್ದಿಲ್ಲ. ಅವನ ಪರೀಕ್ಷೆ ಬಹಳ ಸಮೀಪವಿತ್ತು. ಸ್ವಲ್ಪ ದಿವಸ ಮಾತ್ರ ಇದ್ದು ಆ ಮೇಲೆ ಕಲಕತ್ತೆಗೆ ಹೊರಟುಹೋದ. ಅವನು ಹೋದ ಮೂರು-ನಾಲ್ಕು ದಿವಸಗಳಲ್ಲಿಯೇ ಸುಶೀಲಾನ ಬೇನೆ ಬಲಿಯಿತು. ಮೂರು-ನಾಲ್ಕು ದಿನಗಳಲ್ಲಿಯೇ ವಿಕಾರದ ಲಕ್ಷಣವು ಹೆಚ್ಚಾಗಹತ್ತಿತು. ಸುಶೀಲಾನಿಗೆ ಆ ದಿವಸ ರಾತ್ರಿ ಕಾಣಿಸಿಕೊಂಡ ಮೂರ್ತಿ ಕಣ್ಣೆದುರಿಗೆ ಕಟ್ಟಿದಂತಾಗಿತ್ತು. ಆ ದಿವಸದ ಆ ಹಾಡು ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ಹತ್ತಿರದಲ್ಲಿಯೇ ಕನಕ ಕುಳಿತುಕೊಂಡಿದ್ದಳು. "ಕನಕ, ಕೇಳಿದೆಯಾ? ಆಹಾ! ಹಾಡು ಎಷ್ಟು ಮಧುರವಾಗಿದೆ ನೋಡು! ಈ ಹಾಡು ನನ್ನ ಸ್ವಾಮಿಯದು! ನನಗೆ ಹಾಡು ನೆನಪಿದೆ!" ಸುಶೀಲಾ ಕನಕಲತಾನಿಗೆ ಹೇಳಿದಳು.

ಸುಶೀಲಾನ ನೇತ್ರಗಳಿಂದ ಕಣ್ಣೀರು ಸುರಿಯಹತ್ತಿತು, ಹಾಸುಗೆಯೆಲ್ಲ ತೊಯ್ದಿತು. ತುಸು ಹೊತ್ತು ಸುಮ್ಮನಿದ್ದು ಮತ್ತೆ ಮಾತನಾಡಹತ್ತಿದಳು— "ಆಹಾ! ಈ ಹಾಡನ್ನು ಅವರು ನನಗೆ ಕಲಿಸಲು ಬಹಳ ಪ್ರಯತ್ನ ಪಟ್ಟಿದ್ದರು! ಹಾಳಾದ ನಾಚಿಕೆ ನನ್ನನ್ನು ಕಲಿಯಗೊಡಲಿಲ್ಲ! ಮಗು ಕನಕಲತಾ, ನೋಡು, ಹಾಡುವವರಾರು ಅವರು? ಇದು ಯಾರ ಕಂಠ?"

ದನಿಯನ್ನು ಆಲಿಸಲು ಸುಶೀಲಾ ಸ್ವಲ್ಪ ಸಮಯ ಮನೋಯೋಗಪೂರ್ವಕವಾಗಿ ಸುಮ್ಮನಿದ್ದಳು. "ಇಲ್ಲ, ಇಲ್ಲ, ನನಗೆ ಗುರುತು ಹತ್ತಲಿಲ್ಲ. ಅವರ ಗುರುತು ಸಿಕ್ಕಿತು. ಆದರೆ ಯಾರು ಹಾಡುತ್ತಾರೆಂಬುದು ಮಾತ್ರ ಗೊತ್ತಾಗಲಿಲ್ಲ. ಕನಕ, ಮಗು ಕನಕ! ಯಾರು ಹಾಡುತ್ತಿದ್ದಾರೆ?" ಮತ್ತೆ ತಲೆಯನ್ನಲುಗಾಡಿಸುತ್ತ ಅವಳು ಕೇಳಿದಳು

ಸುಶೀಲಾನ ಪ್ರಲಾಪವನ್ನು ಕೇಳಿ ಕೇಳಿ ಕನಕ ಅಳುತ್ತಿದ್ದಳು. "ನನಗಂತೂ ಏನೂ ಕೇಳಿಸುವುದಿಲ್ಲ." ಕಣ್ಣೀರನ್ನೊರಸಿಕೊಳ್ಳುತ್ತ ಕನಕ ಮಾತನಾಡಿದಳು.

"ಕೇಳಿಸುವುದಿಲ್ಲವೆ! ಲಕ್ಷ್ಯಗೊಟ್ಟು ಕೇಳು. ಅಹಾಹಾ! ಎಂಥ ಮಧುರವಾದ ಸ್ವರವದು!"

ಇದೇ ಹೊತ್ತಿನಲ್ಲಿ ಡಾಕ್ಟರರು ಬಂದರು. ಎಲ್ಲ ಲಕ್ಷಣವನ್ನು ನೋಡಿ ಬಹಳ ದುಃಖಿಗಳಾದರು. ಇನ್ನು ಬಹಳ ಹೊತ್ತು ಬದುಕುವ ಆಶೆಯಿಲ್ಲವೆಂದು

ಅವರು ತಿಳಿದರು. ಆದರೂ ಪ್ರಯತ್ನ ಮಾಡಿ ನೋಡಿದರಾಯಿತೆಂದು ಔಷಧೋಪಚಾರಮಾಡಿ ಅವರು ಹೊರಗೆ ಹೋಗಿ ಕುಳಿತುಕೊಂಡರು. ಹೋಗುವಾಗ ಅವರು—“ ಒಂದು ವೇಳೆ ಲಕ್ಷಣಗಳಲ್ಲೇನಾದರೂ ಪರಿವರ್ತನವಾದರೆ ಕೂಡಲೇ ನನಗೆ ಬಂದು ತಿಳಿಸಬೇಕು. ” ಎಂದು ಹೇಳಿದರು

ಚಿಕಿತ್ಸಕರು ಹೋದರು. “ ಯಾರವರು ? ಏಕೆ ಬಂದಿದ್ದರು ? ” ಎಂದು ತುಸುಹೊತ್ತಿನ ನಂತರ ಸುಶೀಲಾ ಕನಕನನ್ನು ಕೇಳಿದಳು. ಕನಕಲತಾ ಉತ್ತರ ಕೊಡಲಿಲ್ಲ. ಮತ್ತೆ ಸುಶೀಲಾ ಬಡಬಡಿಸಿದಳು: “ ಕನಕ, ಈ ಹಾಡನ್ನು ಕೇಳಿದಾಗಿನಿಂದ ನನಗೆ ಬಹಳ ಕಷ್ಟವಾಗಹತ್ತಿದೆ. ಎಲಾ ! ನಾನು ಈ ಹೊತ್ತೇ ಸಾಯುವೆನೆ ! ಕೇಳು, ಆಲಿಸು, ಮತ್ತೆ ಹಾಡುತ್ತಾರೆ—ನನಗೆ ಬೇಕಾಗಿದ್ದ ಹಾಡನ್ನು ಹಾಡುವವರು ಯಾರು ! ಆಲಿಸು ! ಆಲಿಸು, ಕನಕ ಆಲಿಸು ! ಅದೊ ! ”

× × × × ×

ಇದೇ ಹೊತ್ತಿನಲ್ಲಿ ಒಮ್ಮೆಲೆ ಒಬ್ಬನು ಕೋಣೆಯೊಳಗೆ ಬಂದು ಸುಶೀಲಾನ ತಲೆಗಿಂಬಿನ ಬಳಿ ನಿಂತುಕೊಂಡ. ಅವನನ್ನು ನೋಡಿದ ಕೂಡಲೇ ಸುಶೀಲಾ ಕಣ್ಣು ಮುಚ್ಚಿಕೊಂಡಳು. ಅವಳಿಗೆ ಮೂರ್ಛೆ ಬಂದಿತು. ಸ್ವಲ್ಪ ಹೊತ್ತಿನಲ್ಲಿ ಪ್ರಜ್ಞೆ ಬಂದು ಕಣ್ಣು ತೆರೆದಳು. “ ನಾಥ ! ಸಾಯುವ ವೇಳೆಯಲ್ಲಿ ಬಂದು ಏಕೆ—ದರ್ಶನ ಕೊಟ್ಟಿರಿ ? ” ಆಗಂತುಕನ ಕಡೆಗೆ ನೋಡಿ ಸುಶೀಲಾ ನುಡಿದಳು.

“ ಪ್ರಾಣೇಶ್ವರಿ, ಸುಶೀಲಾ ! ನಿನಗೆ ಹೇಗೆ ಮೋರೆ ತೋರಿಸಲಿ........ ” ಎಂದು ಸಂನ್ಯಾಸಿ ಸುಶೀಲಾನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಅಳಲಾರಂಭಿಸಿದ. ನಾಥನ ಕಡೆಗೆ ನೋಡುತ್ತ ಸ್ವಾಮಿಯ ಕೈಯೊಳಗೆ ಕೈಯನ್ನಿಟ್ಟು, ಸುಶೀಲಾ ಅಸುದೊರೆದಳು.

## ಪೂರ್ವಘಟನೆ

ಸುಶೀಲಾ ವಿಧವೆಯೆಂದು ಗೊತ್ತಾಗಿದೆ. ಆದರೂ ಸಾಯುವಾಗ ಒಮ್ಮೆಲೇ ಅವಳು ಸಧವೆ ಹೇಗಾದಳು ? ಇಲ್ಲಿ ಇದೇ ವಿಷಯವನ್ನು ಕುರಿತು

ತುಸು ಹೊತ್ತು ಮೊದಲಿನ ಸಂಗತಿಯನ್ನೇ ಬರೆಯಬೇಕಾಗುವುದು. ತಾರಾಕಾಂತರ ಹಿರಿಯ ಮಗಳು ಮದುವೆಯಾದ ಮೇಲೆ ತಿರುಗಿ ತವರು ಮನೆಗೆ ಕಾಲಿಡಲಿಲ್ಲ. ಎಂದಾದರೂ ಚಾರುಶೀಲಾನನ್ನು ಕಳಿಸುವ ಪ್ರಸಂಗ ಒದಗಿದರೆ ಬಿನೋದಲಾಲರು ಏನಾದರೂ ನೆವ ಒಡ್ಡುತ್ತಿದ್ದರು. ಅವರು ಅವಳನ್ನು ಒಂದು ದಿನದ ಮಟ್ಟಿಗೂ ಬಿಟ್ಟಿರಲು ಸಾಧ್ಯವಿದ್ದಿಲ್ಲ, ಇದೇ ಮೂಲ ಮಾತು. ಇದರಿಂದ ತಾರಾಕಾಂತರು ಮನಸ್ಸಿಗೆ ಬಹಳ ಹಚ್ಚಿಕೊಂಡಿದ್ದರು. ಚಿಕ್ಕ ಮಗಳ ಮದುವೆಯನ್ನು ಮಾಡಿಕೊಡುವಾಗ ಅಳಿಯನು ತಮ್ಮ ಮನೆಯಲ್ಲಿ ಅಳಿಯತನಕ್ಕೆ ಬಂದಿರಬೇಕೆಂದು ಬಗೆದಿದ್ದರು. ಅವಳಿಗೆ ಗಂಡಸು ಮಕ್ಕಳಿರಲಿಲ್ಲ. ಮುಪ್ಪಿನ ಕಾಲದಲ್ಲಿ ಒಬ್ಬರೇ ಹೇಗೆ ಇರಬೇಕು? ಅದರಿಂದಲೇ ಅವರು ಹೀಗೆ ಗೊತ್ತು ಮಾಡಿದ್ದರು. ಆದರೆ ದೈವವೇ ಕೆಟ್ಟದ್ದು. ಸ್ವಲ್ಪ ದಿವಸಗಳಲ್ಲಿಯೇ ಅಳಿಯನು ಚರಿತ್ರಭ್ರಷ್ಟನಾದ, ಹೇಗೋ ದಯಾನಂದನಿಗೆ ಮದ್ಯದ ಚಟವು ಅಂಟಿಕೊಂಡಿತು. ಸುಶೀಲಾನಿಗೆ ಇದು ತಿಳಿಯಿತು, ಅವಳು ಬಿಡಿಸಲು ಎಷ್ಟೋ ಪ್ರಯತ್ನಪಟ್ಟಳು; ಆದರೆ ಅವಳು ಕೃತಕಾರ್ಯಳಾಗಲಿಲ್ಲ. ಒಂದು ದಿನ ದಯಾನಂದನು ಎಲ್ಲಿಂದಲೋ ಸೆರೆ ಕುಡಿದು ಬಂದಿದ್ದ. ಮನೆಗೆ ಬಂದು ಆಳಿಗೆ ಮತ್ತೆ ಸೆರೆ ತರಲು ಅಪ್ಪಣೆ ಕೊಟ್ಟ. ಸುಶೀಲಾ ಅದಕ್ಕೆ ಅಡ್ಡ ಬಂದಳು, ದಯಾನಂದನಿಗೆ ಬಹಳ ಸಿಟ್ಟು ಬಂದಿತು. ಸಿಟ್ಟಿನ ಭರದಲ್ಲಿ ಸುಶೀಲಾನನ್ನೂ ಹೊಡೆಯಹತ್ತಿದ. ಈ ಸಂಗತಿ ತಾರಾಕಾಂತರಿಗೆ ಹೇಗೋ ಗೊತ್ತಾಗಿಬಿಟ್ಟಿತು. ಅಳಿಯನ ಈ ಅನುಚಿತ ಕಾರ್ಯಕ್ಕೆ ಅವರಿಗೆ ಬಹಳ ಸಿಟ್ಟು ಬಂದಿತು. ಅವರು ದಯಾನಂದನನ್ನು ಬಹಳ ಸಿಟ್ಟು ಮಾಡಿದರು. ದಯಾನಂದನಿಗೆ ಮಾವನ ಮಾತು ನಾಟಿದುವು. ತನ್ನಲ್ಲಿ ಹಣ ವಿದ್ದಿದ್ದರೆ ಮಾವನವರು ಹೀಗೆ ಅಪಮಾನ ಮಾಡುತ್ತಿದ್ದರೆ? ಅವನಿಗೆ ಬಹಳ ಕೆಡುಕೆನಿಸಿತು. ಆ ದಿವಸ ರಾತ್ರಿಯೇ ಅವನು ಮನೆ ಬಿಟ್ಟು ಹೊರಟು ಹೋದ. ಇದರಿಂದ ಸುಶೀಲಾನಿಗಾದ ತಾಪವನ್ನು ವರ್ಣಿಸುವುದು ಅಸದಳ. ಹೋಗುವಾಗ ದಯಾನಂದನು ಸುಶೀಲಾನಿಗೆ ಹೇಳಿದ—"ಸುಶೀಲಾ, ನನ್ನ ನಿನ್ನ ಸಂಬಂಧವು ಸರಿಯಾಗಿ ಆಗಲಿಲ್ಲ—ನನಗೂ ನಿನಗೂ ಕೂಡಿ ಬರಲಿಲ್ಲ. ನಾನು ಬಡವ, ನೀನು ದೈವವುಳ್ಳವರ ಮಗಳು. ನಾನು ಇನ್ನು ಇಲ್ಲಿಂದ ಹೊರಡುತ್ತೇನೆ. ನೀನು ಸುಖದಿಂದ ನಿಮ್ಮ ಅಪ್ಪನ ಮನೆಯೊಳಗಿರು."

ಸ್ವಾಮಿಯ ಮಾತು ಕೇಳಿ ಸುಶೀಲಾ ಆತನ ಅಸದ್ವ್ಯವಹಾರಗಳನ್ನು ಮರೆತಳು—“ ನನಗೇಕೆ ಈ ಮಾತುಗಳನ್ನಾಡುತ್ತೀರಿ? ತಂದೆಯ ಹತ್ತಿರ ಹಣವಿದ್ದರೆ ಅವರಿಂದ ನನಗೇನು? ನಿಮ್ಮ ಕೂಡ ನಾನು ಬಿಕ್ಕೆ ಬೇಡಿ ತಿನ್ನುವೆ. ನಿಮ್ಮ ಕೂಡ ಇರುವುದರಿಂದ ವನವಾಸದಲ್ಲಿಯೂ ನನಗೆ ಸುಖವು ಸಿಗುವುದು. ನನ್ನನ್ನೂ ನಿಮ್ಮ ಕೂಡ ಕರೆದುಕೊಂಡು ನಡೆಯಿರಿ.” ಸುಶೀಲಾ ಅಳು ಅಳುತ್ತ ಹೇಳಿದಳು. ಹೆಂಡತಿಯ ಮಾತನ್ನು ಕೇಳಿ ದಯಾನಂದನ ಹೃದಯವು ಕರಗಿತಾದರೂ ಸುಶೀಲಾನನ್ನು ಸಂಗಡಕರೆದುಕೊಂಡು ಹೋಗಲು ಆಗಲಿಲ್ಲ.

ದಿನದ ಮೇಲೆ ದಿನಗಳು, ತಿಂಗಳ ಮೇಲೆ ತಿಂಗಳು ಉರುಳಹತ್ತಿದುವು, ಆದರೆ ದಯಾನಂದನ ಸುಳಿವೇ ಹತ್ತಲಿಲ್ಲ. ಸುಶೀಲಾ ಚಾತಕ ಪಕ್ಷಿಯಂತೆ ದಯಾನಂದನ ಪತ್ರವನ್ನು ನಿರೀಕ್ಷಿಸುತ್ತಿದ್ದಳು ಪತ್ರ ಬಾರದೆ ನಿರಾಶಳಾಗಿ ಅತ್ತು ಅತ್ತು ಮನಸ್ಸಿನ ವೇದನೆಯನ್ನು ಕಡಿಮೆ ಮಾಡಿಕೊಳ್ಳುತ್ತಿದ್ದಳು. ಎಷ್ಟೋ ವರುಷಗಳು ಕಳೆದು ಹೋದುವು, ಆದರೂ ದಯಾನಂದನ ಸುದ್ದಿಯೇ ಹತ್ತಲಿಲ್ಲ. ಮಾವನ ಮನೆಯಿಂದ ಹೋದ ಮೂರು ವರುಷಕ್ಕೆ ದಯಾನಂದನು ತೀರಿಕೊಂಡನೆಂದು ಜನರು ಮಾತನಾಡಹತ್ತಿದರು! ಸತ್ತ ಸುದ್ದಿಯನ್ನು ಕೇಳಿ ಸುಶೀಲಾ ಸುಯ್ಗರೆದಳು. ಆಗಿನಿಂದಲೇ ಅವಳು ವಿಧವಾ ವೇಷದಿಂದ ಇರಬೇಕಾಯಿತು.

ಮಾವನ ಮನೆಯನ್ನು ಬಿಟ್ಟು ಹೋಗಿ ಬಹಳ ದಿನಗಳಾದವು. ಆದರೂ ದಯಾನಂದನು ಸುಶೀಲಾನ ಸಮೀಪಕ್ಕೆ ಸುಳಿಯಲೇ ಇಲ್ಲ. ತಾನು ಸತ್ತನೆಂಬ ಸುಳ್ಳು ಸುದ್ದಿ ಹರಡಿದ್ದಕ್ಕಾಗಿ ತಾರಾಕಾಂತರ ಮೇಲೆ ಆತನು ಬಹಳ ಬೆಂಕಿಯಾದ. ಮುಂದೆ ತಾನೊಂದು ಎರಡನೆ ಮದುವೆಯನ್ನು ಮಾಡಿಕೊಂಡ. ಎರಡನೆಯ ಹೆಂಡತಿಯ ಗರ್ಭದಿಂದಲೇ ನೀರಜಾ ಹುಟ್ಟಿದಳು! ದುರ್ದೈವದಿಂದ ಎರಡನೇ ಹೆಂಡತಿ ಕೆಲವೇ ದಿನಗಳಲ್ಲಿ ತೀರಿಕೊಂಡಳು. ಆಗ ಆತನು ಹೆಂಡತಿಯ ಮರಣದಿಂದ ಮನಸ್ಸಿಗೆ ತುಂಬ ವ್ಯಥೆಯಾಗಿ ಸಂನ್ಯಾಸಿಯಾದ. ಆ ಮೇಲೆ ಅತ್ತ-ಇತ್ತ ಕೆಲವು ದಿನ ತಿರುಗಾಡಿದ. ಕೊನೆಗೆ ಕಾನಪುರದ ಅಡವಿಯಲ್ಲಿ ಆತನು ವಿರಕ್ತನಂತಿರಹತ್ತಿದ.

ದಿನಗಳು ಹೋದಹಾಗೆಲ್ಲ ದಯಾನಂದನು ಮಾವನು ಮಾಡಿದ ಅಪಮಾನವನ್ನು ಮರೆಯಹತ್ತಿದ. ಆಗಾಗ ಸುಶೀಲಾನನ್ನು ಕಾಣಬೇಕೆಂಬ

ಇಚ್ಛೆಯೂ ಆಗುತ್ತಿತ್ತು. ಆದರೆ ಯಾವ ಮೋರೆಯಿಟ್ಟುಕೊಂಡು ಅವಳನ್ನು ಕಾಣುವನು? ಅವಳನ್ನು ಬಿಟ್ಟು ಪುನರ್ವಿವಾಹವನ್ನು ಕೂಡ ಮಾಡಿಕೊಂಡ, ಎಂದಮೇಲೆ ಆವಳ ಬಳಿಗೆ ಹೋಗುವ ಬಗೆ ಹೇಗೆ?

ಸಂನ್ಯಾಸಿ ಕಲಕತ್ತೆಯಿಂದ ನೀರಜಾನನ್ನು ಕರೆದುಕೊಂಡು ಕಾನಪುರಕ್ಕೆ ಹೊರಟಿದ್ದ. ಈ ಸಾರೆ ಸುಶಿಲಾನನ್ನು ಕಾಣಬೇಕೆಂಬ ಹಂಬಲವು ಬಲವಾಯಿತು. ಅದರಿಂದ ಅಲಾಹಾಬಾದದಲ್ಲಿ ಎರಡು ದಿನಗಳ ಮಟ್ಟಿಗೆ ಇಳಿದ; ಮುಂದಿಯಿಂದ ಅವಳ ಸಮಾಚಾರ ತಿಳಿದುಕೊಳ್ಳಲು ಬಹಳ ಪ್ರಯಾಸ ಪಟ್ಟ. ಸ್ವತಃ ಹೋಗಿ ಸುಶೀಲಾನನ್ನು ಕಾಣಲು ನಾಚಿಕೆ! ಅಲಾಹಾಬಾದಕ್ಕೆ ಬಂದಮೇಲೆ ಪ್ರಮೋದನ ಯಥಾರ್ಥ ಪರಿಚಯ ಮಾತ್ರ ಆಯಿತು. ಪ್ರಮೋದನ ಕೂಡ ನೀರಜಾನ ವಿವಾಹ ಮಾಡಬೇಕೆಂಬ ಇಚ್ಛೆ ಈಗ ಹೆಚ್ಚಿತು. ಮರುದಿವಸವೇ ದಯಾನಂದನು ಮಗಳನ್ನು ಕರೆದುಕೊಂಡು ಕಾನಪುರಕ್ಕೆ ಹೊರಟ. ಸುಶೀಲಾನ ದರ್ಶನಾಪೇಕ್ಷೆಮಾತ್ರ ಕಡಿಮೆಯಾಗಲಿಲ್ಲ. ಸ್ವಲ್ಪ ದಿವಸಗಳ ತರುವಾಯ ಯಾಮಿನಿ ಬಂದು ಪ್ರಮೋದನಿಗೆ ನೀರಜಾನನ್ನು ಕೊಡುವ ಬಗ್ಗೆ ಮಾತೆತ್ತಿದ. ಆಗ ಸಂನ್ಯಾಸಿ ನಾಚಿಕೆಯನ್ನು ತೊರೆದು ಸುಶೀಲಾನಿಗೆ ಭೆಟ್ಟಿಯಾಗಲು ಅಲಾಹಾಬಾದಕ್ಕೆ ಹೊರಟ. ಆದರೇನು? ಅಲಾಹಾಬಾದಕ್ಕೆ ಬಂದಮೇಲೆ ಅವನು ಬಯಸಿದುದನ್ನು ನೋಡಿದ. ಹೀಗಾಗುವುದೆಂದು ಅವನಿಗೆ ಗೊತ್ತಾಗಿದ್ದರೆ ಅವನು ಬರುತ್ತಿರಲೇ ಇಲ್ಲ.

ಚಿರವಿರಹಿಣೀಭಾರ್ಯೆ ಆತನನ್ನು ಕಡೆತನಕ ಅಗಲಿದಳು!

## ಕನಕಲತಾ ಮುಳುಗಿದಳು

ಸುಶೀಲಾ ತೀರಿಕೊಂಡಳು. ಕನಕನ ಹೃದಯಕ್ಕೆ ಕೊಡಲಿಯು ಪೆಟ್ಟು ಬಿದ್ದಂತಾಯಿತು. ಈಗ ಅವಳು ಪೂರ್ಣ ಅನಾಥಳಾದಳು. ಅವಳು ಸಣ್ಣವಳಿದ್ದಾಗಲೇ ತಾಯಿ ತೀರಿಕೊಂಡಳು. ಅಂದಿನಿಂದ ಸುಶೀಲಾನಿಗೇ ಅವ್ವಾ ಎಂದು ಕರೆಯುತ್ತಿದ್ದಳು. ಇನ್ನು ತನ್ನನ್ನು ಜೋಪಾನ ಮಾಡುವವರೇ ಇಲ್ಲದಾವರಲ್ಲ ಎಂದು ಯೋಚನೆಗೊಳಗಾದಳು, ಪಾಪ ಚಿಕ್ಕವಳು. ದುಃಖದಿಂದ ಸುಶೀಲಾನ ಮೃತ್ಯುಶಯ್ಯೆಯಮೇಲೆ ಬವಳಿಬಂದು ಬಿದ್ದಳು; ಅವಳು ಎಚ್ಚತ್ತಬಳಿಕ ನೋಡುತ್ತಾಳೆ, ಆ ಹಾಸುಗೆಯ ಮೇಲೆ ಸುಶೀಲಾ ಇದ್ದಿಲ್ಲ.

ಅವಳಿಗೆ ಆಶ್ಚರ್ಯವೆನಿಸಿತು, ಎದ್ದು ನಿಂತಳು. ಅಶ್ರು ಪೂರ್ಣನೇತ್ರಗಳೆರಡನ್ನೂ ಸೆರಗಿನಿಂದ ಒರಸಿಕೊಳ್ಳುತ್ತ ಹೊರಗೆ ಬಂದಳು. ದಾಸ-ದಾಸಿಯರು ಸುಶೀಲಾನ ಮೃತದೇಹವನ್ನು ಸಂಸ್ಕಾರಕ್ಕೆ ನದಿಯ ದಂಡೆಗೆ ಒಯ್ಯಲು ಸಿದ್ಧತೆ ನಡಿಸಿದ್ದರು. ಮೃತದೇಹವು ನದಿಗೆ ಹೊರಟಿತು. ಯಾರೂ ಅದನ್ನು ಅಡ್ಡ ಬಂದು ತಡೆಯಲಿಲ್ಲ. ಹೊತ್ತು ಮುಳುಗಿತು, ಕತ್ತಲೆಯ ರಾತ್ರಿ, ಅಂಥದರಲ್ಲಿಯೇ ಪಾಪ ಕನಕ ನದಿಯ ದಂಡೆಗೆ, ಮಸಣಗಟ್ಟೆಗೆ ಹೋದಳು. ಇನ್ನೂ ಅಗ್ನಿಸಂಸ್ಕಾರವಾಗಿದ್ದಿಲ್ಲ. ಕನಕಲತಾ ನಿಂತುಕೊಂಡು ಒಂದೇಸವನೆ ಮೃತದೇಹವನ್ನು ನಿರೀಕ್ಷಿಸಹತ್ತಿದಳು!

ಯಥಾಸಮಯಕ್ಕೆ ಚಿತೆಗೆ ಕೊಳ್ಳಿಯಿಟ್ಟರು. ಸುಶೀಲಾನ ಮೃತ ಶರೀರವು ಸುಡಹತ್ತಿತು. ಮತ್ತೆ ಹೆಚ್ಚು ನೋಡುವುದು ಅವಳಿಗೆ ಆಗಲಿಲ್ಲ. ಇಷ್ಟುಹೊತ್ತಿನವರೆಗೆ ಅವಳು ಕಣ್ಣೀರಿನ ಪ್ರವಾಹವನ್ನು ತಡೆದು ಹಿಡಿದಿದ್ದಳು. ಆದರೆ ಅದನ್ನು ಬಹಳ ಹೊತ್ತಿನವರೆಗೆ ತಡೆದು ಹಿಡಿಯುವುದಾಗಲಿಲ್ಲ. ಉನ್ಮತ್ತರಂತೆ ಅವಳು ಅಳುತ್ತ ಆ ಸ್ಥಳದಿಂದ ಮನೆಯ ಕಡೆಗೆ ಹೊರಟಳು. ಅವಳು ಹಾಗೇ ಮನೆಗೆ ಹೋಗುವುದನ್ನು ನೋಡಿ ಒಬ್ಬ ದಾಸಿ--" ಹೀಗೆಯೇ ಮನೆಗೆ ಹೋಗಬಾರದು, ಮೈ ತೊಳೆದುಕೊಳ್ಳಿರಿ, ಆಮೇಲೆ ಹೋಗೋಣ" ಎಂದು ಹೇಳಿದಳು.

ಕನಕನ ಜ್ಞಾನಶಕ್ತಿ ಈಗ ಲೋಪವಾಗಿದ್ದಿತು. ದಾಸಿ ಹೇಳಿದುದರಿಂದ ಅವಳು ಮತ್ತೆ ನದಿಯ ಕಡೆಗೆ ಹೊರಟಳು. ಸುತ್ತಲೂ ಕತ್ತಲೆಯ ಮೊತ್ತವಿತ್ತು. ಏನೂ ಕಾಣಿಸುತ್ತಿದ್ದಿಲ್ಲ. ಕೇವಲ ಮೇಲೆ ಆಗಸ, ಕೆಳಗೆ ನೆಲ ಇವಿಷ್ಟೇ ಕಾಣಿಸುತ್ತಿದ್ದುವು. ನೋಡಿದತ್ತೆಲ್ಲ ನೀರೇ ನೀರು ಕಾಣುತ್ತಿತ್ತು. ತಾರಕಪೂರ್ಣ ಆಕಾಶವು ನದಿಯಲ್ಲಿ ಪ್ರತಿಬಿಂಬಿತವಾಗಿ ನದಿಯ ಆ ನೀಲವರ್ಣದ ನೀರನ್ನು ಮತ್ತಿಷ್ಟು ಗಂಭೀರ ಮಾಡುತ್ತಿತ್ತು. ಆಕಾಶಲೋಕವಲ್ಲದೆ ನದಿಯಲ್ಲಿ ನಿಂತುಕೊಂಡಿದ್ದ ಒಂದು ನಾವೆಯ ದೀಪವೂ ಆಗಾಗ ಬೆಳಕು ಕೊಡುತ್ತಿತ್ತು. ಕನಕ ಆ ದೀಪವನ್ನು ನೋಡುತ್ತ ನದಿಯೊಳಗೆ ಇಳಿದಳು. ತುಸು ಹೊತ್ತಿನಲ್ಲಿಯೇ ಆ ದೀಪವೂ ಮಾಯವಾಯಿತು. ಆ ಅನಂತವಾದ ಜಲ ರಾಶಿಯೊಳಗೆ ಇದ್ದ ಒಂದು ದೀಪವೂ ಕಣ್ಣಿಗೆ ಕಾಣದಂತಾಯಿತು! ಆದರೆ ಕನಕನ ಸಂಸಾರರೂಪಿ ಸಮುದ್ರಕ್ಕೆ ಸುಶೀಲಾರೂಪಿ ಒಂದೇ ದೀಪವಿದ್ದಿತು.

ಅದೂ ಈಗ ಆರಿತು. ಕನಕನಿಗೆ ಯಾರಿದ್ದರೇನು? ಭಾವನಾಪೀಡಿತಳಾದ ಆವಳು ಕಷ್ಟದಿಂದ ಮನಸ್ಸಿನೊಳಗೆಯೇ ದೇವರನ್ನು ಭಜಿಸಹತ್ತಿದಳು. ಆಗ ಸವು ನಿಃಶಬ್ದವಾಗಿತ್ತು, ಗಂಭೀರವಾಗಿತ್ತು, ಶೋಭಾಯಮಾನವಾಗಿತ್ತು. ಕನಕ ಲತಾ ನಿಟ್ಟಿಸಿಯೇ ನಿಟ್ಟಿಸಿದಳು. ತಾರಾಗಣವು ತನ್ನ ದುಃಖವನ್ನು ನೋಡಿ ನಗುವುದೆಂದು ಅವಳು ಭಾವಿಸಿದಳು ಒಮ್ಮೆಲೇ ಆ ಅಗಣಿತ ತಾರೆಗಳಲ್ಲಿ ಒಂದು ಸರ್ರನೇ ಎಲ್ಲಿಯೋ ಹೋಗಿ ಬಿದ್ದಿತು. ಕನಕನು ಆಲೋಚಿಸಹತ್ತಿ ದಳು:--ಒಂದು ತಾರೆ ಕಡಮೆಯಾದರೆ ಜನರಿಗೇನು ಗೊತ್ತಾಗುವುದು! ಅಸಂಖ್ಯ ತಾರೆಗಳಲ್ಲಿ ಒಂದು ಕಡಮೆಯಾದರೆ ಯಾರಿಗೇನು ಹಾನಿಯಾಗು ವುದು. ಈ ವಿಶಾಲವಾದ ಜಗತ್ತಿನಲ್ಲಿ ನನ್ನ ಪಾಡೂ ಅದೇ ರೀತಿಯಾಗಿದೆ. ನಾನು ಜಗತ್ತನ್ನು ತೊರೆದು ಹೋದರೆ ಯಾರಿಗೆ ತಾನೇ ಹಾನಿಯಾಗುವುದು! ಯಾರು ನೆನೆಸುವರು! ಇದೇ ಪ್ರಕಾರ ಆಲೋಚನೆ ಮಾಡುತ್ತ ಮಾಡುತ್ತ ವಿಕ್ಷಿಪ್ತ ಕನಕನು ನೀರಿನಲ್ಲಿಳಿಯುತೊಡಗಿದಳು. ಪಾವಟಿಗೆಗಳೆಲ್ಲ ತೀರಿ ಹೋಗಿದ್ದುವೆಂಬುದರ ಕಡೆ ಕನಕನ ಲಕ್ಷ್ಯವೇ ಇರಲಿಲ್ಲ. ಅವಳು ಮುಂದೆ ಒಂದು ಅಡಿಯನ್ನಿಟ್ಟಳು. ಕೂಡಲೇ ನದಿಯ ಅನಂತ ಜಲದೊಳಗೆ ಮುಳುಗಿ ಹೋದಳು!

ಅವಳ ಕೂಡ ಇದ್ದ ದಾಸಿಯರು ಅಳುತ್ತ ಚೀರುತ್ತ ಗಾಬರಿಯಿಂದ ಮನೆಗೆ ಬಂದರು.

## ಈಶ್ವರನ ಕೈ

ಬೆಳಗಿನವೇಳೆ. ಮಂದಪವನೆಯಿಂದ ಮೆಲ್ಲನೆ ಮುಂದೆ ಸಾಗುತ್ತ ನದಿಯಲ್ಲಿ ಒಂದು ಸುಂದರ ನಾವೆ ತೆರೆಗಳನ್ನೆಬ್ಬಿಸುತ್ತ ಹೋಗುತ್ತಿದೆ. ನಾವೆಯಲ್ಲಿ ಎರಡು ಕೋಣೆಗಳಿವೆ. ಒಂದು ಕೋಣೆಯೊಳಗೆ ಒಂದು ಸಣ್ಣ ಪಲ್ಲಂಗವಿದೆ. ಅದರ ಮೇಲೆ ಒಬ್ಬ ರೋಗಿ ಮಲಗಿದ್ದಾಳೆ. ಹತ್ತಿರದಲ್ಲಿಯೇ ಎರಡು ಕುರ್ಚಿ ಗಳ ಮೇಲೆ ಇಬ್ಬರು ತರುಣರು ಕುಳಿತುಕೊಂಡಿದ್ದಾರೆ. ಕೆಳಗೆ ಒಬ್ಬ ದಾಸಿಯೂ ಕುಳಿತುಕೊಂಡಿದ್ದಾಳೆ. ಒಬ್ಬನು ಇನ್ನೊಬ್ಬನನ್ನು—“ ಮಹನೀ ಯರೆ, ಇಂದು ಹೇಗಿದೆ? ಉಳಿಯುವ ಆಶೆಯೇನಾದರೂ ಇದೆಯೇ?” ಎಂದು ಕೇಳಿದ.

" ಎರಡು ದಿನಗಳಿಗಿಂತ ಇಂದು ಸ್ವಲ್ಪ ಗುಣವಿದೆ. ಆದರೂ ಇದೊಂದು ದಿವಸ ಏನನ್ನೂ ಹೇಳಲು ಬರುವಂತಿಲ್ಲ. " ಚಿಕಿತ್ಸಕನು ಹೇಳಿದ.

ಇಳಿಹೊತ್ತಾಗಹತ್ತಿತು. ತರುಣನು ವಿಶೇಷವಾಗಿ ಯಾವಾಗಲೂ ರೋಗಿಯ ಹತ್ತಿರವೇ ಕುಳಿತಿರುತ್ತಿದ್ದ. ಆವಶ್ಯಕತೆಯಿರದಿದ್ದರೂ ಆಗಾಗ ನಾಡಿಯನ್ನು ನೋಡುತ್ತಿದ್ದ. ಒಮ್ಮೆ ಹಣೆಯಮೇಲೆ ಕೈಯಿಡುತ್ತಾನೆ, ಮತ್ತೊಮ್ಮೆ ಚಿಕಿತ್ಸಕನನ್ನು ರೋಗಿಯ ಸ್ಥಿತಿಯನ್ನು ಕುರಿತು ಕೇಳುತ್ತಾನೆ. ಚಿಕಿತ್ಸಕನು ಧೈರ್ಯಕೊಡುತ್ತಿದ್ದಾನೆ.

ಇದೇ ಪ್ರಕಾರ ಮೂರು ನಾಲ್ಕು ದಿನಗಳು ಕಳೆದುವು. ರೋಗಿಯ ಬೇನೆ ಕ್ರಮೇಣ ಕಡಮೆಯಾಗಹತ್ತಿತು. ಮೂರು-ನಾಲ್ಕು ದಿನಗಳಾದಮೇಲೆ ಅವಳಿಗೆ ಮೈಮೇಲೆ ಪ್ರಜ್ಞೆಯೂ ಬಂದಿತು. ಕನಕಲತಾ ಅವಳು ಆ ತರುಣನನ್ನು ದಿಟ್ಟಿಸಿ ನೋಡಹತ್ತಿದಳು. ತಾನು ಇಬ್ಬರು ಅಪರಿಚಿತ ತರುಣರ ನಡುವೆಯಿದ್ದುದನ್ನು ಕಂಡು ಬೆರಗಾದಳು. ಕ್ರಮಶಃ ಅವಳಿಗೆ ಎಲ್ಲ ಸಂಗತಿ ತಿಳಿಯಿತು. ಸುಶೀಲಾನ ಮೃತ್ಯು, ತಾನು ಅದೇ ದಿವಸ ನದಿಯಲ್ಲಿ ಮುಳುಗಿದುದು ಅವಳಿಗೆ ಸ್ಮರಣವಾಯಿತು. ಆಮೇಲೆ ಅವಳಿಗೆ ಏನೂ ನೆನಪಿಗೆ ಬರಲಿಲ್ಲ. ಇವರೇ ನನ್ನನ್ನು ನೀರೊಳಗಿಂದ ತೆಗೆದಿರಬೇಕೆಂದು ಬಗೆದಳು. " ಇವರು ಯಾರು ? ಇವರು ನನ್ನನ್ನೇಕೆ ಉಳಿಸಿದರು ? ನಾನು ಸತ್ತು ಹೋಗಿದ್ದರೆ ಎಲ್ಲ ಕಷ್ಟಗಳನ್ನು ನೀಗುತ್ತಿದ್ದೆ ! ಇವರು ಮತ್ತೇಕೆ ಕಷ್ಟಪಡಲು ನನ್ನನ್ನು ಉಳಿಸಿದರು ? " ಹೀಗೆ ವಿಚಾರಮಾಡುತ್ತ ಮಾಡುತ್ತ ತನ್ನ ಆರೈಕೆ ಮಾಡುತ್ತಿದ್ದ ತರುಣನಮೇಲೆ ದೊಪ್ಪನೆ ಬಿದ್ದಳು. ಸುತ್ತಲೂ ಬಿರಿಬಿರಿ ನೋಡತೊಡಗಿದಳು. ಪಾಂಡುವರ್ಣದ ಮುಖಮಂಡಲವೂ ಸ್ವಲ್ಪ ಉಜ್ವಲವಾಯಿತು.

" ನೀವು ಈಗ ಹೇಗಿದ್ದೀರಿ ? " ತರುಣನು ಮೆಲ್ಲಗೆ ಕೇಳಿದ.

ಈ ವೇಳೆಯಲ್ಲಿ ಚಿಕಿತ್ಸಕರು ಬೇರೆ ಕೋಣೆಯೊಳಗಿದ್ದರು. " ಈಗ ಮಾತನಾಡಿಸಬೇಡಿರಿ. ಇನ್ನೂ ಅವರು ಬಹಳ ಅಶಕ್ತರಿದ್ದಾರೆ. " ಒಮ್ಮೆಲೇ ಅಲ್ಲಿಗೆ ಬಂದು ಚಿಕಿತ್ಸಕರು ಹೇಳಿದರು. ತರುಣನ ಕರುಣಾ ಪೂರ್ಣ ಹಾಗೂ ಉತ್ಸುಕ ಧ್ವನಿಯನ್ನು ಕೇಳಿ ಕನಕನು ಕಣ್ಣನ್ನು ಮೇಲಕ್ಕೆತ್ತಿದಳು. ಅವಳು ಸ್ವಲ್ಪ ಆಶ್ಚರ್ಯ ಸಂದೇಹಗಳಿಂದ ತರುಣನ ಕಡೆಗೆ ನೋಡಿದಳು. ಸುಶೀಲಾ

ನನ್ನುಳಿದು ಕನಕನಸಲುವಾಗಿ ಯಾರೂ ಚಿಂತಿಸುವವರಿದ್ದಿಲ್ಲ. ಇಂದು ಈ ತರುಣನು ಅವಳಿಗಾಗಿ ಕಾತರನಾಗಿದ್ದಾನೆ. ಇದನ್ನು ನೋಡಿ ಕನಕನು ಕನಸೆಂದು ತಿಳಿದಳು.

* * * *

ಒಂದು ತಿಂಗಳಮೇಲೆ ಕನಕನಿಗೆ ಸಂಪೂರ್ಣ ಗುಣವಾಯಿತು, ಇಷ್ಟರಲ್ಲಿ ತರುಣನೊಡನೆ ಅವಳ ಪರಿಚಯುವೂ ಆಯಿತು. ಅವನು ನಾವೆಯನ್ನು ಅಲಾಹಾಬಾದದ ಕಡೆಗೆ ತಿರುಗಿಸಲು ಅಪ್ಪಣೆಕೊಟ್ಟ. ಮೆಲ್ಲ-ಮೆಲ್ಲಗೆ ಅವಳು ನಾಚಿಕೆಯನ್ನು ತೊರೆದು ಅವನೊಡನೆ ಒಂದೆರಡು ಮಾತನಾಡಲು ಆರಂಭಿಸಿದಳು. ತರುಣನ ಆಗ್ರಹಕ್ಕಾಗಿ ಕನಕನು ತನ್ನ ಎಲ್ಲ ಇತಿಹಾಸವನ್ನೂ ಹೇಳಿದಳು. ಪೂರ್ಣಪರಿಚಯು ಹೇಳದೆ ಆ ತರುಣನು ಅವಳನ್ನು ಅವಳ ಆತ್ಮೀಯರಿಗೆ ಹೇಗೆ ತಾನೆ ಒಪ್ಪಿಸಬಲ್ಲ?

ಹೀಗೆಯೇ ಮಾತುಕತೆ ನಡೆದಾಗ ತರುಣನೊಂದು ದಿವಸ ಕೇಳಿದ. " ನಿಮ್ಮ ತಂದೆ ತೀರಿಕೊಂಡಾಗ ನೀವು ಎಷ್ಟು ವರುಷದವರಿದ್ದಿರಿ? ಆಗ ನಡೆದುದು ನಿಮಗೆ ನೆನಪಿದೆಯೇ?"

" ನನಗೆ ಮಸು-ಮಸು ನೆನಪಿದೆ. ಆಗ ನನಗೇನೂ ಹೆಚ್ಚು ವಯಸ್ಸಿರಲಿಲ್ಲ. ನಾಲ್ಕು-ಐದು ವರುಷದವಳಿರಬಹುದು." ಕನಕ ಹೇಳಿದಳು.

"ಓಹೊ! ನಿಮಗೆ ಆಗಿನಮಾತೂ ನೆನಪಿದೆಯೆ? ವಯಸ್ಸು ಸಣ್ಣದು—ಇದು ಆಶ್ಚರ್ಯ!" ತರುಣನು ಕೇಳಿದ.

" ಒಂದುವೇಳೆ ಗಂಡುಮಕ್ಕಳಂತೆ ನಾನೂ ಸುಖದಿಂದ ಕಾಲಕಳೆದಿದ್ದರೆ, ನನಗೂ ಆಗಿನ ಮಾತು ನೆನಪಿರುತ್ತಿರಲಿಲ್ಲ" ಎಂದಳು ಕನಕಲತಾ.

" ಕನಕ, ನಿಮ್ಮ ಮಾತನ್ನು ಕೇಳಿ ನನಗೆ ಬಹಳ ದುಃಖವೆನಿಸಿತು. ನೀವು ಸಣ್ಣವರಿದ್ದಾಗ ನಿಮಗೆ ಯಾರೂ ಮರ್ಯಾದೆ ಕೊಡಲಿಲ್ಲವೆ?" ತರುಣನು ನೊಂದುಕೊಂಡು ಹೇಳಿದ.

" ನನಗಂತೂ ನೆನಪಿಲ್ಲ, ಯಾರಾದರೂ ಕೊಟ್ಟಿದ್ದರೆ ಅವಶ್ಯ ನೆನಪು ಉಳಿಯುತ್ತಿದ್ದಿತು." ಕನಕ ಹೇಳಿದಳು.

ಈ ಮಾತನ್ನು ಕೇಳುತ್ತಲೇ ತರುಣನ ಕಣ್ಣಲ್ಲಿ ನೀರೂರಿತು. ಇದನ್ನು ಕಂಡು ಕನಕನಿಗೆ ಆಶ್ಚರ್ಯವೆನಿಸಿತು. ಕನಕನ ಬಾಲ್ಯಕಾಲದ ಕಷ್ಟವನ್ನು ಕೇಳಿ

ತರುಣನು ನೊಂದುಕೊಂಡ. ಕನಕನ ದುಃಖವನ್ನು ಕಂಡು ಇಂದಿನವರೆಗೆ ಯಾರೂ ಒಂದು ಹನಿ ಕಣ್ಣೀರು ಹಾಕಿದ್ದಿಲ್ಲ. ವಿಸ್ಮಯದಿಂದ ಕನಕನು ತರುಣನ ಕಡೆಗೆ ನೋಡಹತ್ತಿದಳು.

“ ಕನಕ, ಸರಿಯಾಗಿ ವಿಚಾರಮಾಡಿ ನೋಡಿರಿ. ಯಾರೂ ಎಂದೂ ನಿಮ್ಮನ್ನು ಬಾಲ್ಯಕಾಲದಲ್ಲಿ ಆದರದಿಂದ ಕಂಡಿಲ್ಲವೆ ? ” ತುಸು ಹೊತ್ತಿನ ತರುವಾಯ ತರುಣನು ಕಣ್ಣೀರನ್ನೊರೆಸಿಕೊಳ್ಳುತ್ತ ಹೇಳಿದ.

ಕನಕ—“ ಇಲ್ಲ, ನನಗಂತೂ ನೆನಪಿಲ್ಲ. ಹಾಂ, ಆದರೆ ನಾನು ಸಣ್ಣವಳಿದ್ದಾಗ ಒಬ್ಬ ಅಪರಿಚಿತ ಮನುಷ್ಯರು ನನ್ನಮೇಲೆ ಅವಶ್ಯ ದಯೆತೋರಿಸಿದ್ದರು.—ಸರಿ, ಅದನ್ನು ಬಿಟ್ಟು ಮತ್ತೆ ನನಗೆ ಯಾವುದೂ ಗೊತ್ತಿಲ್ಲ. ”

ತರುಣ—“ ಎಂಥ ದಯೆ ಕನಕ ಅದು ? ”

ಕನಕ—“ ನನಗೆ ಅಂಥ ದಯೆ ಎಲ್ಲಿಯೂ ತೋರುವಾವರೂ ಸಿಗಲಿಲ್ಲ. ಅದಕ್ಕಿಂತ ಮೊದಲೂ ಯಾರೂ ಎಂದೂ ನನ್ನ ಪಕ್ಷ ಹಿಡಿದಿದ್ದಿಲ್ಲ. ಆಮೇಲೆ ನಾನು ದಾಸಿಯಕೂಡ ಅಲಾಹಾಬಾದಕ್ಕೆ ಹೋದೆ. ಅಲ್ಲಿ ನನಗೆ ಮಾನವು ಸಿಗಹತ್ತಿತು. ಆದರೆ ಏಕೋ ನನಗೆ ಬಾಲ್ಯದ ಹಿಂದಿನ ಆ ಆದರವು ಇಂದಿಗೂ ಮರೆವು ಆಗಿಲ್ಲ. ”

ಇಷ್ಟು ಹೇಳಿ ಕನಕನು ಮುಂಬಯಿಯಲ್ಲಿ ನಡೆದುಹೋದ ಹಿಂದಿನ ಘಟನೆಯನ್ನು ಹೇಳಿದಳು. ಆಗ ಪ್ರಮೋದನು ಹೊಡೆಯಲು ಓಡಿದಾಗ ಹಿರಣ್ಯಕುಮಾರರು ಅವಳ ಪಕ್ಷವನ್ನು ಹಿಡಿದು ಅವಳನ್ನು ಉಳಿಸಿದ್ದ ಸಂಗತಿಯನ್ನೂ ಅವಳು ಹೇಳದಿರಲಿಲ್ಲ. ಇಷ್ಟು ಸಣ್ಣ ಸಂಗತಿ ನೆನಪಿನಲ್ಲಿಟ್ಟುದನ್ನು ನೋಡಿ ತರುಣನಿಗೆ ಆಶ್ಚರ್ಯವೆನಿಸಿತು.

“ ಕನಕಲತಾ, ನೀವು ಬದುಕಿದುದ ಸುದ್ದಿಯನ್ನು ನಿಮ್ಮ ಅಣ್ಣನಿಗೆ ಕೊಟ್ಟದ್ದೇನೆ, ಗೊತ್ತಿದೆಯೆ ? ಪ್ರಮೋದನಿಗೆಷ್ಟು ಆನಂದವಾಗಬಹುದೆಂಬುದನ್ನು ಬಲ್ಲಿರಾ ? ” ತರುಣನು ಮಾತು ಬದಲಿಸಿ ಹೇಳಿದ.

“ ಏನು ? ಆನಂದವಾಗಿರಬಹುದೆ ? ” ಕನಕನು ನಿಟ್ಟುಸಿರನ್ನು ಬಿಟ್ಟು ಕೇಳಿದಳು.

“ ಕನಕ, ನೀವು ನಿಮ್ಮ ಮನೆಗೆ ಹೋದೊಡನೆ ಅಣ್ಣನನ್ನು ನೋಡುವಿರಿ. ಆಗ ಅವನಿಗೆ ಎಷ್ಟು ಆನಂದವಾಗಲಿಕ್ಕಿಲ್ಲ. ” ತರುಣನು ಮತ್ತೆ ಹೇಳಿದ.

"ಹೂಂ, ಬಹಳ ಆನಂದವಾಗುವುದು." ಕನಕನು ನಾಚುತ್ತಲೇ ಮಾತನಾಡಿದಳು.

"ಅಲ್ಲಿ—ಸ್ನೇಹದ ರಾಜ್ಯದಲ್ಲಿ—ಪ್ರವೇಶಿಸಿದ ಬಳಿಕ ಒಮ್ಮೆಯಾದರೂ ಈ ಅಪರಿಚಿತ ಮನುಷ್ಯನನ್ನು ನೆನೆಸುವಿರಾ ?" ತರುಣನು ಕೇಳಿದ.

ಕನಕನಿಗೆ ಈ ಮಾತಿಗೆ ಉತ್ತರಕೊಡುವುದಾಗಲಿಲ್ಲ.—ಅವಳು ಭಾವಪೂರ್ಣದೃಷ್ಟಿಯಿಂದ ತರುಣನ ಕಡೆಗೆ ನೋಡಹತ್ತಿದಳು. ತರುಣನ ಬಾಯಿಂದ ಈ ಪ್ರಶ್ನೆ ಹೊರಬಿದ್ದಕೂಡಲೇ ಕನಕನ ಕಣ್ಣಿನಿಂದ ಕಣ್ಣೀರು ಧಾರೆಯಾಗಿ ಸುರಿಯಹತ್ತಿದುವು. ಅವನ್ನು ಮುಚ್ಚಿಕೊಳ್ಳಲು ಅವಳು ಎದ್ದು ಕೋಣೆಯಿಂದ ಹೊರಗೆ ಹೋದಳು.

## ಮಿಲನ

ಇದೇ ಪ್ರಕಾರವಾಗಿ ನಾವಿನಲ್ಲಿಯೇ ದಿನಗಳು ಕಳೆಯಹತ್ತಿದುವು. ಕನಕನು ಬಿಚ್ಚುಮನಸ್ಸಿನಿಂದ ತರುಣನ ಕೂಡ ಮಾತನಾಡುತ್ತಿದ್ದಳು. ಅವಳ ಆಯುಷ್ಯದಲ್ಲಿಯೇ ಇಷ್ಟು ಪ್ರೇಮದಿಂದ ಕುಳಿತುಕೊಂಡು ಯಾರೂ ಅವಳ ಮಾತನ್ನು ಕೇಳಿದ್ದಿಲ್ಲ. ಸಣ್ಣವರಿದ್ದಾಗ ಎಂದಾದರೂ ಪ್ರಮೋದನಿಗೆ ಏನಾದರೂ ಹೇಳಲು ಹೋದರೆ ಪ್ರಮೋದ ಕೂಡಲೆ "ಕೆಲಸವಿದೆ"—ಎಂದು ಎದ್ದು ನಿಲ್ಲುತ್ತಿದ್ದ. ಈಗ ಒಬ್ಬ ಅಪರಿಚಿತ ವ್ಯಕ್ತಿಯ ಮುಂದೆ ತನ್ನ ಮನಸ್ಸಿನ ಸ್ಥಿತಿಯನ್ನು ಹೇಳುವುದರಿಂದ ಅವಳಿಗೆ ಒಂದು ಬಗೆಯ ಆನಂದವೆನಿಸುತ್ತಿತ್ತು. ಅವಳ ಜೀವನದಲ್ಲಿಯೇ ಇದು ಹೊಸ ಆನಂದ! ತರುಣನಾದರೂ ಆದರಪೂರ್ವಕವಾಗಿ ಕನಕನ ಕರುಣಕಥೆಯನ್ನು ಕೇಳುತ್ತಿದ್ದ. ಕನಕನ ಮಾತುಗಳಲ್ಲಿ ಅವನಿಗೆ ಒಂದು ಬಗೆಯ ಆನಂದವೆನಿಸುತ್ತಿತ್ತು. ಅವನಿಗೆ ಇಷ್ಟು ಆನಂದವು ಎಂದೂ ಯಾರ ಮಾತಿನಲ್ಲಿಯೂ ಎನಿಸಿದ್ದಿಲ್ಲ. ಕನಕನ ಮಾತು ತರುಣನಿಗೆ ಬಹಳ ಮಧುರವೆನಿಸುತ್ತಿದ್ದುವು. ಇಂಥ ಮಾತು ಜಗತ್ತಿನಲ್ಲಿಯೇ ಸಿಗಲು ಸಾಧ್ಯವಿಲ್ಲವೆಂದು ಅವನ ಅಭಿಮತ. ಮಾತನಾಡುತ್ತಿರುವಾಗಲೇ ತರುಣನು ಯಾವುದಾದರೊಂದು ಕೆಲಸಕ್ಕೆ ಬೇರೆ ಕಡೆಗೆ ಎದ್ದು ಹೋದರೆ, ಆಗ ಕನಕನ ಹೃದಯದೊಳಗೆ ಮಹಾಪಿಪ್ಲವವೇಳುತ್ತಿತ್ತು. ಸಮಸ್ತ ಸ್ಫೂರ್ತಿ ಮಾಯವಾಗುತ್ತಿತ್ತು. ಎಷ್ಟು ಹೊತ್ತಿಗೆ ತಿರುಗಿಬರುವರೊ ಏನೊ, ಯಾವಾಗ

ನನ್ನ ಮಾತನ್ನು ಮುಗಿಸುವೆನೊ, ಕನಕನು ಇದೇ ಆಲೋಚನೆಯಲ್ಲಿರುತ್ತಿದ್ದಳು. ತರುಣನು ತಿರುಗಿ ಬಂದರೆಯೇ ಅವಳಿಗೆ ಸಂತೋಷ. ಅವನು ತಿರುಗಿ ಬಂದೊಡನೆಯೇ ಮಾತನ್ನು ನಿಲ್ಲಿಸಿ, ನೀರವ ನೇತ್ರಗಳಿಂದ ನೋಡತೊಡಗುತ್ತಿದ್ದಳು. ಮನಸ್ಸಿನೊಳಗೆಯೇ ಎಂದುಕೊಳ್ಳುತ್ತಿದ್ದಳು—ಇಲ್ಲ, ಇಲ್ಲ! ನನ್ನನ್ನು ನೋಡಿದರೆ, ನನ್ನ ಕೂಡ ಮಾತನಾಡಿದರೆ ನಿಮಗೇಕೆ ಆನಂದವೆನಿಸೀತು; ಆದರೂ ನನ್ನ ಮನಸ್ಸು ಏಕೊ ನಿಮ್ಮ ಕೂಡ ಮಾತನಾಡಲು ಹಾತೊರೆಯುತ್ತದೆ! ತರುಣನು ಅವಳ ಮನಸ್ಸಿನ ಭಾವವನ್ನು ತಿಳಿದುಕೊಳ್ಳುತ್ತಿದ್ದ—"ಕನಕ, ಬಹಳ ಅವಶ್ಯಕ ಕೆಲಸವೊಂದಿತ್ತು, ಅದಕ್ಕಾಗಿಯೇ ಹೋಗಿದ್ದೆ. ನೋಡು, ಕೆಲಸವನ್ನು ಹಾಗೆಯೇ ಬಿಟ್ಟು ಹೊರಟುಬಂದೆ" ಕರುಣಸ್ವರದಿಂದ ತರುಣನು ಹೇಳುತ್ತಿದ್ದ. ಕನಕಲತಾ ಕೂಡಲೇ ಎಲ್ಲವನ್ನೂ ಮರೆಯುತ್ತಿದ್ದಳು. ಮತ್ತೆ ತನ್ನ ಮಾತಿನ ಸುರಿಮಳೆಯನ್ನು ಆರಂಭಮಾಡುತ್ತಿದ್ದಳು. ಕನಕನ ಸುಖದಿನಗಳು ಬಹಳ ಕಾಲದವರೆಗೆ ಇರಲಿಲ್ಲ. ಕನಕನನ್ನು ಪ್ರಮೋದನಿಗೊಪ್ಪಿಸಲು ಅಲಾಹಾಬಾದಕ್ಕೆ ತರುಣನು ಬರುತ್ತಲಿದ್ದ. ಹೊತ್ತಿಗೆ ಸರಿಯಾಗಿ ನಾವೆಯು ಅಲಾಹಾಬಾದವನ್ನು ತಲ್ಪಿತು. ಪ್ರಮೋದನಿಗೆ ಅವರು ಬರುವುದು ಗೊತ್ತಿದ್ದುದರಿಂದ ಘಟ್ಟದಮೇಲೆ ಅವರ ಹಾದಿಯನ್ನು ನೋಡುತ್ತ ನಿಂತಿದ್ದ. ಕನಕನನ್ನು ಅಗಲಿ ಬಹಳ ದಿನಗಳಾಗಿದ್ದುವು. ಎಂದೂ ಕಾಣುವ ಆಶೆಯೇ ಇದ್ದಿಲ್ಲ ಅವನಿಗೆ. ಕಣ್ಣುಮುಚ್ಚಿ ಕಣ್ಣುತೆರೆಯುವುದರೊಳಗೆಯೇ ನಾವು ದಂಡೆಗೆ ಬಂದು ನಿಂತಿತು ಪ್ರಮೋದನು ಕನಕನ ರಕ್ಷಣೆ ಮಾಡಿದ ತರುಣನಿಗೆ ಧನ್ಯವಾದಗಳನ್ನು ಸಲ್ಲಿಸಲು ಆತುರದಿಂದ ಮುಂದೆ ಹೋದ. ಆದರೆ ಹತ್ತಿರ ಹೋದಕೂಡಲೇ ನಿಂತುಬಿಟ್ಟ! ಒಮ್ಮೆಲೇ ಏಕೋ ಅವನ ಮನಸ್ಸಿನ ಸ್ಥಿತಿಯೇ ಬದಲಾಯಿತು.

* * * * *

ತಾನು ಅತ್ಯಂತ ತಿರಸ್ಕಾರಮಾಡುತ್ತಿರುವಂಥ, ಕೆಟ್ಟ ಶತ್ರುವೆಂದು ತಿಳಿದುಕೊಂಡಂಥ ಹಿರಣ್ಯಕುಮಾರರೇ ಮುಂದೆ ನಿಂತಿದ್ದಾರೆ. ಕನಕನನ್ನು ಹಿರಣ್ಯಕುಮಾರರು ಉದ್ಧರಿಸಿದರೇ? ದೈವವೇ, ನಿನ್ನ ಲೀಲೆ ಬಹಳ ವಿಚಿತ್ರವಾದುದು! ಪ್ರಮೋದನು ಇಂದು ಹಿರಣ್ಯಕುಮಾರರ ಉಪಕಾರವನ್ನು ಸ್ಮರಿಸಬೇಕಾಯಿತು.

ಹಿರಣ್ಯಕುಮಾರರು ಪ್ರಮೋದನ ಹೃದ್ಗತವನ್ನು ತಿಳಿದುಕೊಂಡರು. ಅದರಿಂದ ಅವರು ಸ್ವಲ್ಪ ವಿಸ್ಮಯಪಟ್ಟರು. ಆದರೆ ಇದರ ಕಾರಣವು ಗೊತ್ತಾಗಲಿಲ್ಲ.

ಆಗ ಹಿರಣ್ಯಕುಮಾರರು ಎಷ್ಟು ಕೆಟ್ಟವರಿದ್ದರೂ ಕನಕನ ಪ್ರಾಣವನ್ನು ಳಿಸಿದ್ದಾರೆಂದಬಳಿಕ ಅವರ ಉಪಕಾರವನ್ನು ಸ್ಮರಿಸಬೇಕೆಂದು ಪ್ರಮೋದನು ವಿಚಾರ ಮಾಡಿದ. ಹಿರಣ್ಯಕುಮಾರರಿಗೆ ನಮಸ್ಕಾರ ಮಾಡಿ ಧನ್ಯವಾದಗ ಳನ್ನರ್ಪಿಸಿ ಪ್ರಮೋದ ಕನಕನನ್ನು ಮನೆಗೆ ಕರೆದುಕೊಂಡು ಹೋದ; ಇತ್ತ ಹಿರಣ್ಯಕುಮಾರರು ಕಲಕತ್ತೆಗೆ ಹೊರಟು ಹೋದರು.

ಏನೇ ಆಗಲಿ, ಪ್ರಮೋದನ ವ್ಯವಹಾರದಿಂದ ಹಿರಣ್ಯಕುಮಾರರಿಗೆ ಆನಂದವೆನಿಸಲಿಲ್ಲ.

*  *  *  *

ಇಷ್ಟು ದಿನಗಳಾದ ಮೇಲೆ ಕನಕನು ಅಣ್ಣನನ್ನು ನೋಡಿ ಆನಂದಿತಳಾದಳು. ಅವಳು ಮನೆಬಿಟ್ಟು ಎರಡು ತಿಂಗಳಾಗಿದ್ದಿತು. ಮನೆಯಲ್ಲಿ ಎಷ್ಟೋ ಬದಲಾವಣೆಯಾದಂತೆ ಅವಳಿಗೆ ಕಾಣಿಸಹತ್ತಿತು. ಅಣ್ಣನ ವಿವಾಹವಾಗಿದೆ. ಮನೆಗೊಬ್ಬ ಹೊಸ ಗೆಳತಿ ಬಂದಿದ್ದಾಳೆ.

ಸುಶೀಲಾನು ತೀರಿಕೊಂಡ ಮೇಲೆ ಪ್ರಮೋದನು ಹೆಂಡತಿಯನ್ನು ಕರೆದು ಕೊಂಡು ಬಂದು ಅಲಹಾಬಾದದಲ್ಲಿಯೇ ಇರಹತ್ತಿದ್ದ. ಈಗ ಆತನು ಕಲಕತ್ತೆಯಲ್ಲಿ ಓದುವುದಿಲ್ಲ. ಸ್ತ್ರೀ, ವಿದ್ಯೆ ಈ ಎರಡೂ ರತ್ನಗಳ ಬೆಲೆ ಏಕಕಾಲಕ್ಕೆಯೇ ಆಗುವುದಿಲ್ಲ. ಪ್ರಮೋದಬಾಬು ಓದಿಗೆ ಶರಣು ಹೊಡೆದ. ಸುಶೀಲಾನು ತೀರಿಕೊಂಡ ತಿಂಗಳಿಗೆಯೇ ಪ್ರಮೋದನ ಮದುವೆಯಾಯಿತು.

“ ಅಣ್ಣನಿಗೆ ಒಬ್ಬ ಬಹಳ ಸುಂದರಿಯಾದ ಹೆಂಡತಿ ಸಿಕ್ಕಳು. ” ನೀರಜಾನನ್ನು ನೋಡಿ ಕನಕ ಹೇಳಿದಳು.

ನೀರಜಾ ಇಲ್ಲಿಗೆ ಬಂದು ಮೂರು ದಿನಗಳಾದುವು. ಕುಲೀನ ಸ್ತ್ರೀಯಂತೆ ಎಲ್ಲ ಕೆಲಸವನ್ನೂ ಮಾಡಹತ್ತಿದ್ದಾಳೆ. ಈಗ ಅವಳು ವನಬಾಲೆಯಲ್ಲ, ವನದೇವಿಯಲ್ಲ. ಪ್ರಮೋದನ ಕೂಡ ಇದ್ದುಕೊಂಡು ಅವಳು ಪಟ್ಟಣದ ಬಹಳ ಮಾತುಗಳನ್ನು ಕಲಿತುಕೊಂಡಿದ್ದಾಳೆ, ಮಂದಿಯ ಮಾನ-ಮರ್ಯಾದೆ ಮಾಡುವುದರಲ್ಲಿ ಹೆಸರಾಗಿದ್ದಾಳೆ. ಅವಳ ಇಚ್ಛಾನುಸಾರ ಗೆಳತಿ

ಸಿಕ್ಕಳು. ಅವರಿಂದ ವನ್ಯಪಶುಗಳನ್ನು ಅವಳು ಕಣ್ಣೆತ್ತಿ ನೋಡುವುದಿಲ್ಲ. ಈಗ ಅವಳು ಯಜಮಾನಿ. ಮನೆಯ ಒಜ್ಜೆ ಅವಳ ತಲೆಯ ಮೇಲೆ. ಆದರಿಂದ ಆವಳಲ್ಲಿ ಆ ಮೊದಲಿನ ಸ್ವಭಾವವಿಲ್ಲ. ವನಪಕ್ಷಿಯಂತೆ ಪಂಜರದಲ್ಲಿದ್ದು ಮನುಷ್ಯನ ಮನಸ್ಸನ್ನು ಪ್ರಸನ್ನಗೊಳಿಸುವುದನ್ನು ಕಲಿತಿದ್ದಾಳೆ.

## ಹೃದ್ಗತ

ಪ್ರಮೋದನ ಕೋಣೆಯೊಳಗೆ ಕುಳಿತು ಕನಕನು ನೀರಜಾನಿಗೆ ಹೇಳಲು ಹಾಕುತ್ತಿದ್ದಾಳೆ. ಪ್ರಮೋದನನ್ನು ಸಂತುಷ್ಟಗೊಳಿಸುವದೇ ಅವಳ ಉದ್ದೇಶ ವಾಗಿದ್ದಿತು. ಆದರೆ ಪ್ರಮೋದನ ಮನಸ್ಸು ಆಕಡೆಗಿದ್ದಿಲ್ಲ. ಕನಕ ಆ ಕಲೆಯಲ್ಲಿ ಸಾಕಷ್ಟು ನಿಪುಣಳಿಲ್ಲ. ಕನಕನು ಆದೆಷ್ಟೋ ಸಾರೆ ಹೇಳಲು ಹಾಕಿದಳು. ಮತ್ತೆ ಬಿಚ್ಚಿದಳು; ಅದು ಪ್ರಮೋದನ ಮನಸ್ಸಿಗೆ ಬರಲಿಲ್ಲ. ಪಾಪ ನೀರಜಾನಿಗೆ ಇದು ಅಸಹ್ಯವೆನಿಸಿತು. ಗಾಬರಿಯಾಗಿ ನೀರಜಾ—"ಇನ್ನು ಸಾಕುಮಾಡಿರಿ, ಹೊತ್ತು ಮುಳುಗಹತ್ತಿತು." ಎಂದು ಹೇಳಿದಳು.

"ನೀವೇನು ಸರಿಯಾಗಿ ಕುಳಿತುಕೊಳ್ಳುವುದೇ ಇಲ್ಲ, ಹೇಗೆ ಹೇಳಲನ್ನು ಹಾಕುವುದು? ಮತ್ತೆ ಮತ್ತೆ ಬಿಚ್ಚಬೇಕಾಯಿತು. ನೀವು ತುಸುಹೊತ್ತಾದರೂ ಸರಿಯಾಗಿ ಕುಳಿತುಕೊಳ್ಳುವುದಿಲ್ಲ" ಕನಕನು ಗದ್ದರಿಸುತ್ತ ಹೇಳಿದಳು.

ನೀರಜಾ—"ಅಲ್ಲರಿ, ಅಡವಿಯ ಹಕ್ಕಿ ಎಂದಾದರೂ ಸ್ಥಿರವಾಗಿ ನಿಲ್ಲಬಹುದೇ? ನೀವೇ ವಿಚಾರ ಮಾಡಿರಿ!"

ಕನಕ—"ಅದಕ್ಕೆಂದೇ ನೀವು ಅಡವಿಯನ್ನು ಬಿಟ್ಟು ಸಂಸಾರಿಗರಾಗಿ ಇಲ್ಲಿಗೆ ಬಂದೀರೇನೋ?"

ನೀರಜಾ—"ಇಲ್ಲ, ಅದೇನು ನನ್ನ ಕೈಯೊಳಗಿನ ಮಾತಾಗಿತ್ತೆ?"

ಕನಕ—"ಅಣ್ಣ ಹಕ್ಕಿಗಳನ್ನು ಹೊಡೆಯಲು ಹೋಗಿದ್ದ, ಆದರೆ ನೀವು ಹೇಗೆ ಅವನಿಗೆ ಸಿಕ್ಕಿರಿ?"

ನೀರಜಾ—"ಇದರೊಳಗೆ ನನ್ನ ಆಗ್ರಹವೇನೂ ಇದ್ದಿಲ್ಲ. ಹೋಗಲಿ ಬಿಡಿ. ಆ ಮಾತೇಕೆ ಈಗ? ಆದಂತಾಗಲಿ, ಬೇಗನೇ ಹೆರಳು ಮುಗಿಸಿಬಿಡಿ."

ಕನಕ–"ಎಲಾ! ಇಷ್ಟು ಬೇಸರಿಕೆಯೆ! ಹೆಳಲು ಚಂದವಾಗುವವರೆಗೆನಾನೇನೂ ಬಿಡುವವಳಲ್ಲ!"

ನೀರಜಾ— “ ನನಗೆ ಇನ್ನು ಕುಳಿತುಕೊಳ್ಳುವುದು ಆಗುವುದಿಲ್ಲ, ತಲೆ ಶೂಲೆಯೆದ್ದಿತು. ”

ಕನಕ— “ ಹಾಗಾದರೆ ಎದ್ದೆ. ನಿಮ್ಮ ಮನಸ್ಸಿಗೆ ಬಂದಹಾಗೆ ಕಟ್ಟಿಕೊಳ್ಳಿರಿ, ನನಗೇನು ? ” ಕನಕನು ಅಭಿಮಾನದಿಂದ ಹೇಳಿದಳು.

ನೀರಜಾ—“ ಎಲಾ ! ನೀವು ಸಣ್ಣ ಮಾತಿಗೇ ಸಿಟ್ಟಾಗುತ್ತೀರಿ. ಸಾಗಲಿ, ನಾನಿನ್ನು ಒಂದು ತುಟಿ ಎರಡು ಮಾಡುವುದಿಲ್ಲ, ಆಯಿತೆ ! ನಿಮ್ಮ ಮನಸ್ಸು ತಣಿಯುವವರೆಗೆ ಕಟ್ಟಿರಿ. ”

ಕನಕ— “ ಮೊದಲು ಬೆಂಕಿಹೊತ್ತಿಸಿ ಆ ಮೇಲೆ ನೀರು ಹಾಕುವುದೆ? ಅಗಸೆಯಮುಂದೆ ಕಾಲಿನಿಂದ ಒದೆದು ಜಗುಲಿಯ ಮುಂದೆ ಕಾಲು ಹಿಡಿದುಕೊಂಡರಂತೆ ! ಹಾಗೆ ಮಾಡುತ್ತೀರಿ ನೀವು ! ಹೀಗೆಯೇ ಅಣ್ಣನನ್ನೂ ಕಾಡಿಸುತ್ತಿರಬಹುದು ! ಇಂದು ನಿಮ್ಮನ್ನು ಕಾಲಿಗೆ ಬೀಳಿಸಿಕೊಂಡ ಮೇಲೆಯೇ ಬಿಡುವೆನು ! ”

ನೀರಜಾ— “ ಆಗಲಿ, ನೀವು ಹೇಳಿದಂತೆಯೇ ಮಾಡುವೆನು, ಆದರೆ ನನಗೊಂದು ಹಾಡು ಕಲಿಸಿದರೆ ಆನಂದವಾಗುವುದು. ”

ಕನಕ—“ ನೀರಜಾ ! ನನ್ನ ಭಾಗ್ಯದಲ್ಲಿ ಅಪಮಾನವನ್ನುಳಿದು ಆದರವನ್ನು ಬರೆದೇ ಇಲ್ಲ. ನೀವೇನು ಮಾಡೀರಿ, ಪಾಪ ! ಯಾವಾಗ ನೋಡಿದರೂ ನನಗೆ ಅಪಮಾನವೇ ಅಪಮಾನ. ಅದರಿಂದ ಬಹಳ ನೊಂದುಕೊಂಡಿದ್ದೇನೆ. ವೇದನೆಯ ಹಾಡಲ್ಲದೆ ನನಗೆ ಬೇರೆ ಹಾಡು ಬರುವುದಿಲ್ಲ. ಬೇಕಾದರೆ ಹೇಳಿರಿ, ಅಂಥ ಒಂದು ಹಾಡನ್ನು ಕಲಿಸುವೆ. “ ಈಗ ಕನಕನು ಗಂಭೀರಳಾಗಿ ಹೇಳಿದಳು.

ಇಷ್ಟು ಹೇಳಿದ ಮೇಲೆ ಕನಕಲತಾನ ಹರ್ಷೋತ್ಫುಲ್ಲ ಮುಖವು ಬಾಡಿತು. ಮೊದಲಿನ ಭಾವವನ್ನು ಮರೆತು ಅವಳು ಮನಸ್ಸಿನೊಳಗೆಯೇ ಗುನು-ಗುನು ಎನ್ನಹತ್ತಿದಳು. ಇದನ್ನು ಹೇಳುವಾಗ ಕನಕನ ಕಣ್ಣುಗಳಿಂದ ಅಶ್ರುಧಾರೆ ಸುರಿಯಹತ್ತಿತು. ಕಣ್ಣೀರನ್ನೊರೆಸಿಕೊಳ್ಳುತ್ತ ಅವಳು ನೀರಜಾನ ಕಡೆಗೆ ನೋಡಹತ್ತಿದಳು.

“ ಎಲಾ ! ಇದೇನು, ನಿಮಗೇನಾಯಿತು ! ನಾನೆಂಥ ಕೆಟ್ಟವೇಳೆಯಲ್ಲಿ ಹಾಡಲು ಹೇಳಿದೆನೊ ಏನೋ. ನಿಮ್ಮ ಈ ಹೀನಾವಸ್ಥೆಯನ್ನು ನೋಡಿ ನನಗೇಕೊ ಬಹಳ ಹೆದರಿಕೆಯಾಗುತ್ತದೆ. ” ಹಾಡುಕೇಳಿದನಂತರ ನೀರಜಾ ಹೇಳಿದಳು.

ಕನಕ—“ ಯಾರೇನು ಮಾಡುವುದು, ನನ್ನ ಹಣೆಯಲ್ಲಿಯೇ ಹಾಗೆ ಬರೆದಿದೆ. ಪಾಪ ಮಂದಿಯೇನು ಮಾಡುವರು ! ”

ನೀರಜಾ—“ ಏಕೆ ? ಮಂದಿಯೇನು ಮಾಡುವರೆ ? ನಾನು ನಿಮ್ಮನ್ನೇನೂ ಸುಮ್ಮನೆ ಕುಳಿತುಕೊಳ್ಳಲು ಬಿಡುವುದಿಲ್ಲ; ”

ಕನಕ—“ ಒಳ್ಳೇದು, ಸುಮ್ಮನೆ ಕುಳಿತುಕೊಳ್ಳಲು ಆಗದಿದ್ದರೆ, ಮಾತನಾಡಿರಿ, ನಾನು ಕುಳಿತೇ ಕೇಳುವೆನು. ”

ನೀರಜಾ—“ ಕೇಳಿದಮಾತ್ರಕ್ಕೆ ನಿಮ್ಮ ಕೆಲಸವಾಗಲಿಲ್ಲ ! ”

ಕನಕ—“ ಮತ್ತೇನು ಮಾಡಬೇಕು ? ”

ನೀರಜಾ—“ ನಗುತ್ತ ಮಾತಿಗೆ ಉತ್ತರ ಕೊಡಬೇಕು. ಇಲ್ಲದಿದ್ದರೆ ನಾನೇನೂ ಮಾತನಾಡುವವಳಲ್ಲ ”

ಕನಕ—“ ಒಳ್ಳೇದು ಹಾಗಾದರೆ ಮಾತನಾಡಿರಿ, ನಿಮ್ಮ ಆನಂದದೊಳಗೆ ನನಗೂ ಸ್ವಲ್ಪ ಆನಂದವೆನಿಸಲಿಕ್ಕಿಲ್ಲವೆ ? ”

ನೀರಜಾ—“ ನೀವು ಆಗಾಗ ಉದಾಸೀನರೇಕಾಗುತ್ತೀರಿ ? ”

ಕನಕ—“ ಅದನ್ನೇನು ಹೇಳಲಿ ? ”

ನೀರಜಾ—“ ನೀವು ಹೇಳದೆ ಇದ್ದರೆ, ನಿಮ್ಮ ಅಣ್ಣ ಬಂದು ಹೇಳುವರೆ ? ”

ಕನಕ—“ ಹುಶ್ ! ನೀವೇ ಹೇಳಿರಿ. ಆ ದಿವಸ ನೀವೇಕೆ ಅತ್ತಿರಿ? ”

ನೀರಜಾ—“ ಸತ್ಯ ಹೇಳಲೆ. ನಿಮ್ಮ ಅಣ್ಣಂದಿರಮೇಲೆ ಸಿಟ್ಟಾಗಿ ! ”

ಕನಕ—“ ಅದೇಕೆ ? ”

“ ಅಯ್ಯೋ ಅದನ್ನು ಕೇಳಬೇಡಿರಿ, ಸಿಟ್ಟಿಗೂ ಕಾರಣವು ಬೇಕೆ ? ” ನಕ್ಕು ನೀರಜಾ ಹೇಳಿದಳು.

ಕನಕ—“ ಹಾಗಾದರೆ ನನ್ನ ಉದಾಸೀನತೆಗೂ ಕಾರಣವಿಲ್ಲ. ”

ನೀರಜಾ—“ ನೀವು ಸುಮ್ಮನೇ ಕಷ್ಟಕೊಡುತ್ತೀರಿ. ”

ಕನಕ—“ ಹೇಳದೇ ಇದ್ದರೆ ನಾನೇನೂ ಬಿಡುವುದಿಲ್ಲ. ”

ನೀರಜಾ—“ ಕೇಳಿರಿ, ನನಗೆ ಪಾನಬಿಡಾ ಕಟ್ಟುವುದು ಗೊತ್ತಿಲ್ಲ, ಕಲಿಯಲು ಒಂದು ಕಟ್ಟಿದ್ದೆ, ಅವರ ಕೈಗೆ ಕೊಟ್ಟೆ. ಆದರೆ ಅದನ್ನು ಅವರು ತಿನ್ನದೆ ಅಲ್ಲಿಯೇ ಕುಳಿತುಕೊಂಡ ಬೇರೊಬ್ಬರಿಗೆ ಕೊಟ್ಟುಬಿಡಬೇಕೆ ! ಇದರಿಂದ ನನಗೆ ಬಹಳೇ ವಿಷಾದವೆನಿಸಿತು. ”

“ ನಿಮಗೆ ಇಷ್ಟು ಬೇಗನೇ ಸಿಟ್ಟು ಬರುತ್ತದೆಯೆ ? ” ಅವಳ ದುಃಖದ ಕಾರಣವನ್ನು ಕೇಳಿ ಕನಕನು ನಕ್ಕು ಕೇಳಿದಳು.

“ ನಾನಂತೂ ಎಲ್ಲವನ್ನೂ ಸ್ವಚ್ಛವಾಗಿ ಹೇಳಿದ್ದೇನೆ. ಇನ್ನು ನೀವು ನಿಮ್ಮ ಉದಾಸೀನತೆಗೆ ಕಾರಣವೇನೆಂಬುದನ್ನು ಹೇಳಿರಿ. ” ನಾಚಿಕೊಂಡು ನೀರಜಾ ಹೇಳಿದಳು.

“ ನಿಮಗೆ ಅಣ್ಣನಮೇಲೆ ಇಷ್ಟುಬೇಗನೆ ಏಕೆ ಸಿಟ್ಟುಬರುತ್ತದೆ ? ನಾನು ಅಣ್ಣನನ್ನು ಬಹಳ ಪ್ರೀತಿಸುತ್ತೇನೆ. ಅವರ ಕಷ್ಟವನ್ನು ಕೇಳಿದರೆ ನನಗೆ ದುಃಖವಾಗದೆ ? ” ಎಂದು ಹೇಳಿದಳು ಕನಕ.

ಇಷ್ಟು ಕೇಳಿ ನೀರಜಾನಿಗೆ ಬಹಳ ಹರುಷವಾಯಿತು. ಪ್ರಮೋದನನ್ನು ಯಾರಾದರೂ ಪ್ರೀತಿಸಿದರೆ ಅವಳಿಗೆ ಬಹಳ ಆನಂದವಾಗುತ್ತಿತ್ತು. ಅವಳೂ ಅವನನ್ನು ಪ್ರೀತಿಸುತ್ತಿದ್ದಳು.

“ ಒಳ್ಳೇದು, ನಿಮ್ಮನ್ನು ಕುರಿತು ನಿಮ್ಮ ಅಣ್ಣಂದಿರ ಮುಂದೆ ಪ್ರಶಂಶಿಸುವೆ. ಎಂದರೆ ನಿಮ್ಮ ದುಃಖವು ದೂರಾಗುವುದೆ ? ” ಕನಕನ ಮಾತುಕೇಳಿ ನೀರಜಾ ಹೇಳಿದಳು.

ಕನಕ—“ ನೀವು ಪ್ರಶಂಶೆ ಮಾಡುವುದು ನನಗೆ ಬೇಕಾಗಿಲ್ಲ. ”

ನೀರಜಾ—“ ಬೇಡಾದರೆ ಬಿಡಿರಿ. ನಿಜವಾಗಿಯೂ ನೀವು ನಿಮ್ಮ ಅಣ್ಣನನ್ನು ಪ್ರೀತಿಮಾಡುತ್ತೀರಾ ? ”

ಕನಕ—“ ಏಕೆ ? ಪ್ರೀತಿಸಿದರೆ·ತಪ್ಪೇನು ? ಇದಕ್ಕೂ ನೀವು ಅಣ್ಣನ ಮೇಲೆ ಸಿಟ್ಟಾದೀರಿ ಮತ್ತೆ ? ಹಾಂ, ನಿಜವಾಗಿಯೂ ನಾನು ನಿಮಗಿಂತಲೂ ಹೆಚ್ಚು.....”

“ ಒಳ್ಳೇದು, ಎಲ್ಲಿಯಾದರೂ ನನ್ನನ್ನು ದೂರಮಾಡೀರಿ ಮತ್ತೆ ! ” ನಗುತ್ತ ನೀರಜಾ ಹೇಳಿದಳು.

ಕನಕ—“ ನಿಮ್ಮ ಹತ್ತಿರ ವಿನೋದಕ್ಕೆ ಬೇರೆ ಮಾತಿಲ್ಲವೆ ? ಹಗಲೆಲ್ಲ ಅದೊಂದೇ ಮಾತನ್ನು ಹೇಳುತ್ತೀರಿ ? ”

ನೀರಜಾ—“ ಇದು ಹೊಸದೆಂದು ತಿಳಿದು ಹೇಳಿದೆ; ಆದರೆ ನಿಮ್ಮ ಅಣ್ಣಂದಿರ ಹತ್ತಿರ ಹೊಸ ಮಾತು ಕಲಿತು ನಿಮ್ಮ ಕೂಡ ಮಾತನಾಡುವೆ. ”

ಇಷ್ಟು ಮಾತನಾಡಿ ಕನಕನ ಭುಜವನ್ನು ಹತ್ತಿಡುತ್ತ ಅವಳು ಹೇಳಿದಳು.

"ನೋಡಿರಿ, ನಿಮ್ಮ ಅಣ್ಣಂದಿರಲ್ಲೊಂದು ಹಾಡನ್ನು ಕಲಿತಿದ್ದೇನೆ." ಎಂದು ಒಂದು ಹಾಡನ್ನು ಹಾಡಿ ತೋರಿಸಿದಳು ನೀರಜಾ.

"ಅಣ್ಣ ನನ್ನನ್ನು ಪ್ರೀತಿಸುವುದಿಲ್ಲ. ಅದಕ್ಕೆಂದೇ ನೀವೂ ಹಾಗೆ ಮಾತನಾಡುತ್ತೀರಿ ?" ಕನಕನು ಒಂದು ಸುಯ್ಯುರೆದು ಹೇಳಿದಳು.

ನೀರಜಾ—"ಅಕ್ಕ, ಹೀಗೆ ಹೇಳಬೇಡಿರಿ ನೀವು ನನಗೆ ಸಿಕ್ಕಿರುವುದೆಂದರೆ ನನ್ನ ಹಿಂದಿನ ಜನ್ಮದ ಪುಣ್ಯವೇಸರಿ. ನಿಮ್ಮ ಅಣ್ಣ ನಿಮ್ಮನ್ನು ಪ್ರೀತಿ ಮಾಡಿದರೆ ನಾನು ಅದಕ್ಕೆ ಅಪಾರ್ಥ ಮಾಡಿಕೊಳ್ಳುತ್ತೇನೆಯೆ? ನನ್ನ ಭಾಗ್ಯಕ್ಕಾಗಿಯೇ ಅಲ್ಲವೇ, ನೀವು ನೀರಿನಲ್ಲಿ ಮುಳುಗಲಿಲ್ಲ. ಇಲ್ಲದೆ ಹೋಗಿದ್ದರೆ ನಾನು ಇಷ್ಟು ಸಲುಗೆಯಿಂದ ಯಾರಕೂಡ ಮಾತನಾಡುತ್ತಿದ್ದೆ ? ಒಳ್ಳೇದು, ಇದನ್ನಾದರೂ ಹೇಳಿರಿ, ಹಿರಣ್ಯಕುಮಾರರು ನಿಮ್ಮನ್ನು ನಾವೆಯಲ್ಲಿ ಕುಳ್ಳಿರಿಸಿಕೊಂಡಾಗ ನಿಮ್ಮ ಮೈಮೇಲೆ ಪ್ರಜ್ಞೆಯಿದ್ದಿಲ್ಲವೆ ?"

ಕನಕ—"ಮತ್ತೆ ನೀರೊಳಗೆ ಮುಳುಗಿದ ಅದೇ ಮಾತೆ! ಇನ್ನು ಎಷ್ಟು ಸಾರೆ ಹಿಂದಿನ ಮಾತನ್ನೇ ಕೇಳುವುದು ? ಸರಿ, ಹೆರಳು ಹಾಕುವದಂತೂ ಒಂದು ಸಲ ಮುಗಿದಂತಾಯಿತು."

ನೀರಜಾ ಕನಕನ ಕಡೆ ತಿರುಗಿ ಕುಳಿತುಕೊಂಡಳು; "ಹಿಂದಿನ ಮಾತನ್ನು ಮತ್ತೆ ಮತ್ತೆ ಕೇಳಬಾರದೆ? ನನ್ನ ಮನಸ್ಸಿನ ಭಾವವು ನಿಮಗೆ ಗೊತ್ತಿದೆಯೆ ? ನಿಮ್ಮ ಅದೃಷ್ಟವು ಒಳ್ಳೆಯದು. ಹಿರಣ್ಯಕುಮಾರರ ನಾವೆ ಹತ್ತಿರದಲ್ಲಿಯೇ ಇದ್ದಿತು. ಇಲ್ಲದೆ ಹೋಗಿದ್ದರೆ ನಿಮ್ಮ ಗತಿ ಏನಾಗುತ್ತಿತ್ತೊ ಏನೊ! ಮನೆಯವರು ನಿಮ್ಮನ್ನು ಹುಡುಕಿದರೂ ಅವರಿಗೆ ನೀವು ಹೇಗೆ ಸಿಗಲಿಲ್ಲ? ನಧಿಯಲ್ಲಿ ಅವರು ಸರಿಯಾಗಿ ಹುಡುಕಿದ್ದರೆ ನೀವು ಸಿಕ್ಕೇ ಸಿಗುತ್ತಿದ್ದಿರಿ." ನೀರಜಾ ಕನಕನಿಗೆ ಹೇಳಿದಳು.

ಕನಕ—"ಆಗ ಮನೆಯೊಳಗೆ ಯಾರಿದ್ದರು ? ಒಬ್ಬ ದಾಸಿ ಇದ್ದಳ್ಳೆ ಮಾತ್ರ. ಅವಳೂ ಚಿಕ್ಕಮ್ಮನ ಶವಸಂಸ್ಕಾರದಲ್ಲಿ ಮಗ್ನಳಾಗಿದ್ದಳು. ಏಕೊ ಏನೊ ಹಿರಣ್ಯಕುಮಾರರ ನೌಕೆ ದಂಡೆಗೆ ಬರುತ್ತಿದ್ದಿತು. ಆಗ ಅವರು ನನ್ನನ್ನು ಉಳಿಸಿದರು ಆಳು ಎಷ್ಟು ಹೊತ್ತು ಹುಡುಕುವರು ?"

"ನೌಕೆ ದಂಡೆಗೆ ಬರಹತ್ತಿದ್ದುದು ನಿಮ್ಮ ಭಾಗ್ಯವೇ ಸರಿ," ಎಂದಳು ನೀರಜಾ.

ಕನಕನು ಏನೂ ಉತ್ತರ ಕೊಡಲಿಲ್ಲ. ಅವಳು ಮತ್ತಿಷ್ಟು ಉದಾಸೀನಳಾದಳು. ಕನಕನ ಈ ಸ್ಥಿತಿಯನ್ನು ನೋಡಿ ನೀರಜಾ—"ಮಾತು ಮಾತಿನಲ್ಲಿ ನಿಮ್ಮ ವಿಷಾದವು ದೂರಾಗುತ್ತಿದ್ದಿತು. ಮತ್ತೆ ಈಗ: ಮೊದಲಿನಂತೇಕೆ ಆದಿರಿ? ನೀವು ನನಗೆ ಬಿಚ್ಚಿ ಹೇಳುವುದಿಲ್ಲ! ಇದಕ್ಕೆ ಬೇರೆ ಏನೋ ಕಾರಣವಿರಲೇಬೇಕು." ಎಂದು ಕನಕನಿಗೆ ಹೇಳಿದಳು.

ಕನಕನಿಗೆ ತಡೆಯುವುದು ಆಗಲಿಲ್ಲ. ಅವಳ ಕಣ್ಣುಗಳಿಂದ ಒಂದೆರಡು ಹನಿ ನೀರು ಉದುರಿದುವು. ತನ್ನ ಅನುಮಾನವೂ ಸರಿಯಿದೆಯೆಂದು ನೀರಜಾ ತಿಳಿದಳು. ಕನಕನು ನಿಜಕ್ಕೂ ಯಾವುದೋ ಮಾತನ್ನು ಮುಚ್ಚಿಡುತ್ತಿದ್ದಾಳೆಂದು ಅವಳಿಗೆ ಮನದಟ್ಟಾಯಿತು.

"ಹೇಳಬಾರದೆ, ನಿಮಗೇನಾಗಿದೆ? ನೋಡಿರಿ, ನಾನು ಹೇಗೆ ನನ್ನ ಎಲ್ಲ ಸಂಗತಿಗಳನ್ನು ಹೇಳುತ್ತೇನೆ, ನೀವು ಮುಚ್ಚಿಡುತ್ತೀರಿ!? ಎಂದಳು ನೀರಜಾ.

ನೀರಜಾನ ಸ್ನೇಹದ ಮಾತುಗಳನ್ನು ಕೇಳಿ ಕನಕನ ಕಣ್ಣೀರಿನ ಕಟ್ಟು ಒಡೆಯಿತು. ಅದು ವೇಗವಾಗಿ ಹರಿಯಹತ್ತಿತು. ಅವಳ ಈ ಸ್ಥಿತಿಯನ್ನು ನೋಡಿ ನೀರಜಾ ಮನಸ್ಸಿನೊಳಗೆಯೇ ಅದೆಷ್ಟೋ ಪ್ರಶ್ನೋತ್ತರಗಳನ್ನು ಮಾಡಹತ್ತಿದಳು. ಕನಕನಿಗೆ ಇಷ್ಟು ದುಃಖವೇಕೆ ಎಂದು ನೀರಜಾ ಆಲೋಚನೆ ಮಾಡಹತ್ತಿದಳು

"ಕನಕಲತಾ, ನೀವು ಯಾರನ್ನಾದರೂ ಪ್ರೀತಿಸುತ್ತೀರೇನು? ಏಕೆ ಹೇಳುವುದಿಲ್ಲ? ಹೇಳಬಾರದೆ, ನೀವು ಹಿರಣ್ಯಕುಮಾರರನ್ನು ಪ್ರೀತಿಸುತ್ತೀರಾ?" ಕಣ್ಣೀರನ್ನೊರೆಸುತ್ತ ಕನಕನಿಗೆ ಕೇಳಿದಳು ನೀರಜಾ.

ಹಿರಣ್ಯಕುಮಾರರ ಹೆಸರನ್ನು ಕೇಳಿದ ಕೂಡಲೆ ಕನಕನ ಮೋರೆಯ ಬಣ್ಣವು ಬದಲಿಸಿತು! ಮೆಲ್ಲ ಮೆಲ್ಲಗೆ ಅವಳ ಮುಖವು ಕಳೆಗುಂದಿತು. ಕನಕನ ಅಧರಗಳ ಮೇಲೆ ಲಜ್ಜಾಪೂರ್ಣವಾದ ರೇಷೆಯೊಂದು ಕಾಣಿಸಿಕೊಂಡಿತು. ಅವಳು ನಿರುತ್ತರಳಾದುದನ್ನೂ, ಅವಳ ಭಾವಗಳನ್ನೂ ನೋಡಿ, ತಾನು ಮಾಡಿದ ಅನುಮಾನವು ಸರಿಯೆಂದು ನೀರಜಾ ತಿಳಿದಳು. ಇದು ಗೊತ್ತಾದ ಮೇಲೆ ನೀರಜಾನಿಗೆ ವಿಷಾದವೆನಿಸಿತು. ಪ್ರಮೋದನು ಹಿರಣ್ಯಕುಮಾರರನ್ನು ಕುರಿತು ನೀರಜಾನಿಗೆಲ್ಲ ಹೇಳಿದ್ದ. ಅದರಿಂದ ಅವಳು ಅವರನ್ನು ತಿರಸ್ಕರಿಸುತ್ತಿ

ದ್ದಳು. ಹಿರಣ್ಮಯಿ ನೀಚರೆನ್ನುತ್ತಿದ್ದಳು. ಮನಸ್ಸಿನೊಳಗೆಯೇ ಅವಳು ಅವರನ್ನು ತನ್ನ ಶತ್ರುಗಳೆಂದು ತಿಳಿಯುತ್ತಿದ್ದಳು. ಯಾರಿಗೆ ನೀಚರೆನ್ನುತ್ತಾಳೋ ಶತ್ರುಗಳೆನ್ನುತ್ತಾಳೋ, ಅಂಥವರನ್ನೂ ಕನಕನು ಪ್ರೀತಿಸುತ್ತಾಳೆ. ಇದನ್ನು ಕುರಿತು ಆಲೋಚಿಸಿದುದರಿಂದ ಅವಳಿಗೆ ತಾಪವೆನಿಸಿತು.

"ನೀವು ಅವರನ್ನು ಪ್ರೇಮದೃಷ್ಟಿಯಿಂದ ಏಕೆ ಕಾಣುತ್ತೀರಿ? ಅವರು ಬಹಳ ಕಟುಕರು, ನೀಚರು, ಅವರು ನಿಮ್ಮ ಅಣ್ಣಂದಿರನ್ನು ಕೊಲ್ಲಲು ಹವಣಿಸುತ್ತಿದ್ದರು. ಅಂಥವರನ್ನು ನೀವು ಪ್ರೇಮ ಮಾಡುತ್ತೀರಿ. ಹೀಗೆ ನೀವು ಮಾಡಿದರೆ ನಿಮಗೆ ಸುಖವು ಸಿಗಲಾರದು." ಹಿರಣ್ಮಯಕುಮಾರರಿಂದ ಕನಕನ ಮನಸ್ಸನ್ನು ತಿರುಗಿಸಲು ಹೇಳಿದಳು ನೀರಜಾ.

ಪ್ರೇಮದ ಬೇರನ್ನು ಹರಿಯಲು ಯತ್ನಿಸಿದಂತೆ ಅದು ಬಲಗೊಳ್ಳುತ್ತದೆ, ಬೆಳೆಯುತ್ತದೆ. ಪಾಪ ಈ ಮಾತನ್ನು ನೀರಜಾ ಏನು ಬಲ್ಲಳು. ನೀರಜಾನ ಮಾತುಕೇಳಿ ಕನಕನ ಉದಾಸಮುಖವು ಕಳೆಯೇರಿತು. ನೇತ್ರಗಳಲ್ಲಿದ್ದ ಕಣ್ಣೀರು ವಿಲೀನವಾದುವು. "ಹಿರಣ್ಮಯಕುಮಾರರು ನೀಚರಲ್ಲ. ಅವರು ಅಣ್ಣನನ್ನು ಹೊಡೆಯಲು ಎಂದೂ ಬಯಸುತ್ತಿರಲಿಲ್ಲ!" ಗಂಭೀರಭಾವದಿಂದ ಕನಕ ಹೇಳಿದಳು.

ಇಷ್ಟು ಹೇಳಿ ಕನಕ ಅಲ್ಲಿಂದ ಎದ್ದು ಹೋದಳು

## ಪ್ರಸ್ತಾವ

ಮತ್ತೆ ಹನ್ನೆರಡು ದಿನಗಳು ಕಳೆದುವು. ಪ್ರಮೋದನು ಸ್ವಾಮಿ ನೀನಾಥನ ಬಳಿಗೆ ಕಲಕತ್ತೆಯಿಂದ ಬಿಟ್ಟು ಮರಳಿಬಂದಿದ್ದಾನೆ.

ಪ್ರಮೋದನು ಕಲಕತ್ತೆಗೆ ಹೋಗುವ ಮೊದಲೇ ಹಿರಣ್ಮಬಾಬು ಕನಕನೊಡನೆ ವಿವಾಹ ಮಾಡಿಕೊಳ್ಳುವ ವಿಚಾರವಾಗಿ ಪ್ರಮೋದನಿಗೆ ಪತ್ರಬರೆದಿದ್ದರು. ಪ್ರಮೋದನು ಆ ಪತ್ರವನ್ನು ಕಾಣುತ್ತಲೇ ಮತ್ತಿಷ್ಟು ಸಿಟ್ಟಾದ. ಆದರೆ ಹಿರಣ್ಮಯಕುಮಾರರು ಕನಕನನ್ನು ಉಳಿಸಿದ್ದರು. ಇದನ್ನು ನೆನೆದುಕೊಂಡು ಸುಮ್ಮನಾದ. ಕನಕನನ್ನು ವಿಚಾರಮಾಡಿ ಎಲ್ಲಸಂಗತಿಯನ್ನು ಹಿಂದಿನಿಂದ ಬರೆಯುವೆನೆಂದು ಹಿರಣ್ಮಯಕುಮಾರರಿಗೆ ಉತ್ತರ ಬರೆದು ಹಾಕಿದ.

ಪ್ರಮೋದನು ಕನಕನ ವಿವಾಹವನ್ನು ಹಿರಣ್ಯ ಕುಮಾರರೊಡನೆ ಮಾಡಲು ಇಚ್ಛಿಸುತ್ತಿದ್ದಿಲ್ಲ. ಆದರೆ ಸ್ವಚ್ಛವಾಗಿ ಏಕೆ ಬರೆಯಲಿಲ್ಲ? ವಿವಾಹ ಮಾಡುವ ಮುನ್ನ ವಧೂವರರನ್ನು ವಿಚಾರಿಸುವುದು ಆವಶ್ಯಕವೆಂದು ಪ್ರಮೋದನ ಮತವಾಗಿತ್ತು. ಅದರಿಂದಲೇ ಆತನು ಕನಕಳನ್ನು ಕೇಳಿ ನಿರ್ಣಯಿಸಬೇಕೆಂದಿದ್ದ. ತಾನು ಒಪ್ಪದವರನ್ನು ಕನಕನು ವಿವಾಹವಾಗಲು ಒಪ್ಪುವುದಿಲ್ಲವೆಂದು ಪ್ರಮೋದನು ತಿಳಿದಿದ್ದ.

ಇತ್ತ ಯಾಮಿನೀನಾಥನೂ ಕನಕನನ್ನು ತನಗೆ ಕೊಟ್ಟು ವಿವಾಹ ಮಾಡಬೇಕೆಂದು ಪ್ರಮೋದನನ್ನು ಕೇಳಿಕೊಂಡಿದ್ದ. ಆಗಿನ ಪ್ರಮೋದನ ಆನಂದಕ್ಕೆ ಎಣೆಯೇ ಇದ್ದಿಲ್ಲ. ಕೂಡಲೆ ಅವನು ಮದುವೆಯನ್ನು ಗೊತ್ತು ಮಾಡಲು ಕಲಕತ್ತೆಗೆ ಹೋದ. ಅಲ್ಲಿ ಎಲ್ಲವನ್ನೂ ನಿರ್ಣಯಿಸಿ ಪ್ರಫುಲ್ಲಚಿತ್ತದಿಂದ ಅವನು ಮರಳಿ ಮನೆಗೆ ಬಂದ. ಕೇವಲ ಕನಕನಿಗೆ ಹೇಳುವುದೊಂದೇ ಉಳಿದಿತ್ತು. ಅವಳನ್ನು ಕೇಳಿ ಇನ್ನು ಮದುವೆಯ ಮುಹೂರ್ತವನ್ನು ಗೊತ್ತು ಮಾಡುವುದಿತ್ತು. ಬಂದ ಹೊತ್ತಿನಲ್ಲಿಯೇ ಕನಕನಿಗೆ ಬರಹೇಳಿದ. ಕನಕನು ಕೋಣೆಯೊಳಗೆ ಕಾಲಿಟ್ಟಳು ಆಗ ಪ್ರಮೋದನು ಮೇಜಿನಮೇಲೆ ಕೈಯೂರಿ ಗಲ್ಲಕ್ಕೆ ಕೈ ಹಚ್ಚಿಕೊಂಡು ಏನನ್ನೋ ಆಲೋಚಿಸುತ್ತಿದ್ದ. ಆದರೆ ಅವನ ಕಣ್ಣು ಹೆಚ್ಚು ಚಂಚಲವಾಗಿದ್ದುವು ಉಜ್ವಲವಾಗಿದ್ದುವು. ದೇಹವೆಲ್ಲ ಆನಂದದಿಂದ ತುಂಬಿ ತುಳುಕುತ್ತಿತ್ತು. ಅವನು ಯಾವುದೊ ಸುಖಸ್ವಪ್ನವನ್ನು ನೋಡುತ್ತಲಿದ್ದ.

"ಅಣ್ಣ, ನನ್ನನ್ನು ಕರೆದೆಯಾ?" ಬಂದು ಕನಕನು ಕೇಳಿದಳು.

"ಹೂಂ, ಬಾ ತಂಗಿ ಕುಳಿತುಕೊ. ನಿನ್ನ ಕೂಡ ಇಂದು ಬಹಳ ಮಹತ್ವದ ಮಾತುಗಳನ್ನಾಡಬೇಕಾಗಿದೆ." ನಕ್ಕು ಪ್ರಮೋದನೆಂದ.

"ಏನು, ಯಾವ ಮಾತುಗಳವು?" ಕುಳಿತುಕೊಂಡು ಆತುರದಿಂದ ಕನಕಲತಾ ಕೇಳಿದಳು.

ಪ್ರಮೋದ—"ಬಹಳ ಸಂತೋಷದ ಸುದ್ದಿಯಿದೆ. ಏಕೆ? ನಿನಗೆ ಗೊತ್ತಾಯಿತೇನು?"

"ನನಗಾವುದೂ ತಿಳಿಯದು. ಅಣ್ಣ! ನೀನೇ ಹೇಳು, ಏನು?"

ಪ್ರಮೋದ—"ಅದನ್ನು ಕೇಳಿದರೆ ನಿನಗೆ ಸಂತೋಷವಾಗಲಿಕ್ಕಿಲ್ಲವೆ?"

ಕನಕ—“ ಮೊದಲು ಹೇಳಿಯಾದರೂ ಹೇಳಬಾರದೆ ? ”

ಕನಕನ ಕುತೂಹಲವು ಹೆಚ್ಚಿತು. ಪ್ರಮೋದನಿಗೆ ಇದು ತಿಳಿಯದಿರಲಿಲ್ಲ. ಆ ಈ ಮಾತುಗಳನ್ನು ಹೇಳುತ್ತ ಬಹಳ ರೇಗಿಸಿ—“ ನಿನ್ನ ಮದುವೆಯನ್ನು ಒಬ್ಬ ಸುಯೋಗ್ಯ ವರನ ಕೂಡ ಗೊತ್ತುಮಾಡಿದೆ ಮದುವೆ ಬೇಗನೆ ಆಗುವುದು. ” ಎಂದು ಹೇಳಿದ.

ಈ ಮಾತನ್ನು ಕೇಳಿ ಕನಕನು ಬೆಚ್ಚಿಬಿದ್ದಳು. ಅವಳ ಮೈಯೊಳಗೆ ರಕ್ತವು ವೇಗವಾಗಿ ಸಂಚರಿಸಹತ್ತಿತು. ಮುಖವು ಬಾಡಿತು, ಕಳೆಗುಂದಿತು. ಕನಕನ ಈ ಭಾವವನ್ನು ನೋಡಿ ಪ್ರಮೋದನು, ಇದು ನಾಚಿಕೆಯ ಚಿಹ್ನವೆಂದು ತಿಳಿದ. ಪ್ರಮೋದನು, ಮೆಲ್ಲಗೆ ವರನ ಹೆಸರು, ಊರು, ಗುಣ ಇತ್ಯಾದಿಗಳನ್ನು ವರ್ಣಿಸಹತ್ತಿದ. ವರ ನೋಡಲು ಹೇಗಿದ್ದಾನೆ, ಎಷ್ಟು ಕಲಿತಿದ್ದಾನೆ, ಸ್ವಭಾವ ಹೇಗಿದೆ, ಮುಂತಾದ ಮಾತುಗಳನ್ನು ವಿಸ್ತಾರಪೂರ್ವಕವಾಗಿ ಹೇಳಿ ಪ್ರಮೋದನು—“ ಒಳ್ಳೇದು ಕನಕ ನಿಜಹೇಳು, ನಿನ್ನ ಅಭಿಪ್ರಾಯವೇನು ?” ಎಂದು ಕೇಳಿದ.

ಪ್ರಮೋದನು ತನ್ನ ಕಲ್ಪಿತ ಅಳಿಯನ ಪರಿಚಯ ಮಾಡಿಕೊಡುತ್ತಿದ್ದ. ಆದರೆ ಕನಕನ ಧ್ಯಾನವು ಮತ್ತೆಲ್ಲಿಯೋ ಇದ್ದಿತು. ಕನಕನು ಹಿರಣ್ಯಕುಮಾರರನ್ನು ನೋಡಲು ಸಾಧ್ಯವಿಲ್ಲ. ‘ಹಿರಣ್ಯ’ ಈ ಹೆಸರನ್ನು ಸ್ಮರಿಸಲೂ ಇನ್ನು ಅವಳಿಗೆ ಅಧಿಕಾರವು ಉಳಿಯುವುದಿಲ್ಲ. ಅವರನ್ನು ಕುರಿತು ವಿಚಾರಮಾಡುವುದೂ ಪಾಪವೆನಿಸುವುದು, ಎಂಥ ಭಯಂಕರವಾದ ಮಾತಿದು ! ಇದೆಲ್ಲವನ್ನು ಆಲೋಚಿಸುತ್ತಲೇ ಅವಳ ಮೈಯೆಲ್ಲ ನಡುಗಿತು. ಕನಕನು ಎಂದೂ ಅಣ್ಣನ ಮಾತಿಗೆ ತಿರುಗಿ ಉತ್ತರ ಕೊಟ್ಟಿದ್ದಿಲ್ಲ. ಅವಳು ಪ್ರಮೋದನ ಮಾತನ್ನು ದೇವ-ವಾಣಿ. ದೇವ-ವಾಕ್ಯವೆಂದು ತಿಳಿದು ಸದಾ ಅದರಂತೆ ನಡೆಯುತ್ತಿದ್ದಳು. ಆದರೆ ಈಗ ಅವಳು ಹಾಗೆ ಮಾಡದೆ ಹೋದಳು. ದುಃಖದಿಂದ ಅವಳ ಸ್ವರವು ಕಂಪಿಸಹತ್ತಿತು. “ ಅಣ್ಣಾ, ನನಗೆ ಮದುವೆಯೆ ಬೇಡ. ” ನಡುಗುವ ದನಿಯಲ್ಲಿ ಹೇಳಿದಳು ಕನಕಲತಾ.

ಪ್ರಮೋದನಿಗೆ ಇದರಿಂದ ಆಶ್ಚರ್ಯವೆನಿಸಲಿಲ್ಲ. ಕನಕ ನಾಚಿಕೊಂಡು ಹೀಗೆ ಹೇಳುತ್ತಿದ್ದಾಳೆಂದು ಭಾವಿಸಿದ. ಹೀಗೆ ತಿಳಿದುಕೊಂಡು ಪ್ರಮೋದನು ನಕ್ಕು—“ ತಂಗಿ ಕನಕ ನಾಚುತ್ತೀಯೇಕೆ, ನಾಚಿದರೆ ಹೇಗೆ? ಇಂದು ಆಗ

ದಿದ್ದರೆ ಮುಂದೆಯಾದರೂ ಆಗುವುದಿಲ್ಲ, ಮದುವೆಯಾಗಲೇಬೇಕು. ಎಂದ ಮೇಲೆ ನಾಚಿಕೆಯೇಕೆ ?'' ಎಂದು ಹೇಳಿದ

''ಅಣ್ಣಾ, ನಿಜವಾಗಿಯೂ ನಾನು ಮದುವೆಯನ್ನೇ ಒಲ್ಲೆ.'' ಸ್ಥಿರ ಭಾವದಿಂದ ಕನಕಳು ಹೇಳಿದಳು.

ಪ್ರಮೋದನು ನೋಡಿದ. ಇದು ನಾಚಿಕೆಯ ಸ್ವರವಲ್ಲ, ಆ ಸ್ವರದಲ್ಲಿ ಗಾಂಭೀರ್ಯ, ದೃಢನಿಶ್ಚಯಗಳು ಹೊರಹೊಮ್ಮುತ್ತಿವೆ. ಆಗ ಪ್ರಮೋದನಿಗೆ ಬಹಳ ಸೋಜಿಗವೆನಿಸಿತು. ವಿವಾಹವನ್ನು ಒಲ್ಲೆನೆಂದುದರ ಮರ್ಮವು ಅವನಿಗೆ ಸರಿಯಾಗಿ ತಿಳಿಯಲಿಲ್ಲ. ಮದುವೆಯಾದರೆ ಪರಾವನಮನೆಗೆ ಹೋಗಬೇಕಾಗುವುದೆಂದು ಹೆದರಿ ಕನಕ ಒಲ್ಲೆನೆನ್ನುತ್ತಿರಬಹುದೆ? ಹೀಗೆ ವಿಚಾರಮಾಡಿಕೊಂಡು—''ಮನೆಬಿಟ್ಟು ಪರಾವನಮನೆಗೆ ಹೋಗುವುದಕ್ಕೆ ಹೆದರಿಕೊಂಡು ಹೀಗೆ ಹೇಳುತ್ತೀಯೆಂದು ಕಾಣುತ್ತದೆ. ಮದುವೆಯಾದಮೇಲೂ ಬೇಕಾದಷ್ಟು ದಿನ ನೀನು ಇಲ್ಲಿಯೇ ಇರು.'' ಎಂದು ಪ್ರಮೋದನು ಹೇಳಿದ.

''ಬೇಡಣ್ಣಾ, ಮದುವೆಗೆ ಇಷ್ಟು ಆಗ್ರಹವನ್ನೇಕೆ ಮಾಡುತ್ತೀ?'' ಮೃದುಸ್ವರದಲ್ಲಿ ಕನಕಲತಾ ಕೇಳಿದಳು.

''ಎಂದರೆ, ಬ್ರಹ್ಮಚಾರಿಣಿಯಾಗಿಯೇ ಇರುವೆಯಾ? ಇಷ್ಟು ನಾಚಿಕೆಯಿಂದ ಲಾಭವೇನು? ಒಳ್ಳೆಯದು — ಹುಡುಗನನ್ನು ನೋಡಿಯಾದರೂ ಮಾಡಿಕೊಳ್ಳುವಿಯಾ?'' ಎಂದು ಮತ್ತೆ ಪ್ರಮೋದಬಾಬು ಯಾಮಿನಿಯನ್ನು ಹೊಗಳಹತ್ತಿದ.

ಇದೇ ಪ್ರಕಾರದ ಮಾತುಗಳನ್ನು ಹೇಳಿ ಕನಕನ ಮನವನ್ನೊಲಿಸಲು ಯತ್ನಿಸಹತ್ತಿದ. ಆದರೆ ಕನಕನು ಒಪ್ಪಲೇ ಇಲ್ಲ. ಪ್ರಮೋದನು ಕಕ್ಕಾಬಿಕ್ಕಿಯಾದ. ಕನಕನೆಂದೂ ಪ್ರಮೋದನ ಮಾತನ್ನು ಉಗುಳು ಹಾಕಿ ದಾಟಿದ್ದಿಲ್ಲ. ಎಂದೂ ತಿರುಗಿ ಉತ್ತರ ಕೊಟ್ಟದ್ದಿಲ್ಲ. ಆದರೆ ಇಂದು ಇದು ವಿಪರೀತವಾಯಿತು. ಅದರಿಂದ ಅವನಿಗೆ ಬಹಳ ವಿಷಾದವೆನಿಸಿತು. ನಿರುಪಾಯನಾಗಿ ಸಿಟ್ಟಿಗೆ ಬಂದು—''ಏಕೆ? ಮದುವೆಯನ್ನೇಕೆ ಒಲ್ಲೆ?'' ಎಂದು ಕೇಳಿದ.

''ನನಗೆ ಮನಸ್ಸಿಲ್ಲ.'' ಇಷ್ಟಲ್ಲದೆ ಕನಕನು ಮತ್ತೆ ಉತ್ತರವನ್ನೇನೂ ಕೊಡಲಿಲ್ಲ. ಪಾಪ ಏನು ಉತ್ತರ ಕೊಡಬೇಕು?

''ಏಕೆ ಮನಸ್ಸಿಲ್ಲ?'' ಪ್ರಮೋದನು ಮತ್ತೆ ಪ್ರಶ್ನಿಸಿದ.

ಕನಕಲತಾ ನಿರುತ್ತರಳಾದಳು. ಆದರಿಂದ ಪ್ರಮೋದನ ಸಿಟ್ಟು ಗಡಿ ದಾಟಿತು. ಅವನು ಗಟ್ಟಿ ಗಟ್ಟಿಯಾಗಿ ಅದೇ ಪ್ರಶ್ನೆಯನ್ನು ಕೇಳಹತ್ತಿದ. ಪಾಪ, ಕನಕ ಅರ್ಧ ಸತ್ತವಳಂತೆ ಆದಳು. ಅವಳ ತಲೆ ತಿರುಗಹತ್ತಿತು. ಅವಳಿಗೆ ಹುಡುಕಿದರೂ ಉತ್ತರ ಸಿಗಲಿಲ್ಲ.

" ನಿನ್ನ ಮನಸ್ಸೆ! ಮದುವೆಯಾಗುವಾಗ ಹಿಂದುಗಳಲ್ಲಿ ಹುಡುಗೆಯರ ಇಚ್ಛಾ-ಅನಿಚ್ಛೆಗಳನ್ನು ಕೇಳುವವರಾರು? ನಿನ್ನ ಮನಸ್ಸಿರಲಿ, ಇಲ್ಲದಿರಲಿ, ಇದರಿಂದೇನು, ನನ್ನ ಇಚ್ಛೆಯೊಂದೇ ಸಾಕು." ಪ್ರಮೋದನು ಹೇಳಿದ.

ಕನಕ ಮುಂದೆ ಮಾತನಾಡದಾದಳು. ತನ್ನ ಮಾತಿನಿಂದ ತಾನೇ ನಾಚಿಕೆಪಟ್ಟುಕೊಳ್ಳಹತ್ತಿದಳು. ಅವಳ ಶುಷ್ಕವಾದ ಅಧರಗಳು ತಮ್ಮಷ್ಟಕ್ಕೆ ತಾವೇ ಕಂಪಿಸಹತ್ತಿದುವು. ಕಣ್ಣು ಬೇರೆ ಕಡೆಗೆ ಹೊರಳಿಸಿ ಒಂದೇ ಸವನೆ ನೋಡಹತ್ತಿದಳು.

" ನನ್ನ ಇಚ್ಛೆಯೊಂದೇ ಸಾಕು! ನೀನು ಮದುವೆ ಮಾಡಿಕೊಳ್ಳಲೇ ಬೇಕು!" ಪ್ರಮೋದನು ಮತ್ತಿಷ್ಟು ಸಿಟ್ಟಿಗೆದ್ದು ಹೇಳಿದ.

ಕನಕಲತಾನಲ್ಲಿ ಒಂದು ದೈವ-ಶಕ್ತಿಯ ಸಂಚಾರವಾಯಿತು. " ಅಣ್ಣ, ಮನಸ್ಸಿಲ್ಲದೆ ಮದುವೆ ಹೇಗೆ ಸಾಧ್ಯ? ಇದನ್ನು ನೀನೇ ಹೇಳುತ್ತಿದ್ದಿಯಲ್ಲ? ಇಂದು ನೀನು ನಿನ್ನ ಮಾತನ್ನೇ ಬದಲಿಸುವೆಯಾ?" ಆವೇಶದಿಂದ ಕನಕ ಲತಾ ಕೇಳಿದಳು.

## ಉದ್ಧಾರ

ಕನಕಲತಾ ಆ ದಿವಸವನ್ನಂತೂ ಅತ್ತು-ಕರೆದು ಕಳೆದಳು. ಅವಳು ಅಳುವುದನ್ನು ನೋಡಿ ನೀರಜಾ ನೊಂದುಕೊಂಡು ಕೇಳಿದಳು. ಕನಕನೂ ಎಲ್ಲ ಸಂಗತಿಯನ್ನು ಸ್ಪಷ್ಟವಾಗಿ ಹೇಳಿದಳು. ಇದೆಲ್ಲವನ್ನು ಕೇಳಿ ಮೊದಲು ನೀರಜಾನಿಗೆ ದಯೆಹುಟ್ಟಿತು; ಆದರೆ ಆ ಮೇಲೆ ಪ್ರಮೋದನಿಂದ ಎಲ್ಲ ಸಂಗತಿ ಗೊತ್ತಾಯಿತು. ಆಗ ಅವಳು ಎಲ್ಲ ದೋಷವೂ ಕನಕನದೇ ಎಂದು ತಿಳಿದಳು. ನೀರಜಾ ತನ್ನ ಪತಿ-ಭಕ್ತಿಯಿಂದ ಪ್ರಮೋದನ ದೋಷವನ್ನೆಣಿಸುತ್ತಿದ್ದಿಲ್ಲ. ಪ್ರಮೋದನು ಅನ್ಯಾಯವನ್ನೆಂದಿಗೂ ಮಾಡಲಾರನೆಂದು ಅವಳು ತಿಳಿಯುತ್ತಿದ್ದಳು. ಗಂಡನ ಮಾತನ್ನು ಅವಳು ವೇದ-ವಾಕ್ಯವೆನ್ನುತ್ತಿದ್ದಳು.

ಗಂಡನ ವಿರುದ್ಧ ಯಾರೇ ಇರಲಿ, ಏನಾದರೂ ಆಡಿದರೆ, ಅವರನ್ನು ಶತ್ರುವೆಂದು ಭಾವಿಸುತ್ತಿದ್ದಳು ಅದಕ್ಕಾಗಿಯೇ ಅವಳು ಕನಕನ ಮೇಲೆಯೂ ಬೆಂಕಿಯಾದಳು. ಕನಕ ದ್ರೋಹಿಯೆಂದು ಅವಳ ಅಭಿಪ್ರಾಯ. ಇಲ್ಲವಾದರೆ ಎಂದಿಗೂ ಪ್ರಮೋದಸು ಇಷ್ಟು ಸಿಟ್ಟಾಗುತ್ತಿದ್ದಿಲ್ಲ.

ಹಗಲೆಲ್ಲ ಕನಕ ಏಕಾಂತದಲ್ಲಿ ಕುಳಿತುಕೊಂಡು ಅಳುತ್ತಿದ್ದಳು. "ಕನಕ ನಿಮ್ಮ ಮನಸ್ಸನ್ನು ಬಲ್ಲೆ. ಹಿರಣ್ಮಕುಮಾರರನ್ನು ಬಿಟ್ಟು ಯಾರನ್ನೂ ಮದುವೆಯಾಗುವುದಿಲ್ಲ — ಅಲ್ಲವೆ? ಇದು ನಿಮ್ಮ ಅಣ್ಣಂದಿರಿಗೆ ಗೊತ್ತಾದರೆ ಅವರು ಮತ್ತಿಷ್ಟು ಸಿಟ್ಟಿಗೇಳುವರು. ಇದಕ್ಕಂಜಿಯೇ ನಾನು ಇನ್ನೂ ಅವರಿಗೆ ಹೇಳಿಲ್ಲ. ಅವರು ನಿಮ್ಮ ಅಣ್ಣಂದಿರ ಶತ್ರುಗಳು. ಅವರಿಗೇಕೆ ಮನಸೋತಿರುವೆ?" ಎಂದಳು ನೀರಜಾ.

"ಹಿರಣ್ಮಕುಮಾರರು ಎಂದಿಗೂ ಅಣ್ಣನ ಶತ್ರುಗಳಾಗರು — ಈ ಮಿಥ್ಯಾವಿಶ್ವಾಸವು ಅವನ ಮನಸ್ಸಿನಲ್ಲೇಕೆ ಮನೆ ಮಾಡಿದೆಯೊ ಏನೊ." ಕನಕಲತಾ ಉತ್ತರವಿತ್ತಳು.

"ಇಷ್ಟು ಕೇಳಿಯೂ ನಿಮ್ಮ ಅಣ್ಣಂದಿರ ವಿಶ್ವಾಸವು ಸುಳ್ಳೆಂದು ಹೇಳುತ್ತೀರಿ. ನಮ್ಮವರೇ ದ್ರೋಹಿಗಳೇನು ಹಾಗಾದರೆ. ನನಗೆ ಮಾತ್ರ ಇನ್ನು ಏನೂ ಹೇಳಬೇಡಿರಿ. ನಾನಂತೂ ಹೋಗುತ್ತೇನೆ." ಎಂದಳು ನೀರಜಾ.

ನೀರಜಾ ಕನಕನನ್ನು ಅತ್ಯಂತ ಪ್ರೀತಿ ಮಾಡುತ್ತಿದ್ದಳು. ಅವಳೂ ಇಂದು ಅವಳ ಮೇಲೆ ಸಿಟ್ಟಾಗಿ ಹೊರಟುಹೋದಳು. ಆ ದಿವಸ ರಾತ್ರಿ ಏನು ಮಾಡಿದರೂ ಕನಕಳಿಗೆ ನಿದ್ದೆ ಬರಲೇ ಇಲ್ಲ.

ನಸುಕಿನೊಳಗೆ ಎದ್ದಳು. ಮನಸ್ಸನ್ನು ಶಾಂತಗೊಳಿಸುವ ಅಭಿಪ್ರಾಯದಿಂದ ದಾಸಿಯ ಕೂಡ ನದಿಗೆ ಮೈ ತೊಳೆದುಕೊಳ್ಳಲು ಹೋದಳು. ಸುಶೀಲಾನು ತೀರಿಕೊಂಡ ದಿವಸವೂ ನದಿಗೆ ಸ್ನಾನ ಮಾಡಲು ಹೋಗಿದ್ದಳು. ಮೆಲ್ಲ ಮೆಲ್ಲಗೆ ಮುಳುಗಲು ಮುಂದೆ ಸಾಗಿದಳು. ಈ ಸಾರೆ ಮುಳುಗಿದರೆ ಉಳಿಸುವವರಾರೂ ಇಲ್ಲವೆಂದು ಅವಳು ಯೋಚಿಸಿದಳು. ಈಗ ಆ ಹಿರಣ್ಮಕುಮಾರರು ಅವಳನ್ನು ಉಳಿಸಿಕೊಳ್ಳಲು ಬರಲಾರರು. ಕನಕಲತಾ ಈ ಪ್ರಕಾರ ಬಗೆಬಗೆಯಾಗಿ ಆಲೋಚನೆ ಮಾಡುತ್ತ ತಲೆಗೆ ಕೈ ಹಚ್ಚಿಕೊಂಡು ಗುಣುಗುಣು ಎನ್ನಹತ್ತಿದಳು ಮನಸ್ಸಿನಲ್ಲಿ.

ಕಣ್ಣೀರನ್ನೊರಸಿಕೊಳ್ಳಲು ಕೈಯೆತ್ತಿದಳು. ನೋಡುತ್ತಾಳೆ, ಮುಂದೆ ಹಿರಣ್ಯಕುಮಾರರು ನಿಂತಿದ್ದಾರೆ!

ಆಗ ಅವರ ಮೈಯಲ್ಲಿ ಸರಿಯಾಗಿರಲಿಲ್ಲ. ಆದುದರಿಂದ ಬಿಡುವು ತೆಗೆದು ಕೊಂಡಿದ್ದರು. ಇದೇ ಬಿಡುವಿನಲ್ಲಿ ಅವರು ಕಲಕತ್ತೆಗೆ ಬಂದಿದ್ದರು. ಮುಂಜಾನೆ-ಸಂಜೆಗೆ ಅಡ್ಡಾಡಲು ಅವರು ಇಲ್ಲಿಗೇ ಬರುತ್ತಾರೆ. ನದಿಯ ದಂಡೆಯ ಮೇಲೆ ಅಡ್ಡಾಡುವುದರಿಂದ ಅವರಿಗೆ ಮೋಜೆನಿಸುತ್ತಿತ್ತು. ಹತ್ತಿರದಲ್ಲಿಯೇ ನಿಂತಿದ್ದರು. ವಿಸ್ಮಯದಿಂದ ಕನಕ ಅವರನ್ನೇ ನೋಡಹತ್ತಿದಳು. ಇಬ್ಬರೂ ಮಂತ್ರಮುಗ್ಧರಂತಿದ್ದರು. ಇಬ್ಬರೂ ಅಪರಿಚಿತರಂತೆ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಇಬ್ಬರ ಹೃದಯಗಳೂ ಉಕ್ಕಿ ಬಂದಿದ್ದುವು. ಆದರೆ ಬಾಯಿಂದ ಮಾತೇ ಹೊರಡುತ್ತಿದ್ದಿಲ್ಲ.

"ನಿಮ್ಮನ್ನು ಕಾಣಲು ಮನಸ್ಸು ಹಾತೊರೆಯುತ್ತಿತ್ತು; ಆದರೆ ಹಾಗೆ ಮಾಡುವುದು ಅನುಚಿತವೆಂದು ಭಾವಿಸಿ ಸುಮ್ಮನಿದ್ದೆ. ಇಂದೂ ನಾನ್ನು ಬರುವ ಮುನ್ನ ಇದೇ ಪ್ರಶ್ನೆಯಿದ್ದಿತ್ತು: ಆದರೆ ಇಂದು ನಾನು ಮನಸ್ಸನ್ನು ಅಂಕಿತದಲ್ಲಿಡದೆ ಹೋದೆ. ಕನಕ, ನನ್ನನ್ನು ಕ್ಷಮಿಸಿರಿ. ನಾನು ಈಹೊತ್ತು ಬರಬಾರದಿತ್ತು—ಉಹೂಂ—ಎಷ್ಟೋ ದಿವಸಗಳಾದಮೇಲೆ ನಿಮ್ಮನ್ನು ಕಂಡೆ." ತುಸು ಹೊತ್ತಾದ ಮೇಲೆ ಹಿರಣ್ಯಕುಮಾರರು ಹೇಳಿದರು.

ಹಿರಣ್ಯರು ಬರುವುದು ಒಳ್ಳೆಯದಲ್ಲವೆಂದು ಮನಸ್ಸಿನೊಳಗೆಯೇ ಎಂದು ಕೊಳ್ಳುತ್ತಿದ್ದಳು ಕನಕ. ಆದರೆ ಬಾಯಿಂದ ಹೇಳದೆ ಸುಮ್ಮನಿದ್ದಳು.

"ಕನಕ! ನಿಮ್ಮಲ್ಲಿಂದ ಹೋದಮೇಲೆ ನಾನು ಕಷ್ಟದಿಂದ ದಿನಗಳೆಯ ಹತ್ತಿದೆ. ಆ ವೇದನೆಯನ್ನು ತಡೆಯಲಾರದೆಯೇ ಇಂದು ನಾನು ಇಲ್ಲಿಗೆ ಬಂದಿದ್ದೇನೆ. ಈ ಅನ್ಯಾಯವನ್ನು ನೀವು ಕ್ಷಮಿಸುವುದಿಲ್ಲವೆ? ವಿಷವು ಮೃತ್ಯುವಿಗೆ ಉಪಯೋಗ ಬೀಳುತ್ತದೆ. ಅದರಂತೆ ಈ ಮೃತ್ಯುಯಾತನೆಯಿಂದ ಮುಕ್ತನಾಗಲು ಈ ಅನ್ಯಾಯ ಕಾರ್ಯವೇ ಉಚಿತವೆಂದು ನಾನು ಆಲೋಚನೆ ಮಾಡಿದೆ. ಕನಕ, ನನ್ನ ಈ ಗುರುತರವಾದ ಅಪರಾಧವನ್ನು ಕ್ಷಮಿಸಬೇಕು. ನೀವು ಬಂದಾಗಿನಿಂದ ನನ್ನ ಶಾಂತಿ ನಷ್ಟವಾಗಿದೆ. ನನ್ನ ಸುಖವು ಸೂರೆಯಾಗಿದೆ. ಯಾವಾಗಲೂ ನಿಮ್ಮ ಕನಕ-ಮೂರ್ತಿ ನನ್ನ ಕಣ್ಣಮುಂದೆ ಕಟ್ಟಿಕರೆಯುತ್ತಿದೆ. ಕನಕ, ನಿಜವಾಗಿಯೂ ನಾನು ನನ್ನ ಹೃದಯವನ್ನೇ ಕಳೆದು ಕೊಂಡಿದ್ದೇನೆ." ಮತ್ತೆ ಹಿರಣ್ಯಕುಮಾರರೆಂದರು.

ಹಿರಣ್ಯಕುಮಾರರು ಆವೇಶದಲ್ಲಿ ಇಷ್ಟೆಲ್ಲ ಆಡಿಬಿಟ್ಟರು. ಪಾಪ, ಕನಕಲತಾ ಇದಕ್ಕೆ ಏನು ಉತ್ತರ ಕೊಡಬೇಕು ? ಅವಳ ಪದ್ಮನಯನಗಳಲ್ಲಿ ನೀರು ತುಂಬಿಬಂದುವು. ಅವೇ ಅವರ ಮಾತಿಗೆ ಉತ್ತರ ಕೊಟ್ಟುವು.

" ಕನಕ, ನನ್ನ ಮಾತಿಗೆ ಉತ್ತರ ಕೊಡಿರಿ. ನನ್ನ ಜೀವನ-ಮರಣಗಳು ಆಗುಹೋಗುಗಳು ನಿಮ್ಮ ಉತ್ತರವನ್ನೇ ಅವಲಂಬಿಸಿವೆ. ನನ್ನ ಪ್ರೇಮಕ್ಕೆ ಪ್ರತಿದಾನವು ಸಿಗುವುದೆ ? " ಮತ್ತೆ ಹಿರಣ್ಯಕುಮಾರರು ಮಾತನಾಡಿದರು.

" ಹೃದಯವನ್ನು ಸೀಳಿ ತೋರಿಸಲು ಬರುವಂತಿದ್ದರೆ, ನಿಮಗೆ ಉತ್ತರ ಕೊಡುತ್ತಿದ್ದೆ. " ಕನಕನು ಮನಸ್ಸಿನಲ್ಲಿಯೇ ಎಂದುಕೊಂಡಳು. ಆದರೆ ಅವಳ ಈ ಮಾತು ಬಾಯಿಂದ ಹೊರಗೆ ಬೀಳಲಿಲ್ಲ—ಅವಳು ಏನನ್ನೂ ಆಡಲಾರದಾದಳು.

" ಕನಕ, ಮನಸ್ಸಿನ ವೇದನೆಯನ್ನು ಇನ್ನು ಹೆಚ್ಚು ಹೊತ್ತು ತಡೆಯಲಾರೆ. ನಿಮ್ಮ ಇಚ್ಛೆಯನ್ನೇ ಎಲ್ಲವೂ ಅವಲಂಬಿಸಿವೆ. ನೀವು ಸಮ್ಮತಿಯಿತ್ತರೆ ನಿಮ್ಮ ಅಣ್ಣ ಏನೂ ಅಡ್ಡ ಬರುವುದಿಲ್ಲ. ನನಗೆ ವಿಶ್ವಾಸವಿದೆ, ಕನಕ ! ನೀವು ಮುಳುಗುತ್ತಿದ್ದಿರಿ; ಉಳಿಸಿದೆ ! ಈ ವಿಚಾರದಿಂದ, ಕೃತಜ್ಞತಾಸ್ವರೂಪವಾಗಿ, ಪ್ರಮೋದನು ನಿಮ್ಮನ್ನು ನನಗೆ ಕೊಡಲು ಅಡ್ಡ ಬರುವುದಿಲ್ಲ. ನನ್ನ ಸುಖವೆಲ್ಲವೂ ನಿಮ್ಮ ಮನಸ್ಸನ್ನೇ ಅವಲಂಬಿಸಿದೆ. ನಾನು ನಿಮಗೆ ಕೃತಜ್ಞತೆಯನ್ನು ಬೇಡುವುದಿಲ್ಲ — ಪ್ರೇಮಕ್ಕೆ ಪ್ರತಿಫಲವಾಗಿ ಪ್ರೇಮವನ್ನೇ ಬೇಡುತ್ತೇನೆ— ನಾನು ನಿಮ್ಮ ಪ್ರೇಮವನ್ನೇ ನಚ್ಚಿಕೊಂಡಿದ್ದೇನೆ. ನೋಡಿರಿ, ನಚ್ಚಿನ ಎಮ್ಮೆ ಕೋಣವನ್ನು ಈದಂತಾಗಬಾರದು ! " ಕನಕನು ಸುಮ್ಮನಾದುದನ್ನು ನೋಡಿ ಹಿರಣ್ಯಕುಮಾರರು ಮತ್ತೆ ಮಾತನಾಡಿದರು.

ಇಷ್ಟು ಹೊತ್ತಿಗೆ ಹೊತ್ತೇರಿತು. ಪೂರ್ವಾಕಾಶವು ಉಜ್ವಲವಾಗಹತ್ತಿತು. ಗಂಗಾಸ್ನಾನ ಮಾಡುವವರ ಸಂದಣಿ ಹೆಚ್ಚಿತು. ಹಕ್ಕಿಗಳ ಚಿಲಿ-ಪಿಲಿ ಸಪ್ಪಳವನ್ನು ಕೇಳಿ ಕನಕನ ಮೋಹವು ಭಂಗವಾಯಿತು !

" ಇನ್ನು ಹೆಚ್ಚು ಹೊತ್ತು ನಿಲ್ಲಬೇಡಿರಿ. " ಸಾಹಸ ಮಾಡಿ ಕನಕಳು ಹೇಳಿದಳು. ಈ ಮಾತನ್ನು ಕೇಳಿದಾಗಲೇ ಹಿರಣ್ಯರಿಗೆ ಎಚ್ಚರಿಕೆ ಹುಟ್ಟಿತು. ನಿಜವಾಗಿಯೂ ಇನ್ನು ಇಲ್ಲಿ ನಿಲ್ಲುವುದು ಅನುಚಿತವೆಂದು ತಿಳಿದರು.

" ಒಳ್ಳೆಯದು, ನಾನು ಹೋಗುತ್ತೇನೆ. ಇನ್ನು ಯಾವಾಗ ಕೂಡುವೆವೋ, ಏನೋ. ಕೂಡುವೆವೊ ಇಲ್ಲವೋ, ಇದನ್ನು ಹೇಳುವುದು ಸಾಧ್ಯವಿಲ್ಲ.

ಆದರೆ ಹೋಗುವುದಕ್ಕಿಂತ ಮುಂಚೆ ನೀವು ನನ್ನನ್ನು ಪ್ರೀತಿಸುತ್ತೀರೊ, ಇಲ್ಲೋ ಕೇಳಬೇಕೆನ್ನುತ್ತೇನೆ" - ಇಷ್ಟು ಹೇಳಿ ಹಿರಣ್ಯಕುಮಾರರು ಹೊರಡಲನುವಾದರು. ಕನಕನ ಅಧರಗಳ ಮೇಲೆ ಮಿಂಚು ಮಿಂಚಿತು. ಅವಳು ನಿಂತು-ನಿಂತು "ಹೂಂ - ನಾನು ಪ್ರೀತಿಸುತ್ತೇನ!" ಎಂದಳು.

ಈ ಶಬ್ದಗಳು ಹಿರಣ್ಯಕುಮಾರರ ಕಿವಿಯನ್ನು ಸೇರಿದುವು. ಅವರಿಗೆ ಬ್ರಹ್ಮಾಂಡವೆಲ್ಲ ತಿರುಗುತ್ತಿರುವಂತೆ ಕಾಣಿಸಹತ್ತಿತು. ಹೃದಯಕ್ರಿಯೆ ವೇಗವಾಗಿ ನಡೆಯಿತು. ಹರುಷದಿಂದ ಕಂಪಿಸಹತ್ತಿದರು. "ಒಳ್ಳೆಯದು, ಇನ್ನು ಹೋಗುತ್ತೇನೆ." ಎಂದರು ಹಿರಣ್ಯರು. ನಾವನ್ನು ದಂಡೆಯ ಮೇಲೆಯೇ ಬಿಟ್ಟಿದ್ದರು. ಹೋಗಿ ಅದರೊಳಗೆ ಕುಳಿತರು. ಅದು ಮರೆಯಾಗುವವರೆಗೂ ಸತೃಷ್ಣ ನೇತ್ರಗಳಿಂದ ಅವನ್ನೇ ನೋಡುತ್ತಿದ್ದಳು ಕನಕ.

## ನಿರಾಶೆ

ಕನಕನು "ಹೂಂ" ಎಂದಳು. ಆ ಶಬ್ದವು ಹಗಲೆಲ್ಲ ಹಿರಣ್ಯಕುಮಾರರ ಕಿವಿಯೊಳಗೆ ವೀಣೆಯ ಝುಂಕಾರದಂತೆ ಪ್ರತಿಧ್ವನಿಸುತ್ತಿತ್ತು. ಇಂಥ ಸವಿಮಾತನ್ನು ಹಿರಣ್ಯರು ಎಂದೂ ಕೇಳಿದ್ದಿಲ್ಲ. ಮದುವೆಯ ಬಗ್ಗೆ ಪ್ರಮೋದನಿಗೆ ಅವರು ಮತ್ತೊಂದು ಪತ್ರ ಬರೆದರು. ಈಗ ಪ್ರಮೋದನು ಅಡ್ಡಿ ಮಾಡುವನೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ.

ಹಿರಣ್ಯರ ಪತ್ರವನ್ನೋದಿ ಸುಟ್ಟ ಬದನೇಕಾಯಿಯಂತಾಯಿತು ಪ್ರಮೋದನ ಮುಖ. ಕನಕನು ವಿವಾಹಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲವೆಂಬ ಚಿಂತೆಯೊಂದಿತ್ತು. ಇಂಥ ಹೊತ್ತಿನಲ್ಲಿ ಈ ಪತ್ರವು ಗಾಯದ ಮೇಲೆ ಬರೆ ಕೊಟ್ಟಿತು. ಹಿರಣ್ಯರಿಗೆ ಕನಕನನ್ನು ಕೊಟ್ಟು ವಿವಾಹವೆ! ಹಿರಣ್ಯರ ಈ ಸ್ಪರ್ಧೆ ಆತನಿಗೆ ಅಸಹ್ಯವೆನಿಸಿತು. ಪ್ರಮೋದನು ಸ್ಪಷ್ಟವಾಗಿ ಉತ್ತರ ಬರೆಯಲು ಕುಳಿತುಕೊಂಡ. ಆದರೆ ಏನು ಬರೆಯಬೇಕು? ನೀವು ನನಗೆ ಆಗದವರು. ಆದುದರಿಂದ ಕನಕನನ್ನು ಉಳಿಸಿದ್ದರೂ ಆವಳು ನಿಮಗೆ ಸಿಗುವುದು ಸಾಧ್ಯವಿಲ್ಲವೆಂದೆ? ಕನಕನ ಮದುವೆಯನ್ನು ಮಾಡುವ ಮನಸ್ಸಿಲ್ಲವೆಂದು ಬರೆಯಬೇಕೆ? ಇದು ಎಂಥ ಸುಂದರವಾದ ಕಾರಣ! ಸರಿ, ಇದನ್ನೇ ಬರೆದರಾಯಿತೆಂದು ನಿಶ್ಚಯ ಮಾಡಿಕೊಂಡು ಪ್ರಮೋದನು ಕನಕನನ್ನು ಕರೆದ. ವಿವಾಹಕ್ಕೆ

ಒಪ್ಪುವುದಿಲ್ಲವೆಂಬುದು ಆತನಿಗೆ ಗೊತ್ತಿದ್ದಿತು. ಆ ದಿವಸ ವಿವಾಹದ ಪ್ರಸ್ತಾವವನ್ನೆತ್ತಿ ಅವಳನ್ನು ಪೀಡಿಸಿದ್ದ. ಅವಳಿಗೆ ಕಟುವಚನಗಳನ್ನೂ ಆಡಿದ್ದ. ಇಂದು ಅವಳ ಆ ಕಣ್ಣೀರನ್ನೊರೆಸಲು ಕರೆದ. ಕನಕಲತಾ ಅಂಜಂಜುತ್ತ ಬಂದಳು. ಪ್ರಮೋದನ ಮೋರೆಯಮೇಲೆ ಸಿಟ್ಟಿನ ಲಕ್ಷಣವಿಲ್ಲದುದನ್ನು ಕಂಡು ಅವಳ ಜೀವದೊಳಗೆ ಜೀವ ಬಂದಿತು.

"ನೋಡು, ಹಿರಣ್ಮಯಕುಮಾರರು ನಿನ್ನನ್ನು ಮದುವೆಯಾಗಬೇಕೆನ್ನುತ್ತಾರೆ. ನನಗೀ ಪ್ರಸ್ತಾವವು ಮನಸ್ಸಿಗೆ ಬಂದಿಲ್ಲ. ಹೇಳು, ಇಂದು ನಿನ್ನ ಇಚ್ಛೆ ಈಪರಿ ಯೇರಿತೆ? ಈಗ ನಾನು ನಿನ್ನ ಮನಸ್ಸಿನ ವಿರುದ್ಧ ಕೆಲಸ ಮಾಡೆಂದು ಹೇಳುವುದಿಲ್ಲ." ಪ್ರಮೋದನು ಹಿರಣ್ಮಯರ ಪತ್ರವನ್ನು ಕನಕನ ಕೈಗೆ ಕೊಟ್ಟು ಹೇಳಿದ.

ಕನಕನು ಪತ್ರವನ್ನು ಓದಲಾರಂಭಿಸಿದಳು. ಆದರೆ ಅವಳ ಕೈ ನಿಂತಲ್ಲಿ ನಿಲ್ಲುತ್ತಿದ್ದಿಲ್ಲ, ತನ್ನಷ್ಟಕ್ಕೆ ತಾನೇ ಕಂಪಿಸಹತ್ತಿತು. ಅವಳ ಮೋರೆ ಕೆಂಪೇರಿತು. ಹಣೆ ಬೆವರೊಡೆಯಿತು. ಕೈಯಲ್ಲಿ ಕಾಗದವನ್ನು ಹಿಡಿದುಕೊಂಡು ಸುಮ್ಮನೆ ನಿಂತುಬಿಟ್ಟಳು. ಮುಂದೆ ಒಂದು ಅಕ್ಷರವನ್ನೂ ಓದಲಿಲ್ಲ.

"ವಿವಾಹದ ಪ್ರಸ್ತಾವವನ್ನು ಓದಲೂ ಕಷ್ಟವೆನಿಸುತ್ತದೆ. ಒಳ್ಳೆಯದು, ಪತ್ರವನ್ನಿಲ್ಲಿ ಕೊಡು—" ಪ್ರಮೋದನು ಅವಳ ಭಾವವನ್ನು ನೋಡಿ ನಗುತ್ತ ನುಡಿದು, ಕನಕನ ಕೈಯೊಳಗಿನ ಪತ್ರವನ್ನು ಇಸಿದುಕೊಂಡು ಅದಕ್ಕೆ ಉತ್ತರ ಬರೆಯಲು ಕುಳಿತುಕೊಂಡ. ಕನಕನು ಹಾಗೆಯೇ ನಿಂತಿದ್ದಳು. ಬರೆಯುತ್ತ ಬರೆಯುತ್ತ ಒಮ್ಮೆ ಗೋಣೆತ್ತಿ ನೋಡಿ—"ಕನಕನಿಗೆ ಈಗ ಮದುವೆಯಾಗಲು ಮನಸ್ಸಿಲ್ಲವೆಂದು ಬರೆಯುತ್ತೇನೆ. ತಂಗಿ ಈಗಲಾದರೂ ಸಂತೋಷವಾಯಿತೆ?" ಎಂದ ಪ್ರಮೋದ.

ಈ ಮಾತನ್ನು ಕೇಳಿ ಕನಕನಿಗೆ ಬಹಳ ಸಂತೋಷವಾಗುವುದೆಂದು ಪ್ರಮೋದ ತಿಳಿದಿದ್ದ; ಆದರೆ ಹಾಗಾಗಲಿಲ್ಲ. ಕನಕನ ದುಃಖವು ಮತ್ತಿಷ್ಟು ಗಂಭೀರವಾದಂತೆ ಕಂಡಿತು. ಅರುಣನೇತ್ರಗಳಲ್ಲಿ ಕಣ್ಣೀರಿನ ಸುಳಿವೇ ಇಲ್ಲ. "ತಂಗಿ ಕನಕ, ಇಂದು ನಿನ್ನ ಭಾವ ಹೀಗೇಕಾಗಿದೆ? ಇಂದು ನಾನು ನಿನ್ನ ಮನಸ್ಸಿನ ವಿರುದ್ಧ ಏನೂ ಮಾಡುವುದಿಲ್ಲ." ಆಶ್ಚರ್ಯಾನ್ವಿತನಾಗಿ ಮತ್ತೆ ಪ್ರಮೋದನು ಹೇಳಿದ.

ಪಾಪ, ಕನಕನು ಉತ್ತರವನ್ನೇ ಕೊಡಲಿಲ್ಲ. ಅವಳ ಅಧರಗಳು ಮಾತ್ರ ನಾಚಿಕೆಯಿಂದ ಮೆಲ್ಲ-ಮೆಲ್ಲಗೆ ಅಲುಗಾಡಹತ್ತಿದುವು. ಕನಕನ ಭಾವವು ಬದಲಾದುದನ್ನು ನೋಡಿ ಪ್ರಮೋದನು ಹೌಹಾರಿದ. ಅವನು ಬಗೆಬಗೆಯ ವಿಚಾರಗಳಿಗೊಳಗಾದ.

" ತಂಗಿ ಕನಕಲತಾ, ಈ ಮದುವೆಗೆ ನನ್ನ ಒಪ್ಪಿಗೆಯಿದೆಯೆಂದು ಬಗೆದಿರುವೆಯಾ ? ಇಲ್ಲ, ನೀನು ಹೇಳಿದಂತೆಯೆ ಉತ್ತರ ಬರೆಯುತ್ತಿದ್ದೇನೆ. ಆದರೂ ನೀನೇಕೆ ಅಪ್ರಸನ್ನಳಾಗಿರುವೆ ? ನೀನು ಸುಮ್ಮನೆ ಕೊರಗುತ್ತಿರುವೆ. ಆ ದಿವಸ ಮಾತ್ರ ನಿನ್ನ ಇಚ್ಛೆಗೆ ವಿರುದ್ಧ ಮಾತನಾಡಿದ್ದೆ. ಆದರೆ ಇಂದು, ನಿನ್ನ ಮನಸ್ಸಿನಂತೆಯೇ ನಾನು ಒಪ್ಪಿರುವೆನಲ್ಲ, " ಪ್ರಮೋದನೆಂದ.

ಇಷ್ಟು ಹೇಳಿ ಕೇಳಿದರೂ ಕನಕನು ಸುಮ್ಮನಿದ್ದಳು. ಪ್ರಮೋದನಿಗೆ ದಿಗಿಲಾಯಿತು. ಆ ದಿವಸ ವಿವಾಹದ ಪ್ರಸ್ತಾವವನ್ನೆತ್ತಿದಾಗ ಕನಕನಿಗೆ ಅಷ್ಟು ದುಃಖವಾಗಿದ್ದಿತು; ಇಂದು ಪ್ರಮೋದನೇ ಬೇಡವೆನ್ನುವಾಗ ಅವಳ ಆನಂದಕ್ಕೆ ಕೊನೆಯೇ ಇರಬಾರದಾಗಿತ್ತು. ಆದರೆ ವಿಪರೀತ. ಇಷ್ಟು ಹೇಳಿದರೂ ಅವಳು ಉತ್ತರವನ್ನೇಕೆ ಕೊಡುವುದಿಲ್ಲ ? ಹಾಗಾದರೆ ಏನು, ಇಂದು ಅವಳು ಮದುವೆಯಾಗಲು ಇಚ್ಛಿಸುತ್ತಾಳೆಯೆ ? ಇದೆಲ್ಲವನ್ನು ಯೋಚಿಸುತ್ತ—" ಕನಕ, ಇಂದು ನಿನ್ನ ಮನಸ್ಸಿನೊಳಗಿದ್ದುದನ್ನೇ ಬರೆಯುತ್ತಿರುವೆ, ಆದರೂ ಇನ್ನೊಮ್ಮೆ ಹೇಳು, ಮದುವೆಯಾಗಲು ನಿಜವಾಗಿಯೂ ನಿನಗೆ ಮನಸ್ಸಿಲ್ಲವೆ ? " ಎಂದು ಕೇಳಿದ.

ಕನಕನು ಕಲ್ಲಿನಲ್ಲಿ ಕಟೆದ ಗೊಂಬೆಯಂತೆ ಸುಮ್ಮನೆ ನಿಂತಿದ್ದಳು. ಏನೂ ಉತ್ತರ ಕೊಡಲಿಲ್ಲ. " ಕನಕ, ನಿನಗೇನಾಗಿದೆ ? ಮಾತನೇಕೆ ಆಡುವುದಿಲ್ಲ? " ಪ್ರಮೋದನು ಕೇಳಿದ.

ಕನಕನು ಏನನ್ನೊ ಹೇಳಬೇಕೆಂದು ಬಾಯಿ ತೆರೆದಳು; ಒಂದೂ ಮಾತು ಹೊರಬೀಳಲಿಲ್ಲ. " ಕನಕ, ನೀನು ನನ್ನನ್ನು ಹುಚ್ಚನೆಂದು ತಿಳಿದಂತೆ ಕಾಣುತ್ತದೆ. ಮೊನ್ನೆ ಮೊನ್ನೆ ನಿನ್ನ ಇಚ್ಛೆಯಿಲ್ಲವೆಂದು ದೃಢವಾಗಿ ಹೇಳಿದ್ದೆ. ಇಂದು ಮಾತನ್ನೇ ಆಡುವುದಿಲ್ಲವಲ್ಲ? ಹೇಳಬಾರದೆ, ಮದುವೆಯಾಗುವೆಯೊ, ಇಲ್ಲೊ ? " ಬಹಳ ಹೊತ್ತಿನವರೆಗೆ ಉತ್ತರವನ್ನು ನಿರೀಕ್ಷಿಸಿ ಪ್ರಮೋದನು ಕೇಳಿದ.

ಪ್ರತ್ಯುತ್ತರವು ದೊರೆಯದುದರಿಂದ ಪ್ರಮೋದನು ಸಿಟ್ಟಿಗೇಳಹತ್ತಿದ. ಇದನ್ನು ನೋಡಿ ಕನಕನು ಕಷ್ಟದಿಂದ ನಾಚಿಕೆಯನ್ನು ಹತ್ತಿಟ್ಟು ಏನೊ ಹೇಳಲು ಯತ್ನಿಸಿದಳು; ಮತ್ತೂ ಬಾಯೊಳಗಿಂದ ಮಾತೇ ಹೊರಡಲಿಲ್ಲ. ಹೇಳುವ ಆವಶ್ಯಕತೆಯೇ ಉಳಿದಿದ್ದಿಲ್ಲ. ಇರಲಿ, ಇವಳು ಮದುವೆಯಾಗಲು ಇಚ್ಛುಕಳಿದ್ದಾಳೆಂದು ಪ್ರಮೋದನು ತಿಳಿದುಕೊಂಡ. ಇಲ್ಲದಿದ್ದರೆ ಅವಳು ಇಷ್ಟು ಸಂಕೋಚಪಡುತ್ತಿದ್ದಳೆ? ಅಂದು ಕನಕನು ಏನು ಮಾಡಿದರೂ ಯಾಮಿನಿಯು ಕೂಡ ಮದುವೆಯಾಗಲು ಒಪ್ಪಲಿಲ್ಲ, ಆದರೆ ಇಂದು ಅವಳು ಹಿರಣ್ಯಕುಮಾರರ ಕೈಹಿಡಿಯಲು ಸಿದ್ಧಳಿದ್ದಾಳೆ. ಎಂದು ಆಲೋಚಿಸಿ ಪ್ರಮೋದನ ಪಿತ್ತವು ತಲೆಗೇರಿತು. ಆ ದಿವಸ ಕನಕನು ಮದುವೆಗೆ ಒಪ್ಪದೆ ಇರಲಿಕ್ಕೆ ಇದೇ ಕಾರಣವಿರಬೇಕು. ಇದಕ್ಕೆ ಕಾರಣ ಹಿರಣ್ಯಕುಮಾರ, ಎಂದು ತಿಳಿದಮೇಲಂತೂ ಮನಸ್ಸಿನೊಳಗೆಯೇ ಅವಳ ಮೇಲೆ ಮತ್ತಿಷ್ಟು ಬೆಂಕಿಯಾದ. ಹಿರಣ್ಯರ ಸ್ಥಳದಲ್ಲಿ ಮತ್ತೆ ಯಾರಾದರೂ ಇದ್ದಿದ್ದರೆ ಪ್ರಮೋದನು ಅಷ್ಟು ಸಿಟ್ಟಾಗುತ್ತಿದ್ದಿಲ್ಲ. ನಿನ್ನೆ ತಾನು ಸಿಟ್ಟಾದೆ, ಅದಕ್ಕೆಂದೇ ಇಂದು ಒಪ್ಪಿಕೊಂಡಿದ್ದಾಳೆಂದು ತಿಳಿಯುತ್ತಿದ್ದ. ಆದರೆ ಈಗ ಹಿರಣ್ಯರ ಹೆಸರು ಇದ್ದುದರಿಂದ ಇದೆಲ್ಲ ಆತನಿಗೆ ಹೊಳೆಯಲಿಲ್ಲ. "ಕನಕ, ನಾನು ಈ ಮದುವೆಗೆ ಒಪ್ಪಿಗೆ ಕೊಡುವುದಿಲ್ಲ, ತಿಳಿಯಿತೆ!" ಸಿಟ್ಟುದುಂಬಿದ ದನಿಯಲ್ಲಿ ಪ್ರಮೋದನು ಹೇಳಿದ.

"ಬೇಡ," ಈ ಸಾರೆ ಕನಕನು ಗೋಣು ಹಾಕುತ್ತ ಹೇಳಿದಳು.

"ಈಗ ತಿಳಿಯಿತು! ಹೇಳು, ಈಗ ಏನು ಹೇಳುತ್ತಿ?" ಪ್ರಮೋದನೆಂದ.

ಉತ್ತರ ದೊರೆಯುವ ಲಕ್ಷಣವನ್ನು ಕಾಣದೆ ಮತ್ತೆ ಅವನೇ ಮಾತನಾಡಿದ. "ನೀನು ಮದುವೆ ಮಾಡಿಕೊ, ಅದಕ್ಕೆ ನಾನೇನೂ ಎನ್ನುವುದಿಲ್ಲ. ಆದರೆ ನಮ್ಮಿಬ್ಬರ ಸಂಬಂಧವು ಕಡೆತನಕ ಕಡಿದುಹೋಗುವುದು, ಚೆನ್ನಾಗಿ ವಿಚಾರ ಮಾಡಿ ನೋಡು."

ಪ್ರಮೋದನು ಹಟಮಾರಿ. ಭವಿಷ್ಯವನ್ನು ಕುರಿತು ಏನನ್ನೂ ಆಲೋಚನೆ ಮಾಡಲೇ ಇಲ್ಲ. ಮದುವೆ ಸಾಧ್ಯವಿಲ್ಲವೆಂದು ಹಿರಣ್ಯಕುಮಾರರಿಗೆ ಪತ್ರ ಬರೆದುಬಿಟ್ಟ.

# ದಲಿತ ಕುಸುಮ

ಮರುದಿವಸ ಸಂಜೆಯ ಸಮಯ; ನದಿಯ ದಂಡೆಯ ಮೇಲೆ ಕನಕನು ಕುಳಿತುಕೊಂಡು ಗುನುಗುನು ಹಾಡುತ್ತಿದ್ದಳು. ಹಾಡುತ್ತ ಹಾಡುತ್ತ ದಂಡೆಯ ಮೇಲಿನ ಗಿಡಗಳ ತುದಿಗಳನ್ನು ಮುರಿ-ಮುರಿದು ನೀರಿನೊಳಗೆ ಚೆಲ್ಲುತ್ತಿದ್ದಳು. ಅವಳ ಮನಸ್ಸು ವಿಚಾರಗಳಲ್ಲಿ ತೊಡಗಿತ್ತು.— ಒಂದು ದಿನ ನಾನೂ ಹೀಗೆಯೆ ನೀರಿನಲ್ಲಿ ಮುಳುಗಿದ್ದೆ, ಈ ಅಭಾಗಿನಿಯನ್ನು ಹಿರಣ್ಯಕುಮಾರ, ನೀವೇಕೆ ಉಳಿಸಿದಿರಿ? ನೀವು ಉಳಿಸಿದಿರೋ, ಕೊಂದಿರೊ ಹೇಗೆ ಹೇಳಲಿ? ನೀವು ಉಳಿಸಿದ ಪ್ರಾಣವನ್ನು ನೀವೇ ಏಕೆ ಕಸಿದುಕೊಳ್ಳಲಿಲ್ಲ? ನನಗೆ ಕೇವಲ ಯಾತನೆಯನ್ನಷ್ಟೇ ಬಿಟ್ಟಿರುವಿರಿ. ಈ ಯಾತನೆಯನ್ನು ಸಂಭೋಗಿಸಲಿಕ್ಕಾಗಿಯೇ ನೀವು ಉಳಿಸಿದಿರಾ? ಇಂಥ ಬಾಳನ್ನು ಉಳಿಸುವುದಕ್ಕಿಂತ ಅಳಿದಿದ್ದರೇ ಒಳ್ಳೆಯದಾಗಿದ್ದಿಲ್ಲವೆ? ಒಳ್ಳೇದು, ಉಳಿಸಿದಿರಿ, ಅದೂ ನೆಟ್ಟಗೇ ಆಯಿತು. ಇಲ್ಲದೆ ಇದ್ದರೆ ಈ ಯಾತನೆಗಳನ್ನು ಯಾರು ಭೋಗಿಸುತ್ತಿದ್ದರು? ನಿಮ್ಮನ್ನು ಕಾಣುವ ಸುಖವು ಯಾರಿಗೆ ಸಿಗುತ್ತಿತ್ತು? ಆ ಸುಖಕ್ಕೆ ಸಾಯುವತನಕ ದುಃಖವನ್ನು ಸಹಿಸಬೇಕಾಗಿ ಬಂದರೂ ಒಳ್ಳೆಯದೆ!

ಕನಕನು ಹೀಗೆ ಬಗೆ-ಬಗೆಯಾಗಿ ಆಲೋಚನೆ ಮಾಡುತ್ತಿದ್ದಳು. ಸ್ವಲ್ಪ ಸಮಯದ ಮೇಲೆ ಅವಳು ಹೊರಳಿ ನೋಡಿದಳು, ಹತ್ತಿರದಲ್ಲಿಯೇ ಹಿರಣ್ಯ ಕುಮಾರರು ನಿಂತಿದ್ದಾರೆ. ಅವರ ಮೂರ್ತಿ ಇಂದು ವಿಷಾದಮಯವಿತ್ತು. ಹಣೆಯಮೇಲೆ ಬೆವರಿತ್ತು. ಕಣ್ಣು ಕೆಂಡದಂತಾಗಿದ್ದುವು. ತುಸು ಹೊತ್ತಿನ ಹಿಂದೆ ಅತ್ತು ಬಂದಿರಬೇಕು. ಕನಕನು ಕಠೋರ ದುಃಖಸಾಗರವಲ್ಲಿ ಮುಳು-ಮುಳುಗಿ ಏಳುತ್ತಿದ್ದಳು. ಹಿರಣ್ಯರನ್ನು ನೋಡಿ ಎಲ್ಲವನ್ನೂ ಮರೆತಳು. ಅವಳ ಮನಸ್ಸಿನ ಸ್ಥಿತಿ ಬದಲಾಯಿತು. ಆದರೆ ಅವರು ಹೀಗೆ ಆಗಾಗ ಭೆಟ್ಟಿಯಾಗುವುದು ನಿಂದನೀಯವಲ್ಲವೆ ಎಂಬ ಭಾವವು ಮರುಕ್ಷಣದಲ್ಲಿಯೇ ಅವಳ ಹೃದಯದಲ್ಲಿ ಹುಟ್ಟಿತು. "ಇಂದು ನೀವು ಮತ್ತೇಕೆ ಬಂದಿರಿ? ಈ ಪ್ರಕಾರ ಕಾಣುವುದು........." ಅವಳು ಸ್ವಾಭಾವಿಕ ಇಚ್ಛೆಯ ವಿರುದ್ಧವಾಗಿ ಮಾತನಾಡಿದಳು.

"ಕನಕ, ನನ್ನ ಹೃದಯವು ಉರಿಯುತ್ತಿದೆ. ನನಗೆ ಉಚಿತ ಅನುಚಿತ ತಿಳಿಯದು. ಆದರೆ ಯಾರಿಗೂ ಕಾಣದಂತೆ ಇಲ್ಲಿಂದ ಹೊರಟುಹೋಗುವೆ.

ನಾನು ನಿನಗೆ ಎಳ್ಳಷ್ಟೂ ಹಾನಿಯಾಗಗೊಡುವುದಿಲ್ಲ. ಮದುವೆಯಾದರೆ ಮೋರೆ ತೋರಿಸುವೆನು. ಇಲ್ಲದಿದ್ದರೆ ಇಲ್ಲವೆಂದು ನಾನು ನಿನ್ನೆಯೇ ಆಣೆ ಮಾಡಿದ್ದೆ. ಆಣೆ ಮಾಡುವಾಗ ನಡೆಸೇನೆಂಬ ಆಶೆಯಿತ್ತು. ನನ್ನ ಹೃದಯವು ಭಗ್ನವಾಗುವುದು. ನನ್ನ ಪ್ರತಿಜ್ಞೆ ವ್ಯರ್ಥವಾಗುವುದೆಂದು ನನಗೆ ತಿಳಿದಿದ್ದಿಲ್ಲ. ಕನಕ, ಒಂದು ಸಾರೆ, ಕೇವಲ ಒಂದು ಸಾರೆ ನೋಡಲು ಬಂದಿದ್ದೇನೆ. ಇದೇ ನಮ್ಮಿಬ್ಬರ ಕೊನೆಯ ಮಿಲನ. ನಾನು ಈ ಬಯಕೆಯನ್ನು ಹತ್ತಿಡಬೇಕಾಗಿದೆ. ನಾನು ಅಪರಾಧಿಯೆಂಬುದನ್ನು ಬಲ್ಲೆ; ಆದರೆ ನಾನು ದುರ್ದೈವಿಯೆಂದು ತಿಳಿದು ನೀವು ಕ್ಷಮಿಸಬೇಕು.'' ಹಿರಣ್ಯಕುಮಾರರೆಂದರು. ಅವರ ಕುತ್ತಿಗೆಯ ನರಗಳು ಬಿಗಿದುಬಂದಿದ್ದುವು.

ಪಾಪ, ಇದಕ್ಕೆ ಕನಕನು ಏನು ಉತ್ತರ ಕೊಡಬೇಕು? ಅವಳ ಹೃದಯವೇನೂ ಕಲ್ಲಿನದಲ್ಲ. ''ಕನಕ, ಸರಳ ಸ್ವಭಾವದ ಕನಕ, ನಿಮ್ಮ ಅಣ್ಣನ ಪತ್ರ ಬಂದಾಗಿನಿಂದ ನನಗಾದ ನೋವನ್ನು ದೇವರೇ ಬಲ್ಲ. ಪ್ರಮೋದನು ಒಪ್ಪದಿರುವುದಕ್ಕೆ ಕಾರಣವನ್ನು ನಾನೊಂದು ಸಾರೆ ಕೇಳಬೇಕೆನ್ನುತ್ತೇನೆ.'' ಮತ್ತೆ ಹಿರಣ್ಯರು ಹೇಳಿದರು.

''ಆತನು ನಿಮ್ಮನ್ನು ಶತ್ರುವೆಂದು ತಿಳಿಯುತ್ತಾನೆ.'' ಬಹಳ ಹೊತ್ತು ಸುಮ್ಮನಿದ್ದು ವೇದನೆ ತುಂಬಿದ ಸ್ವರದಲ್ಲಿ ಕನಕ ಹೇಳಿದಳು.

ಹಿರಣ್ಯ—''ನಾನು ಆತನ ಶತ್ರುವೆ! ಅವನು ಇದನ್ನೇಕೆ ನಂಬಿದ? ನಾನು ಅವನ ಭ್ರಮೆಯನ್ನು ಹೋಗಲಾಡಿಸಲು ಹೆಣಗುವೆ.''

ಕನಕ—''ಈ ಭ್ರಮೆ ಹೋಗಲಾರದು.'' ಎಂದು ಕನಕಲತಾ ಅವರ ಕಾರಣವನ್ನು ಸಂಕ್ಷೇಪವಾಗಿ ತಿಳಿಸಿದಳು.

''ಕನಕ, ಹಾಗಾದರೆ ನಿಮ್ಮ ಆಸೆಯನ್ನು ಬಿಟ್ಟುಬಿಡಲೆ?'' ಹಿರಣ್ಯಕುಮಾರರು ಕಂಪಿಸುವ ಸ್ವರದಲ್ಲಿ ಕೇಳಿದರು.

ಸರಿ, ಮತ್ತಿನ್ನೇನು? ಯಾರಲ್ಲಿಯೂ ಮಾತನಾಡಲು ಶಕ್ತಿಯಿರಲಿಲ್ಲ. ಇಬ್ಬರೂ ಸುಮ್ಮನೆ ಅಶ್ರುಧಾರೆಗಳಿಂದ ಹೊಸ ದಾರಿಯೊಂದನ್ನು ಸೃಷ್ಟಿಸಹತ್ತಿದರು ಬಹಳ ಹೊತ್ತಾದರೂ ಯಾರ ಬಾಯಿಂದಲೂ ಮಾತೇ ಹೊರಬೀಳಲಿಲ್ಲ. ಆದರೆ ಒಬ್ಬರು ಮತ್ತೊಬ್ಬರ ಹೃದಯವನ್ನು ಕಂಡುಕೊಂಡರು. ''ಕನಕ, ನಾವಿಬ್ಬರೂ ಹೃದಯದಲ್ಲಿ ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ; ಮನಃಪೂರ್ವಕ

ವಾಗಿ ನಮ್ಮಿಬ್ಬರ ಮದುವೆಯಾಗಿದೆ. ಕನಕ, ಪ್ರಮೋದನ ಒಪ್ಪಿಗೆಯಿಲ್ಲದೆ ವಿವಾಹವು ಆಗಲಾರದೆ ?" ಬಹಳ ಹೊತ್ತಿನ ನಂತರ ಹಿರಣ್ಯಕುಮಾರರು ಕೇಳಿದರು.

ಕನಕ — "ಉಶ್ ! ಇದು ಹೇಗೆ ಸಾಧ್ಯ ?"

"ನಿಮಗೆ ನನ್ನಂತೆ ಮದುವೆಯಾಗಲು ಮನಸ್ಸಿಲ್ಲ, ಅಂತೆಯೇ ಹೀಗೆ ಹೇಳುತ್ತೀರಿ. ನೀವು ನನ್ನ ಕೈ ಹಿಡಿಯದಿದ್ದರೆ ನನ್ನ ಬಾಳು ಹಾಳಾಗುವುದು. ನನ್ನ ಆಯುಷ್ಯವೇ ನಷ್ಟವಾಗುವುದು. ಇಷ್ಟೆಲ್ಲ ಗೊತ್ತಿದ್ದರೂ ನೀವು ನಿಮ್ಮ ಅಣ್ಣನಿಗೆ ಹೆದರಿಕೊಂಡು ನನ್ನನ್ನು ದುಃಖಸಾಗರದಲ್ಲಿ ನೂಕಲು ಹಿಂದೆ-ಮುಂದೆ ನೋಡುವುದಿಲ್ಲ ! ಕನಕ, ನಿಮ್ಮ ನಿಸ್ವಾರ್ಥ ಭ್ರಾತೃಸ್ನೇಹವು ಎಷ್ಟು ಭಯಂಕರ ವಾಗಿದೆಯಲ್ಲ ! ನಾನೇ ನಿಮ್ಮ ಸಹೋದರನಾಗಿದ್ದರೆ, ಈ ಸ್ವರ್ಗೀಯ ಭ್ರಾತೃ ಸ್ನೇಹವು ನನಗೆಯೇ ಸಿಗುತ್ತಿದ್ದಿತೆ ?" ನಿರಾಶೆಯಿಂದ ಹಿರಣ್ಯಕುಮಾರರು ಹೇಳಿದರು.

ಕನಕ ಸುಮ್ಮನೆ ಅಳಹತ್ತಿದಳು. ಹಿರಣ್ಯರ ಪ್ರತಿಯೊಂದು ಮಾತು ಬಾಣದಂತೆ ನಡುತ್ತಿದ್ದಿತು. ಕನಕನು ಹಿರಣ್ಯರನ್ನು ಪ್ರೀತಿಸುವುದಿಲ್ಲವೆಂದು, ಹಿರಣ್ಯಕುಮಾರರೇ ಆಡಿಬಿಟ್ಟರು ಇದು ಸತ್ಯವಾಗಿದ್ದರೆ ದುಃಖಪಡಲು ಕಾರಣವೇ ಇದ್ದಿಲ್ಲ. ಈ ವೇದನೆ ಯಾರಿಗಾಗಿ ? ಯಾರಿಗಾಗಿ ಅವಳು ಅಣ್ಣನ ಆಜ್ಞೆಯನ್ನುಲ್ಲಂಘಿಸಿದಳು ? ಯಾರಿಗಾಗಿ ಅಣ್ಣನನ್ನು ಸಿಟ್ಟಿಗೆಬ್ಬಿಸಿದಳು ? ಹಿರಣ್ಯರಿಗಿಂತ ಪ್ರಮೋದನನ್ನು ಹೆಚ್ಚು ಪ್ರೀತಿಸುತ್ತಿದ್ದರೆ ಇಂದು ಅವಳಿಗೆ ಈ ಕಷ್ಟವಾಗುತ್ತಿದ್ದಿತೆ ? ಅಣ್ಣನ ವಿರೋಧದಿಂದ ಅವಳು ಈ ವಿವಾಹಕ್ಕೆ ಒಪ್ಪಿಲ್ಲ; ಇಂತಿರಲು ಹಿರಣ್ಯಕುಮಾರರು ಹೀಗೆ ಆಡಬೇಕೆ ? ಮದುವೆಯಾಗದಿದ್ದರೆ ಕನಕನಿಗೆ ದುಃಖವಾಗುವುದಿಲ್ಲವೆ ? ಅದನ್ನು ಹಿರಣ್ಯರು ಅರಿಯರೆ ? ಹಿರಣ್ಯರು ಇಂದು ಅವಳಿಗೆ ದೋಷಿಯೆನ್ನುತ್ತಾರೆ. ಬೇಕಾದಷ್ಟು ಕಷ್ಟ ಬರಲಿ, ಅವಳು ಸಹಿಸಿಕೊಳ್ಳುವಳು. ಆದರೆ ಈ ಪ್ರಕಾರ ಅನಧಿಕಾರ ಪ್ರಯತ್ನ ವನ್ನು ಮಾಡಬಹುದೆ ? ಭ್ರಾತೃ-ಸ್ನೇಹಕ್ಕಿಂತ ಹಿರಣ್ಯರ ಪ್ರೇಮವು ಎಷ್ಟೇ ಹೆಚ್ಚಿನದಿರಲಿ; ಆದರೆ ಪ್ರಮೋದನಿಗೆ ಇಷ್ಟವಲ್ಲದ ಕೆಲಸ ಮಾಡಿ, ಅವನ ಹೃದಯಕ್ಕೆ ಕೊಡಲಿಯ ಪೆಟ್ಟನ್ನು ಹಾಕಬಹುದೆ ? ಮೊದಲಿಗೆಯೇ ಹಿರಣ್ಯರು ಏಕೆ ತಿಳಿದುಕೊಳ್ಳಲಿಲ್ಲ ? ಹಿರಣ್ಯ, ನೀವು ಬಹಳ ಕಟುಕರು. ಕನಕನ ಬೆಂದ ಹೃದಯಕ್ಕೆ ಬರೆ ಕೊಟ್ಟಿರಿ. ಅವಳು ನಿಮ್ಮನ್ನು ಬಹಳ ಪ್ರೀತಿಸುತ್ತಾಳೆ;

ಬೇಕಾದರೆ, ಹೃದಯವನ್ನು ಸೀಳಲು ಬರುವಂತಿದ್ದರೆ ಅವಳು ಸೀಳಿ ತೋರಿಸುತ್ತಿದ್ದಳು. ಆದರೆ ಕನಕ ಇನ್ನೂ ಹುಡುಗಿ; ಅವಳಿಗೆ ಮಾತನಾಡುವುದು ಕೂಡ ಗೊತ್ತಿಲ್ಲ. ಇದಕ್ಕಾಗಿಯೇ ನೀವು ಇಷ್ಟು ಕಷ್ಟ ಕೊಟ್ಟರೇನು ?

"ಕನಕ, ಹಾಗಾದರೆ ನಾನಿನ್ನು ಹೋಗುತ್ತೇನೆ. ಇಂದಿನಿಂದ ಎಲ್ಲ ಸುಖಗಳನ್ನು ತೊರೆದು ಹೋಗುತ್ತೇನೆ. ನಿಮಗಾಗಿ ಎಲ್ಲಕ್ಕೂ ತಿಲಾಂಜಲಿ ಕೊಡುತ್ತೇನೆ. ಇನ್ನು ಜಗತ್ತಿಗೂ ನನಗೂ ಸಂಬಂಧವೆಲ್ಲಿ? ನೀವೇ ನನ್ನ ಕೈಗೆ ಹತ್ತಲಿಲ್ಲವೆಂದಮೇಲೆ ನನಗೆ ಇನ್ನು ಏನೂ ಬೇಡ. ಧನ-ಕನಕ ಬೇಕಾಗಿಲ್ಲ; ಮಾನ-ಮರ್ಯಾದೆ ಬೇಕಾಗಿಲ್ಲ. ನೀವು ಸಿಕ್ಕಿದ್ದರೆ, ಅಡವಿಯೊಳಗಿರುವ ಪ್ರಸಂಗ ಬಂದರೂ ಸಂತೋಷದಿಂದ ಇರುತ್ತಿದ್ದೆ. ನೀವು ನಿಮ್ಮ ಕೈಯಿಂದಲೇ ನನ್ನ ಕಲ್ಪಿತ ನಂದನವನಕ್ಕೆ ಕೊಳ್ಳಿಯಿಟ್ಟರಿ. ಎಂದಮೇಲೆ ಜಗತ್ತಿನ ವಸ್ತು ಒಡವೆಗಳನ್ನು ತೆಗೆದುಕೊಂಡು ಏನು ಮಾಡಲಿ? ನಾನು ಜಗತ್ತನ್ನು ತೊರೆಯುವೆ, ಸಂನ್ಯಾಸಿಯಾಗಿ ಅಲೆದಾಡುವೆ. ಕನಕ, ಈ ದುರ್ದೈವಿಯನ್ನು ಮರೆಯಲು ಪ್ರಯತ್ನಿಸಿರಿ. ಒಂದುವೇಳೆ ಎಂದಾದರೂ ನೆನಪಾದರೆ ಅದನ್ನು ಹೃದಯದೊಳಗಿಂದ ತಳ್ಳಿಬಿಡಿರಿ. ನನ್ನ ಸಲುವಾಗಿ ನಿಮಗೆ ಅಣುವಷ್ಟಾದರೂ ಕಷ್ಟವೆನಿಸಬಾರದು. ನೀವು ನನ್ನನ್ನು ಮರೆತು, ಅಣ್ಣನ ಅಪ್ಪಣೆಯ ಮೇರೆಗೆ ಮದುವೆಯಾಗಿ ಸುಖದಿಂದ ಇರುವಿರೆಂಬ ಸುದ್ದಿಯನ್ನು ಕೇಳಿದರೆ, ಗುಡ್ಡದಲ್ಲಿರಲಿ, ಅಡವಿಯಲ್ಲಿರಲಿ — ಬೇಕಾದಲ್ಲಿರಲಿ, ನನಗೆ ಸುಖವೆನಿಸುವುದು. ಇದೋ ಹೊರಟೆ, ಇನ್ನು ಎಂದೂ ಈ ದುರ್ದೈವಿಯ ದರ್ಶನವು ನಿಮಗಾಗಲಾರದು." ಎಂದು ಹಿರಣ್ಯ ಮತ್ತೆ ಹೇಳಿದರು.

ಹಿರಣ್ಯಕುಮಾರರ ಅರ್ಧ ಮಾತುಗಳನ್ನು ಕನಕನು ಕೇಳಲಿಲ್ಲ. ಅವಳಿಗೆ ಮೈಮೇಲೆ ಪರಿವೆಯೇ ಇದ್ದಿಲ್ಲ. "ಹಿರಣ್ಯಕುಮಾರ, ನಾನು ನನ್ನ ಕಷ್ಟವನ್ನು ಪ್ರಸನ್ನತೆಯಿಂದ ಸಹಿಸಬಲ್ಲೆ, ಆದರೆ ನಿಮ್ಮ ಕಷ್ಟವನ್ನು ನೋಡಲಾರೆ. ನಾನು ನಿಮ್ಮ ಸಲುವಾಗಿ ಎಲ್ಲವನ್ನೂ ನಿಸರ್ಜಿಸಲು ಸಿದ್ಧಳಿದ್ದೇನೆ." ಪ್ರಜ್ಞೆ ಬಂದಾಗ ಕನಕ ಮಾತನಾಡಿದಳು.

ಆದರೆ ಅಷ್ಟು ಹೊತ್ತಿಗೆ ಹಿರಣ್ಯಕುಮಾರರು ಹೋಗಿಬಿಟ್ಟಿದ್ದರು. ಅಲ್ಲಿ ಯಾರೂ ಇರಲಿಲ್ಲ. ಕನಕನ ಹೃದಯವು ಶೂನ್ಯವಾಯಿತು. ಇಡಿಯ ಭೂಮಂಡಲವೇ ಕಂಪಿಸುತ್ತಿರುವಂತೆ ಅವಳಿಗೆನಿಸಹತ್ತಿತು. ಅವಳ ನೇತ್ರ

ಗಳಿಂದ ಅಶ್ರುಧಾರೆ ಹರಿಯಹತ್ತಿತು. ಅವಳು ಅಳುತ್ತ ಅಳುತ್ತ ಘಟ್ಟದಿಂದ ಎದ್ದಳು. ಆದರೆ ಬಹಳ ದೂರದ ವರೆಗೆ ಹೋಗುವದಾಗಲಿಲ್ಲ ಹತ್ತಿರದಲ್ಲಿಯೇ ಒಂದು ಗಿಡವಿದ್ದಿತು. ಅದರ ಆಸರ ಪಡೆಯಬೇಕೆನ್ನುವಷ್ಟರಲ್ಲಿಯೇ ಮೂರ್ಛೆ ಬಂದು ಬಿದ್ದುಬಿಟ್ಟಳು.

## ಪಿಸ್ತೂಲಿನ ರಹಸ್ಯ !

ಈ ಘಟನೆಯಾಗಿ ತುಸುವೇ ದಿವಸಗಳಾಗಿದ್ದುವು. ಹಿರಣ್ಯಕುಮಾರರು ಸಾಹಸಮಾಡಿ ಕನಕಲತಾಳಿಗೆ ಒಂದು ಕಾಗದ ಬರೆದರು. ಬಹಳ ಕಷ್ಟದಿಂದ ಪತ್ರವನ್ನು ಬಂದುಮಾಡಿ ಅವರು ಕಣ್ಣೀರನ್ನೊರೆಸಿಕೊಳ್ಳಹತ್ತಿದರು. ತಮ್ಮ ಆಸ್ತಿಯಬಗ್ಗೆ ಮೃತ್ಯುಪತ್ರವನ್ನು ಬರೆದು ಒಂದು ಪೆಟ್ಟಿಗೆಯೊಳಗಿಟ್ಟರು. ಇಷ್ಟಮಿತ್ರರಿಗೆಲ್ಲ ಪತ್ರ ಬರೆದು ಪೋಷ್ಟಿಗೆ ಹಾಕಿ ಬರಲು ತಿಳಿಸಿದರು. ಹತ್ತಿರ ವಿದ್ದ ಸಾಮಾನುಗಳನ್ನೆಲ್ಲ ಆಳು ಹೋಳುಗಳಿಗೆ ಹಂಚಿದರು. ಈ ಘಟನೆ ಯಿಂದ ಆಳುಗಳಲ್ಲಿ ಒಂದು ಬಗೆಯು ಗದ್ದಲವೇ ಎದ್ದಿತು. ಹಿರಣ್ಯಕುಮಾರರು ಬೇರೊಂದು ಕೋಣೆಯೊಳಗೆ ಹೋಗಿ ಮಲಗಿಬಿಟ್ಟರು. ಹೊತ್ತು ಮುಳು ಗಿದರೂ ಹಿರಣ್ಯಕುಮಾರರು ಏಳಲಿಲ್ಲ. ಒಂಬತ್ತು ಗಂಟೆಯಾದಾಗ ನಿದ್ದೆ ಹರಿಯಿತು. ಆದರೂ ಅವರು ಏಳಲಿಲ್ಲ. ಒಬ್ಬ ಆಳುಬಂದು ಅಡುಗೆ ಸಿದ್ಧ ವಾಗಿದೆಯೆಂದು ಹೇಳಿದ. ಇಷ್ಟು ಹೊತ್ತಿನವರೆಗೆ ಅವರು ಏನೇನನ್ನೊ ಆಲೋಚನೆ ಮಾಡುತ್ತಿದ್ದರು. ಆಳಿನ ಮಾತನ್ನು ಕೇಳಿ ಅವರು ಅವನ ಕಡೆಗೆ ಹೊರಳಿ ನೋಡಿದರು "ಅಡುಗೆಯಾಗಿದೆ." ಎಂದು ಆಳು ಮತ್ತೆ ಹೇಳಿದ.

ಹಿರಣ್ಯಕುಮಾರರು ಉತ್ತರವನ್ನೇ ಕೊಡಲಿಲ್ಲ. ಕತ್ತೆತ್ತಿ ಕೂಡ ನೋಡ ಲಿಲ್ಲ. "ಊಟವನ್ನು ಇಲ್ಲಿಯೇ ಮಾಡುವಿರೊ, ತರಲೆ?" ಆಳು ಕುಸು ತಡೆದು ಕೇಳಿದ.

"ನನಗೆ ಹಸಿವೆಯಿಲ್ಲ. ಇಂದು ಊಟಮಾಡುವುದಿಲ್ಲ." ಹಿರಣ್ಯ ಕುಮಾರರು ಹರಿಹಾಯ್ದು ಹೇಳಿದರು. ಪಾಪ, ಆಳು ಮುಂದೆ ಮಾತಾಡದೆ ಅಲ್ಲಿಂದ ಹೊರಟುಹೋದ.

ಹಿರಣ್ಯಕುಮಾರರು ಹಾಸುಗೆಯಿಂದೆದ್ದು ಮೇಜಿನ ಹತ್ತಿರಬಂದು ಮತ್ತೆ ಪತ್ರ ಬರೆಯಲು ಕುಳಿತರು. ಇದೇ ಹೊತ್ತಿಗೆ ಒಬ್ಬ ಆಳು ಬಂದು ಒಂದು

ಪಿಸ್ತೂಲನ್ನು ತೋರಿಸಿ—"ಇದನ್ನು ನೀವು ಒಂದು ದಿನ ಎಚ್ಚರಿಕೆಯಿಂದ ಇಡಲು ಕೊಟ್ಟಿದ್ದಿರಿ, ಇನ್ನು ಇವನ್ನೇನು ಮಾಡಲಿ?" ಎಂದ. ಹೀಗೆ ಹೇಳಿ ಅವನು ಪಿಸ್ತೂಲನ್ನು ಮೇಜಿನಮೇಲಿಟ್ಟ. ಒಂದು ದಿನ ಯಾರದೋ ಕೈಯೊಳಗಿಂದ ಈ ಪಿಸ್ತೂಲನ್ನು ಕಸಿದುಕೊಂಡಿದ್ದುದು ಅವರಿಗೆ ನೆನಪಾಯಿತು. ಆ ನೀಚನನ್ನು ಹುಡುಕಬೇಕೆಂಬ ಅಭಿಪ್ರಾಯದಿಂದ ಅವರು ಪಿಸ್ತೂಲನ್ನು ಜೋಪಾನವಾಗಿಡಲು ಹೇಳಿದ್ದರು. ಆದರೆ ತಾವು ಅಸ್ವಸ್ಥರಿದ್ದುದರಿಂದ ಈ ವಿಚಾರವನ್ನು ಮರೆತಿದ್ದರು. ಹಿರಣ್ಯರು ಪಿಸ್ತೂಲನ್ನು ಕೈಯೊಳಗೆ ತೆಗೆದುಕೊಂಡು ಅದನ್ನು ತಿರು ತಿರುವಿ ನೋಡಹತ್ತಿದರು. ಇದರ ಒಂದೇ ಒಂಡು ಗುಂಡು ನನ್ನ ಎಲ್ಲ ಕಷ್ಟಗಳನ್ನು ದೂರಮಾಡಿ ಬಿಡುವುದಲ್ಲವೇ ಯೆಂದು ಮನದಲ್ಲಿ ಯೋಚಿಸಿದರು. ಅದರೊಳಗೆ ಗುಂಡು ಇದ್ದಿದ್ದಿಲ್ಲವೆಂಬುದು ತಿಳಿಯಿತು. ಆಲೋಚನೆ ಮಾಡುತ್ತ ಅವರು ಮತ್ತೆ ಅದನ್ನು ನೋಡಹತ್ತಿದರು. ಇದೇ ಹೊತ್ತಿಗೆ ಒಬ್ಬ ಅಪರಿಚಿತ ವ್ಯಕ್ತಿಯನ್ನು ಆಳು ಕರೆದುಕೊಂಡು ಕೋಣೆಯೊಳಗೆ ಬಂದ. "ಈ ವ್ಯಕ್ತಿ ಬಹಳ ದಿವಸಗಳಿಂದ ನೌಕರಿಯನ್ನು ಹುಡುಕುತ್ತಿದ್ದಾನೆ. ನಿಮಗೂ ಒಂದು ಆಳು ಬೇಕಿತ್ತು. ನೀವು ಇವನನ್ನು ನಿಯಮಿಸಿಕೊಳ್ಳುವಿರಾ?" ಹಿರಣ್ಯಕುಮಾರರಿಗೆ ಆಳು ಕೇಳಿದ.

ಹಿರಣ್ಯಕುಮಾರರು ಆ ಮಾತನ್ನು ಕೇಳಲೇ ಇಲ್ಲ. ಆಗ ಅವರು ಪಿಸ್ತೂಲನ್ನು ನೋಡಲು ತನ್ಮಯರಾಗಿದ್ದರು. ನೋಡ ನೋಡುತ್ತ ಪಿಸ್ತೂಲಿನಮೇಲೆ ಇಂಗ್ಲೀಷು ಹೆಸರು ಕಾಣಿಸಿತು. ಓದಿದಕೂಡಲೆ ಅವರಿಗೆ ಬಹಳ ಸೋಜಿಗವೆನಿಸಿತು. ಇಂಗ್ರೇಜಿಯಲ್ಲಿ ಬರೆದಿತ್ತು. 'Y. N. R.' ಎಂದು. "ಏನು ಯಾಮಿನೀನಾಥರಾಯನೆ"" ಆಶ್ಚರ್ಯದಿಂದ ನುಡಿದರು. "ಈ ಪಿಸ್ತೂಲನ್ನೇನೊ ಕಸಿದುಕೊಂಡೆ; ಆದರೆ ಇದರಮೇಲೆ ಯಾಮಿನೀಬಾಬುವಿನ ಹೆಸರಿದೆ'"

ಆಗ ಆಗಂತುಕವ್ಯಕ್ತಿ ನಿಂತುಕೊಂಡು ಇದನ್ನೆಲ್ಲ ನೋಡುತ್ತಿದ್ದ. ಹಿರಣ್ಯಕುಮಾರರ ವಿಸ್ಮಯದಿಂದ ತುಂಬಿದ ಮಾತುಗಳನ್ನು ಕೇಳಿ ಅವನು ಅವರ ಹತ್ತಿರ ಬಂದು ನಿಂತ. "ಇದರಮೇಲೆ ಯಾಮಿನೀಬಾಬುಗಳ ಹೆಸರನ್ನು ಬರೆದಿದ್ದಾರೆಯೆ? ಸ್ವಲ್ಪ ಇಲ್ಲಿ ಕೊಡಿರಿ." ಪಿಸ್ತೂಲನ್ನು ಸಿಟ್ಟಿಸಿ ನೋಡಿ ಅವನು ಹೇಳಿದ.

" ನಿನ್ನ ಮಾತನ್ನು ಕೇಳಿದರೆ ಇವರೊಳಗೇನೊ ರಹಸ್ಯವಿರಬೇಕೆಂದೆನಿಸುತ್ತದೆ. " ಹೆದರದೆ ಅವನ ಕೈಯೊಳಗೆ ಪಿಸ್ತೂಲನ್ನು ಕೊಟ್ಟು ಹಿರಣ್ಯಕುಮಾರರೆಂದರು.

ಪಿಸ್ತೂಲನ್ನು ಹಿಡಿದುಕೊಂಡು ಅವನು ನೋಡಿದ. ಕಣ್ಣು ಕೆಂಪಗಾದುವು. " ಈ ಪಿಸ್ತೂಲಿನ ವಿಚಾರ ನನಗೆ ಗೊತ್ತಿದೆ. ನಿಜವಾಗಿಯೂ ಇದು ಯಾಮಿನೀನಾಥರದೇ " ಹಲ್ಲು ತಿನ್ನುತ್ತ ಅವನು ಹೇಳಿದ.

" ಹಾಗಾದರೆ ಆ ನೀಚನ ಕೈಯೊಳಗಿಂದ ನನಗೆ ಹೇಗೆ ಸಿಕ್ಕಿತು ? " ಅವನ ಮಾತುಕೇಳಿ ಹಿರಣ್ಯಬಾಬು ಕೇಳಿದರು.

" ಅವನು ನೀಚನೇ ? ಅಲ್ಲ " ಎಂದನಾವ್ಯಕ್ತಿ. ಅವನು ಇನ್ನೂ ಏನು ಹೇಳಲಿಚ್ಛಿಸುತ್ತಿದ್ದನೋ, ಆದರೆ ಹೆದರಿಕೊಂಡು ಸುಮ್ಮನಾದ.

ಹಿರಣ್ಯರು ಅವನನ್ನು ಏಕಾಂತದಲ್ಲಿ ಕರೆದು ಘಟನೆಯನ್ನು ಹೇಳಿದರೆ ನಿನಗೇನೂ ಹಾನಿಯಾಗುವುದಿಲ್ಲವೆಂದು ಧೈರ್ಯಹೇಳಿದರು. " ಮಹನೀಯರೆ, ಆತನು ನೀಚನಲ್ಲ, ಯಾಮಿನೀಬಾಬುಗಳ ನೌಕರನು ನೀಚ. " ಆಗ ಅವನು ಹೇಳಿದ.

" ಯಾಮಿನೀನಾಥನ ನೌಕರನೆ ? ಅವನು ಪಿಸ್ತೂಲನ್ನು ಕಳವು ಮಾಡಿದ್ದನೆ ? " ಹಿರಣ್ಯಕುಮಾರರು ಕೇಳಿದರು.

ವ್ಯಕ್ತಿ —" ಅಲ್ಲ, ಯಾಮಿನೀ ಬಾಬುಗಳ ಅಪ್ಪಣೆಯ ಮೇರೆಗೆ ಅವನು ಪ್ರಮೋದಬಾಬುಗಳನ್ನು ಹೊಡೆಯಲು ಹೋಗಿದ್ದ............ "

" ಯಾಮಿನಿಯ ಅಪ್ಪಣೆಯಂತೆ ಪ್ರಮೋದನನ್ನು ಹೊಡೆಯಲು ಹೋಗಿದ್ದ.—" ಇದನ್ನು ಕೇಳಿ ಹಿರಣ್ಯಕುಮಾರರ ಮಲಿನವೂ ವಿಷಾದಪೂರ್ಣವೂ ಆದ ಆ ಮುಖವು ಒಮ್ಮೆಲೇ ಅರಳಿತು. ಅವರ ಹೃದಯದೊಳಗಿಂದ ಒಂದು ಜ್ವಾಲೆ ಹೊರ ಹೊರಟಿತು. ತಾನೇ ಗುಂಡು ಹಾರಿಸಿದವನೆಂದು ಪ್ರಮೋದನು ನಂಬಿದ್ದನೆಂಬುದು ಕನಕನಿಂದ ತಿಳಿದಿತ್ತು. ಅದಕ್ಕೆ ಮೂಲ ಕಾರಣರಾರೆಂಬುದು ಹಿರಣ್ಯರಿಗೆ ಈಗ ತಿಳಿಯಿತು. ಯಾಮಿನಿ ಬಹಳ ನೀಚನೆಂದು ಹಿರಣ್ಯಕುಮಾರರು ತಿಳಿದರು. ನೀರಜಾನ ಕೂಡ ಮದುವೆಯಾಗಬೇಕೆಂಬ ಆಶೆಯಿಂದ ಯಾಮಿನಿ ಸಂನ್ಯಾಸಿಯ ಮುಂದೆ ಪ್ರಮೋದನೇ ದೋಷಿಯೆಂದು ಹೇಳಿದ್ದನಲ್ಲವೆ ? ಆದರೆ ಇಂದು ಅದೇ ಯಾಮಿನಿಯ ಕೈಗೆ ಕನಕ

ನನ್ನು ಕೊಡಲು ಪ್ರಮೋದನು ಸಿದ್ಧನಾಗಿರುವನಲ್ಲ ಇದೂ ವಿಚಿತ್ರವೇ! ನೀರಜಾನನ್ನು ದೊರಕಿಸಿಕೊಳ್ಳುವುದಕ್ಕಾಗಿಯೇ ಯಾಮಿನಿ ಹೀಗೆ ಮಾಡಿದನೆಂದು ಆ ವ್ಯಕ್ತಿಯ ಮಾತಿನಿಂದ ಹಿರಣ್ಮಯಕುಮಾರರಿಗೆ ಸ್ಪಷ್ಟವಾಯಿತು. ಕೆಲಸವು ಹದಗೆಟ್ಟಬಳಿಕ ತನ್ನ ದೋಷವನ್ನು ಹಿರಣ್ಮಯರ ಮೇಲೆ ಹಾಕಿ ಯಾಮಿನಿ ಯುಕ್ತಿಯಿಂದ ಪಾರಾಗಿದ್ದ. ಯಾಮಿನಿಯ ಈ ಕಪಟನಾಟಕವನ್ನು ಬೈಲಿಗೆಳೆದರೆ ಪ್ರಮೋದನ ಭ್ರಮೆ ದೂರಾಗಲು ಸಾಧ್ಯವಿದೆಯೆಂದು ಹಿರಣ್ಮಯಕುಮಾರರು ಭಾವಿಸಿಕೊಂಡರು. ಮತ್ತೆ ಆ ವ್ಯಕ್ತಿಯನ್ನು ವಿಚಾರಿಸಿದರು.

" ಯಾಮಿನಾಥನು ಪ್ರಮೋದನನ್ನು ಏಕೆ ಹೊಡೆಯಲಿಚ್ಛಿಸುತ್ತಿದ್ದ ? "

ವ್ಯಕ್ತಿ — " ಅವರು ಅದನ್ನು ನನಗೆ ಹೇಳಲಿಲ್ಲ. ಆದರೆ ನಾನು ಅನುಮಾನದಿಂದ ಹೇಳಬಹುದು. ಪ್ರಮೋದನು ನೀರಜಾನ ಕೈಹಿಡಿಯಬಾರದೆಂದೇ ಹಾಗೆ ಮಾಡಲನುವಾಗಿರಬೇಕು. "

ಹಿರಣ್ಮಯ — " ಅವನು ಹೊಡೆಯಲೆಂದೇ ಕಳಿಸಿದ್ದನೆಂಬುದು ನಿನಗೆ ಹೇಗೆ ಗೊತ್ತಾಯಿತು ? "

ವ್ಯಕ್ತಿ — " ಮೊದಲು ನನಗೆ ಹಾಗೆ ಮಾಡಲು ಹೇಳಿದರು. ಆದರೆ ನಾನು ಒಪ್ಪಲಿಲ್ಲ. ಅದರಿಂದ ಇನ್ನೊಬ್ಬನನ್ನು ಆ ಕೆಲಸಕ್ಕೆ ಹಚ್ಚಿದರು. "

ಹಿರಣ್ಮಯ — " ನಿನಗೆ ಇದು ಹೇಗೆ ಗೊತ್ತು ? "

ಆ ವ್ಯಕ್ತಿ ಇದಕ್ಕೆ ಉತ್ತರ ಕೊಡಲು ಮತ್ತೆ ಹೆದರಹತ್ತಿದ. " ಯಾಮಿನೀಬಾಬುಗಳ ನೌಕರನ ಕೂಡ ನನ್ನ ಒಬ್ಬ ಮಿತ್ರನೂ ಇದ್ದ. ಅವನೇ ನನಗೆ ಹೇಳಿದ್ದ. " ಹಿರಣ್ಮಯರು ಮತ್ತೆ ಆಸೆ ಇಟ್ಟುಕೊಂಡಮೇಲೆ ಹೇಳಿದ ಆ ವ್ಯಕ್ತಿ.

ಹಿರಣ್ಮಯ — " ಅವಶ್ಯಕವೆನಿಸಿದರೆ ಇದೆಲ್ಲ ಸಂಗತಿಯನ್ನು ಕೋರ್ಟಿನಲ್ಲಿ ಹೇಳುವೆಯಾ ? "

" ಏಕೆ, ಹೇಳಿದರೆ ತಪ್ಪೇನು ? ನನ್ನ ಮನೆ ಹಾಳು ಮಾಡಿದವನ ವಿರುದ್ಧ ಸಾಕ್ಷಿ ಹೇಳಿದರೆ ತಪ್ಪೇನು. ಆದರೆ ನನ್ನ ಮಿತ್ರನನ್ನು ಮಾತ್ರ ಉಳಿಸಿರಿ, ಸಾಕು. " ಸಹರ್ಷದಿಂದ ವ್ಯಕ್ತಿ ಹೇಳಿದ.

" ಇಲ್ಲ-ಇಲ್ಲ. ಅವನ ಸಲುವಾಗಿ ನೀನು ಹೆದರಬೇಕಾದುದಿಲ್ಲ. ಅವನ ಸಾಕ್ಷಿಯೇ ಮಹತ್ವದ್ದಿದೆ. ಅವನು ಎಲ್ಲ ಸಂಗತಿಯನ್ನು ಸ್ಪಷ್ಟವಾಗಿ ಹೇಳಿ.

ದರೆ ಆವನನ್ನು ಸರಕಾರಿ ಸಾಕ್ಷಿದಾರನೆಂದು ಬಿಡುಗಡೆ ಮಾಡಲು ಬರುತ್ತದೆ. ಈಗ ನೀನು ನಿನ್ನ ಮನೆ ಹಾಳಾದುದನ್ನು ಹೇಳಿದೆಯಲ್ಲ — ಏನು ? ಯಾಮಿನಿ ನಿನಗೇನು ಮಾಡಿದ ? '' ಎಂದು ಕೇಳಿದರು ಹಿರಣ್ಯಬಾಬುಗಳು.

'' ಏನು ಮಾಡಿದನೆಂದಿರಾ ? ಅವನ ಸಲುವಾಗಿ ಹೆಂಡತಿ-ಮಕ್ಕಳು ಪರಿವಾರ ಎಲ್ಲ ಬಿಟ್ಟು ಇಲ್ಲಿಗೆ ಓಡಿ ಬಂದಿದ್ದೇನೆ. ಆ ದುಷ್ಟನ ಸಲುವಾಗಿ ನಾನು ಏನು ಮಾಡಿಲ್ಲ! ಅವನು ಸನ್ನೆ ಮಾಡಿದರೆ ಸಾಕು ನಾನು ಸಹರ್ಷ ದಿಂದ ಬೆಂಕಿಯಲ್ಲಿ ಕೂಡ ಹಾರಲು ಸಿದ್ಧನಿದ್ದೆ! ಯಾಮಿನಿ ಹೇಳಿದುದ ರಿಂದಲೇ ನೀರಜಾನನ್ನು ಓಡಿಸಿಕೊಂಡು ಬಂದಿದ್ದೆ. ನಾನೇ ಪ್ರಮೋದಬಾಬು ಗಳ ಹಿಂದೆ ಹೋಗಿ ಸಂನ್ಯಾಸಿ ಎಲ್ಲಿಗೊ ಹೋದ ಸಂಗತಿ ತಂದೆ. ಆಗ ನೀರಜಾನನ್ನು ಸುಲಭವಾಗಿ ಅಪಹರಿಸಿಕೊಂಡು ಬಂದೆ. ಅವನ ಸಲುವಾಗಿ ಎಷ್ಟೋ ಪಾಪಗಳನ್ನು ಮಾಡಿದೆ; ಆದರೆ ನಾನು ಕೊಲೆ ಮಾಡಲು ಒಪ್ಪಲಿಲ್ಲ ಅದರಿಂದ ನನಗೆ ಈ ಶಿಕ್ಷೆ ಕೊಟ್ಟ. '' ವ್ಯಕ್ತಿ ಎಲ್ಲವನ್ನೂ ಹೇಳಿಬಿಟ್ಟ. ಹೀಗೆ ಹೇಳುತ್ತಿರುವಾಗ ಅವನಲ್ಲಿ ಸೇಡಿನ ಇಚ್ಛೆ ಪ್ರಬಲವಾಯಿತು.

'' ಯಾಮಿನೀಬಾಬು ನಿನಗೇನು ದಂಡಮಾಡಿದ, ಇದನ್ನೆ ಹೇಳ ಲಿಲ್ಲವಲ್ಲ " ? ಅವನನ್ನು ಸಂತಯಿಸಲು ಹಿರಣ್ಯಬಾಬು ಕೇಳಿದರು.

'' ನನ್ನಮೇಲೆ ಸುಳ್ಳೇ ಕಳವಿನ ಆರೋಪಹೊರಸಿ ನನಗೆ ಶಿಕ್ಷೆ ಮಾಡಿಸುವ ಹವಣಿಕೆಯಲ್ಲಿದ್ದ. ಅದರಿಂದಲೇ ನಾನು ಹೆದರಿಕೊಂಡು ಇಲ್ಲಿಗೆ ಓಡಿಬಂದೆ. " ಆ ವ್ಯಕ್ತಿ ಹೇಳಿದ.

ಅವನ ಮಾತು ಹಿರಣ್ಯಬಾಬುವಿಗೆ ಸತ್ಯವೆನಿಸಿತು ಒಮ್ಮೆಲೇ ಅವರ ಹೃದಯದೊಳಗೆ ಹೊಸ ಆಶೆ ಸಂಚರಿಸಹತ್ತಿತು. ಪಿಸ್ತೂಲನ್ನು ಕೈಯಲ್ಲಿ ಹಿಡಿದುಕೊಂಡು ಎದ್ದರು. '' ಸೇಡುತೀರಿಸಿಕೊಳ್ಳುವ ಮನಸ್ಸಿದ್ದರೆ ನನ್ನ ಹಿಂದೆ ಬಾ, '' ಎಂದು ಆ ವ್ಯಕ್ತಿಗೆ ಹೇಳಿ ತಾವು ಲಗುಬಗೆಯಿಂದ ಹೊರಬಿದ್ದರು. ಆ ವ್ಯಕ್ತಿಯೂ ಅವರ ಹಿಂದೆ-ಹಿಂದೆ ಹೊರಟ ಹಿರಣ್ಯಕುಮಾರರು ಒಮ್ಮೆಲೇ ಸ್ಟೇಶನ್ನಿಗೆ ಹೋದರು. ಅಲ್ಲಿಗೆ ಹೋದಮೇಲೆ ನೋಡುತ್ತಾರೆ ಹತ್ತಿರ ಒಂದು ಕಾಸೂ ಇರಲಿಲ್ಲ. ಎಂದಮೇಲೆ ಕಲಕತ್ತೆಯನ್ನು ತಲ್ಪುವುದೆಂತು ? ತಲೆಗೆ ಕೈಹಚ್ಚಿಕೊಂಡು ಅದೇ ಯೋಚನೆಯೊಳಗೆ ಕುಳಿತುಕೊಂಡರು.

# ಪ್ರತಿದ್ವಂದ್ವಿ

ಹೊತ್ತಿಗೆ ಸರಿಯಾಗಿ ಕಲಕತ್ತೆಯ ಗಾಡಿಯ ಹೋಯಿತು. ಹಿರಣ್ಯಬಾಬು ಹತಾಶರಾಗಿ ಪ್ಲ್ಯಾಟಫಾರ್ಮಿನಮೇಲೆ ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾಡಹತ್ತಿದರು. ದೇವರಲೀಲೆಯನ್ನು ಯಾರುಬಲ್ಲರು? ಕಲಕತ್ತೆಗೆ ಯಾವ ವ್ಯಕ್ತಿಯನ್ನು ಕಾಣಲು ಹೊರಟಿದ್ದರೋ, ಅವನೇ ಹತ್ತಿರ ಹಾಯ್ದು ಹೋಗುವುದು ಕಾಣಿಸಿತು. ಬೆಚ್ಚಿಬಿದ್ದರು. ವಿಸ್ಮಿತರಾಗಿ, ಆಹ್ಲಾದಿತರಾಗಿ ಯಾಮಿನೀನಾಥನ ಮುಂದೆಹೋಗಿ ನಿಂತರು. ಆಳು ಯಾಮಿನಿಯನ್ನು ನೋಡಿ ದೂರ ಸರಿದ.

“ ಮಹನೀಯರೆ, ನಾನು ನಿಮ್ಮ ಕಡೆಗೆ ಕಲಕತ್ತೆಗೆ ಹೊರಟಿದ್ದೆ. ” ಹಿರಣ್ಯಬಾಬು ಹೇಳಿದರು.

“ ನನ್ನ ಕಡೆಗೇ? ಇದು ನನ್ನ ಸೌಭಾಗ್ಯವೇ ಸರಿ! ” ಎಂದ ಯಾಮಿನಿ.

“ ಧನ್ಯವಾದಗಳನ್ನು ಇದಕ್ಕರ್ಪಿಸಿರಿ. ಇದರ ಅನುಗ್ರಹದಿಂದ ನಾನು ಹೊರಟಿದ್ದೆ. ” ಪಿಸ್ತೂಲನ್ನು ತೋರಿಸಿ ಹಿರಣ್ಯಬಾಬು ಎಂದರು.

“ ಇದನ್ನೇನು ಹೇಳುತ್ತೀರಿ? ” ಯಾಮಿನಿ ಮತ್ತಿಷ್ಟು ವಿಸ್ಮಯದಿಂದ ಕೇಳಿದ.

“ ಇದನ್ನು ನೀವು ಗುರುತಿಸುತ್ತೀರಾ? ” ಹಿರಣ್ಯಬಾಬು ಕೇಳಿದರು.

“ ಮಹನೀಯರೆ, ಹಾದಿಯಲ್ಲಿ ಮಾನಕಳೆಯಬೇಡಿರಿ, ಹತ್ತಿರದಲ್ಲಿಯೇ ಸಿಪಾಯಿ ನಿಂತಿದ್ದಾನೆ. ” ಯಾಮಿನಿ ಸಿಟ್ಟಿಗೆದ್ದು ಹೇಳಿದ.

“ ಪ್ರಮೋದನನ್ನು ಕೊಲ್ಲಲು ಪಿಸ್ತೂಲನ್ನು ಕೊಟ್ಟಾಗ ಸಿಪಾಯಿಯ ಹೆದರಿಕೆಯೆಲ್ಲಿತ್ತು? ” ಹಿರಣ್ಯಬಾಬು ಕೇಳಿದರು.

ಯಾಮಿನಿಯ ಕಿವಿ ನೆಟ್ಟಗಾದುವು. ಈಗ ಪಿಸ್ತೂಲಿನ ವಿಷಯ ಗೊತ್ತಾಯಿತು.—“ ಹಿರಣ್ಯಬಾಬುಗಳೇ ಇನ್ನು ತಡೆಯಲಾರೆ, ದೊಡ್ಡವರ ಕೂಡ ಮಾತನಾಡುವುದೂ ಗೊತ್ತಿಲ್ಲ ನಿಮಗೆ ” ಗದ್ದರಿಸಿ ಹೇಳಿದ. ಹಿರಣ್ಯಬಾಬು ಸಿಟ್ಟಿಗೇಳದೆ ಮೆಲ್ಲಗೆ ನುಡಿದರು.—“ ಮಹನೀಯರೆ, ನೀವು ದೊಡ್ಡವರೆಂದು ಹೇಳಿಕೊಳ್ಳಲು ಅಯೋಗ್ಯರು. ಪಿಸ್ತೂಲಿನಮೇಲೆ ಯಾರ ಹೆಸರು ಇದೆ ಗೊತ್ತಿದೆಯೇ? ” ಯಾಮಿನಿಯ ಮುಖದ ಕಳೆ ಬದಲಾಯಿಸಿತು. ತನ್ನ

ಹೆಸರನ್ನು ಬರೆದ ಪಿಸ್ತೂಲನ್ನೇ ಕೊಟ್ಟಿರುವ ವಿಷಯ ಆಗ ಅವನಿಗೆ ತಿಳಿಯಿತು. ತಲೆಯಮೇಲೆ ಆಕಾಶವು ಕಡಿದುಕೊಂಡು ಬಿದ್ದಂತಾಯಿತು. ಪಿಸ್ತೂಲನ್ನು ಕಸಿಯಲು ಯತ್ನಿಸಿದ. ಆದರೆ ಆಗಲಿಲ್ಲ ಇಲ್ಲಿ ಬಲಪ್ರಯೋಗಮಾಡಿದರೆ ಉಪಯೋಗವಿಲ್ಲ ಲಾಭಕ್ಕಿಂತ ಹಾನಿಯೇ ಆಗುವುದೆಂದು ಭಾವಿಸಿ ಅವನು ಮೆತ್ತಗೆ ಮಾತನಾಡಿದ.—“ಎಲಾ! ಇದು ನನ್ನ ಪಿಸ್ತೂಲೇನೋ ನಿಜ. ಇದು ಕಳವಾಗಿ ಹೋಗಿತ್ತು. ನಿಮಗೆಲ್ಲಿ ಸಿಕ್ಕಿತು?”

“ಕಳವಿನ ಪಿಸ್ತೂಲೇನು? “ಇದರ ನಿರ್ಣಯವನ್ನು ಕೋರ್ಟು ಮಾಡುವುದು” ಅವನ ಸಾಹಸವನ್ನು ನೋಡಿ ನಕ್ಕು ಹಿರಣ್ಯಬಾಬುಗಳೆಂದರು

ಯಾಮಿನಿ—“ಓಹೋ! ಓಹೋ! ನಿಮ್ಮ ಕೈಯಲ್ಲಿ ಕಳವಿನ ಮಾಲಿದೆ. ನಾನೀಗಲೆ ನಿಮ್ಮನ್ನು ಪೋಲಿಸನ ಕೈಗೆ ಕೊಡುತ್ತೇನೆ.”

“ನೀವು ನಿಮ್ಮ ಹಳೆಯ ಆಳು ರಾಮಧನದಾಸನನ್ನು ಮರೆತಿರೇನು? ಅವನೂ ಇಲ್ಲಿಯೇ ಇದ್ದಾನೆ.” ಎಂದು ಹೇಳಿ ಹಿರಣ್ಯಬಾಬು ಅವನನ್ನು ಹುಡುಕಲು ಅತ್ತಿತ್ತ ನೋಡಿದರು ಆದರೆ ಅವನು ಮಾಯವಾಗಿಬಿಟ್ಟಿದ್ದ. ಯಾಮಿನಿಗೆ ಎಲ್ಲ ಸಂಗತಿ ತಿಳಿಯಿತು. “ಅವನು ಕಳ್ಳನೆಂದು ತಿಳಿದು ಹೊರಗೆ ಹಾಕಿದ್ದೆ. ಅವನು ಹೇಳಿದಮಾತ್ರಕ್ಕೆ ಸಿದ್ಧವಾಗುವದೇ?” ಎಂದು ಯಾಮಿನಿ ಹೇಳಿದ.

ಹಿರಣ್ಯ--“ಪಾಪ! ನೀವೇಕೆ ಹೆದರುತ್ತೀರಿ? ಕೇವಲ ಇದೊಂದೇ ಮಾತಲ್ಲ, ನೀರಜಾಳನ್ನು ಓಡಿಸಿಕೊಂಡು ಬಂದುದೂ ಗೊತ್ತಾಗಿದೆ.”

“ಆಗಿರಬಹುದು. ಮುಂದೇನು ಮಾಡಬೇಕೆನ್ನುವಿರೋ ಮಾಡಿರಿ.” ಎಂದು ನುಡಿದು ವ್ಯಗ್ರಮನಸ್ಸಿನಿಂದ ಯಾಮಿನಿ ಹೊರಟುಹೋದ. ಪ್ರಮೋದನ ಮನೆಗೆಂದು ಹೊರಟ ಯಾಮಿನಿ ಅಲ್ಲಿಗೆ ಹೋಗದೆ ಬೇರೊಂದು ಕಡೆಗೆ ಹೋದ.

ಹಿರಣ್ಯಬಾಬುಗಳೂ ಮನೆಯ ಹಾದಿಹಿಡಿದರು. ನೌಕರನೂ ದಾರಿಯಲ್ಲಿ ಬಂದು ಕೂಡಿಕೊಂಡು “ಯಾಮಿನೀಬಾಬುವನ್ನು ನೋಡಿ ನುಸುಳಿಕೊಂಡೆ ಅವನನ್ನು ನೋಡಿದರೆ ನನಗೇಕೊ ನಡುಕಹುಟ್ಟುತ್ತದೆ. ಆದರೂ ನಿಮ್ಮಕೂಡ ಕಲಕತ್ತೆಗೆ ಬಂದು ಅವಶ್ಯ ಸಾಕ್ಷಿ ಹೇಳುವೆ” ಎಂದು ಹೇಳಿದ.

“ನಾನು ನಾಡದು ಕಲಕತ್ತೆಗೆ ಹೊರಡುವೆ.” ಹಿರಣ್ಯಬಾಬುಹೇಳಿದರು.

"ಒಳ್ಳೇದು, ನಾನೂ ಅಂದೆಯೇ ಬರುವೆ. ನಮ್ಮ ಅಪ್ಪನ ಮನೆಯೊಂದಿದೆ. ಅಲ್ಲಿ ಇರುವೆ, ನೀವೇನೂ ಕಾಳಜಿಮಾಡಬೇಡಿರಿ." ಹೀಗೆ ಹೇಳಿ ರಾಮಧನನು ಅಲ್ಲಿಂದ ಹೊರಟುಹೋದ.

ಹಿರಣ್ಮಯಬಾಬು ಮನೆಮುಟ್ಟಿದಮೇಲೆ ಪ್ರಮೋದನಿಗೆ ಒಂದು ಪತ್ರ ಬರೆದರು. ನಾಳೆ ಪ್ರಮೋದನಿಂದ ಉತ್ತರ ಬರುವದು, ನಾಡದು ಕಲಕತ್ತೆಗೆ ಹೋದರಾಯಿತೆಂದು ಹಿರಣ್ಮಯಕುಮಾರರು ನಿಶ್ಚಯಿಸಿಕೊಂಡರು. ಹಿರಣ್ಮಯಬಾಬುಗಳ ಆಳು ಪತ್ರವನ್ನು ತೆಗೆದುಕೊಂಡು ಪ್ರಮೋದನ ಕಡೆಗೆ ಹೊರಟಿದ್ದ. ಹತ್ತುಗಂಟೆ ರಾತ್ರಿಯಾಗಿತ್ತು. ಹಾದಿಯಲ್ಲಿ ಯಾರೂ ಅಡ್ಡಾಡುತ್ತಿದ್ದಿಲ್ಲ. ಎಲ್ಲಿಯಾದರೂ ಒಬ್ಬಿಬ್ಬರು ಓಡಾಡುವದು ಕಾಣಿಸುತ್ತಿತ್ತು. ಅಲ್ಲಿ-ಇಲ್ಲಿ ಒಂದೆರಡು ಅಂಗಡಿಮಾತ್ರ ಇನ್ನೂ ತೆರೆದಿದ್ದುವು. ಅವುಗಳನ್ನುಳಿದು ಸುತ್ತಲೂ ಶಾಂತತೆಯಿತ್ತು. ಅಂಗಡಿಕಾರರು ದಿನವೆಲ್ಲ ದುಡಿದು ದಣಿದಿದ್ದರು. ಅವರು ಒಂದಿಲ್ಲೊಂದು ಆಮೋದದಲ್ಲಿ ತೊಡಗಿದ್ದರು. ಒಂದು ಅಂಗಡಿಯಲ್ಲಿ ಪಗಡೆ ಆಟ ನಡೆದಿತ್ತು. ಪತ್ರವನ್ನು ಕೈಯಲ್ಲಿಯೇ ಹಿಡಿದುಕೊಂಡು ಆಳು ಆಟ ನೋಡುವ ಇಚ್ಛೆಯಿಂದ ನಿಂತುಕೊಂಡ. ಅದೇಹೊತ್ತಿಗೆ ಮತ್ತೊಬ್ಬ ಆಳು ಅಲ್ಲಿಗೆ ಬಂದು—"ಅಯ್ಯೋ! ನೌಕರಿ ಎಂಥ ಕೆಟ್ಟದಪ್ಪ. ಹಗಲೆಲ್ಲ ಕೆಲಸ ಮಾಡಿ ಮೈ ನುಗ್ಗುಮಾಡಿಕೊಳ್ಳಬೇಕು" ಎಂದು ಹೇಳಿದ.

ಅವನ ಮಾತನ್ನು ಕೇಳುತ್ತಲೇ ಹಿರಣ್ಮಯಬಾಬುಗಳ ನೌಕರನಿಗೆ ಕೈಯೊಳಗಿನ ಪತ್ರದ ನೆನಪಾಯಿತು "ನೀನೆನ್ನುವದು ನಿಜ. ನೋಡಬಾರದೆ, ಹತ್ತುಹೊಡೆಯಿತು; ಆದರೂ ನನ್ನ ಕೆಲಸ ಮುಗಿದಿಲ್ಲ. ಪತ್ರಕೊಡಲು ಹೊರಟಿದ್ದೇನೆ." ಎಂದು ನುಡಿದ.

"ನೀನು ಪತ್ರ ಒಯ್ಯುತ್ತಿ, ನಾನೂ ತರುತ್ತಿರುವೆ. ಬಹಳ ಅರ್ಜಂಟ ಪತ್ರವಿದ್ದಿತು. ಹೋಗದಿದ್ದರೆ ಹೇಗೆ, ಅತ್ತ ಪ್ರಮೋದಬಾಬುಗಳ ಮನೆಯ ಬಾಗಿಲೂ ಹಾಕಿತ್ತು. ದೇವರಿಗೊಂದು ಗೊತ್ತು ನನ್ನ ಬವಣೆ. ಅವರನ್ನು ಎಬ್ಬಿಸಿ ಪತ್ರಕೊಟ್ಟುಬಂದೆ. ಮತ್ತೊಬ್ಬರಾಗಿದ್ದರೆ ಸಾಧ್ಯವೇ, ನಾನೆಂದೇ ಹೀಗೆ ಮಾಡಿದೆ." ಬಂದ ಆಳು ಹೇಳಿದ

"ಎಲಾ ಇದೇನಪ್ಪ? ನಾನೂ ಅಲ್ಲಿಗೇ ಪತ್ರ ಒಯ್ಯುತ್ತಿದ್ದೇನೆ. ಬಾಗಿಲು ಹಾಕಿದರೇನು. ಹಾಗಾದರೆ ನನಗೂ ಬಂದಿತಲ್ಲ ಪೇಚು. ಸಹೋದರ ನೀನು ಏನು ಹಂಚಿಕೆ ಮಾಡಿದ್ದೆ?" ನೌಕರನು ಕೇಳಿದ.

"ಮುಂಚೆಯ ಬಾಗಿಲಲ್ಲಿ ಒಬ್ಬ ಕಾವಲುಗಾರನಿರುತ್ತಾನೆ. ಅವನು ನನ್ನ ಗೆಳೆಯ. ಅವನಿಗೇ ಹೇಳಿಕೊಂಡು ಬಾಗಿಲ ತೆಗೆಯಿಸಿ ಪತ್ರ ಕೊಟ್ಟೆ." ಅವನು ಹೇಳಿದ.

ಕಾವಲುಗಾರನು ನನ್ನ ಪತ್ರವನ್ನೂ ಕೊಡಬಹುದಲ್ಲ?" ಹಿರಣ್ಯಬಾಬುಗಳ ಆಳು ಕೇಳಿದ.

"ಅವನಿಗೇನು ಕೆಟ್ಟುನಿಂತಿದೆ!" ಬಂದವನು ಹೇಳಿದ.

"ಮತ್ತೇನು ಮಾಡಲಿ, ತಿರುಗಿ ಬರುವೆ; ಆದರೆ ಬಹಳ ಅರ್ಜಂಟ ಪತ್ರವೆಂದು ಬಾಬು ಹೇಳಿದ್ದರು. ಕೊಂಚ ನೀನೂ ನನ್ನ ಜೊತೆಗೆ ಬಂದು ನೆರವಾದರೆ ಬಹಳ ಉಪಕಾರವಾಗುವದು."

ಕನಿಕರದ ದನಿಯಲ್ಲಿ ಬಂದವನು ನುಡಿದ, "ಆಗಲಪ್ಪಾ. ಸಹೋದ್ಯೋಗಿಗಳು ಒಬ್ಬರಿಗೊಬ್ಬರು ನೆರವಾಗಲೇಬೇಕಲ್ಲವೇ? ನೀನು ಮನೆಗೆ ಹೋಗು ಬೇಕಾದರೆ. ನಾನು ಯುಕ್ತಿಯಿಂದ ಕಾವಲುಗಾರನನ್ನು ರಮಿಸಿ ಪತ್ರವನ್ನು ಕೊಡುವೆ. ಪಾಪ. ನಿಮ್ಮೊಡೆಯರಿಗೂ ಅರ್ಜಂಟ ಇರಬಹುದು."

ಆಳು ಕೂಡಲೇ ಪ್ರಸನ್ನನಾಗಿ ಆಗಂತುಕನಿಗೆ ಪತ್ರ ಕೊಟ್ಟು ಹಿರಣ್ಯಬಾಬುಗಳ ಕಡೆಗೆ ಹೋದ.

"ಉತ್ತರವೆಲ್ಲಿದೆ?" ಹಿರಣ್ಯಬಾಬು ಕೇಳಿದರು.

"ಪ್ರಮೋದಬಾಬುಗಳನ್ನು ನಾನು ಕಾಣಲಿಲ್ಲ. ನೌಕರನ ಕೈಗೆ ಪತ್ರ ಕೊಟ್ಟುಬಂದೆ."

ಪ್ರಮೋದನಿಗೆ ಪತ್ರಮುಟ್ಟಿತೆಂದು ತಿಳಿದು ಹಿರಣ್ಯಬಾಬು ನಿಶ್ಚಿಂತರಾದರು.

ಆಗಂತುಕನು ಮತ್ತೆ ಯಾರೂ ಅಲ್ಲ, ಅವನನ್ನು ಯಾಮಿನೀಬಾಬುವೇ ಕಳಿಸಿದ್ದ. ಹಿರಣ್ಯಬಾಬುಗಳ ನೌಕರನು ಮನೆ ಬಿಟ್ಟಾಗಲೇ ಅವನ ಹಿಂದೆ ಹಿಂದೆ ಅವನೂ ಹೊರಟಿದ್ದ.

## ಕನಕನನ್ನು ಕೈಬಿಟ್ಟರು!

ಪ್ರಮೋದನು ಈಗ ಕನಕನನ್ನು ಪ್ರೀತಿಸುವುದಿಲ್ಲ. ನೀರಜಾನೂ ಕನಕನ ಮೇಲೆ ಅಸಂತುಷ್ಟಳಾಗಿದ್ದಾಳೆ. ಕನಕನು ಪ್ರಮೋದನ ಮಿತ್ರನನ್ನು

ವರಿಸಲಿಲ್ಲ. ಇಷ್ಟೇ ಅಲ್ಲ, ಅವಳು ಪ್ರಮೋದನ ಶತ್ರುವನ್ನು ಕೈಹಿಡಿಯಲು ಹೊರಟಿದ್ದಾಳೆ. ಇದೆಂಥ ಆಶ್ಚರ್ಯದ ಸಂಗತಿ!

ಒಂದು ದಿನ ನೀರಜಾನ ಪ್ರಕೃತಿ ನೆಟ್ಟಗಿದ್ದಿಲ್ಲ. ಜೋಲುಮೋರೆ ಹಾಕಿಕೊಂಡಿದ್ದಳು. ಆಗ ಧೈರ್ಯಮಾಡಿ ಕನಕನು—" ನೀರಜಾ, ನೀನು ಇಂದೇಕೆ ಸಪ್ಪಗೆ ಇರುವೆ! ಪ್ರಕೃತಿ ನೆಟ್ಟಗಿದೆಯಲ್ಲವೆ? " ಎಂದು ಕೇಳಿದಳು.

ನೀರಜಾ—" ಹೂಂ, ನೆಟ್ಟಗಿದೆ. "

ಕನಕ " ಹಾಗಾದರೆ ಸಪ್ಪಗೆ ಏಕೆ ಇದ್ದೀಯೋ? ಜೋಲುಮೋರೆ ಯೇಕೆ? "

ನೀರಜಾ—" ನನ್ನ ಪ್ರಕೃತಿಯೇ ಹಾಗೆ. ಮೋರೆಯೇನು ಎಂದಿನಂತಿದೆ."

ಕನಕ—" ನಿಮ್ಮ ಮೋರೆಯನ್ನೇನು ನಾನು ನೋಡಿಲ್ಲವೇ? "

ನೀರಜಾ—" ನನ್ನ ಮೋರೆಯನ್ನು ನೋಡಿದರೇನಾಯಿತು! ಹಿರಣ್ಮ ಬಾಬುಗಳ ಮೋರೆಯನ್ನು ನೋಡಿರಿ, ಎಂದರೆ ಎದೆ ತಣ್ಣಗಾಗುವುದು. "

ಕನಕನಿಗೆ ಅಪಮಾನವಾಯಿತು. ಅವಳು ಸುಮ್ಮನಾದಳು.

ಅದೇ ದಿವಸ ನೀರಜಾನ ಉದಾಸೀನ ಮುಖವನ್ನು ನೋಡಿ ಪ್ರಮೋದನು " ನೀರಜಾ! ಯಾವಾಗಲೂ ನನ್ನ ಮನಸ್ಸು ಬೇಗುದಿಗೊಳ್ಳುತ್ತಿರುತ್ತದೆ. ಮತ್ತೆ ನಿನ್ನ ಈ ಉದಾಸಮುಖ—ಇದನ್ನು ನೋಡಿ ನನ್ನ ಇದ್ದ ಶಾಂತಿಯೂ ಕೈಬಿಡಹತ್ತಿದೆ. ಹೇಳು ಎಲ್ಲಿಗಾದರೂ ಕುಸು ದಿವಸದ ಮಟ್ಟಿಗೆ ಹೋಗೋಣವೆ? ಎಂದರೆ ಆರಾಮನೆನಿಸಬಹುದಲ್ಲ! " ಎಂದು ಕೇಳಿದ.

ಪ್ರಮೋದನ ಮಾತನ್ನು ಕೇಳಿ ನೀರಜಾ ಆನಂದಸಾಗರದಲ್ಲಿ ತೇಲಾಡ ಹತ್ತಿದಳು. ತನ್ನ ವಾಸಸ್ಥಳವನ್ನು ನೋಡದೆ ಬಹಳ ದಿನಗಳಾಗಿದ್ದುವು. ಅವಳು ವ್ಯಗ್ರಮನಸ್ಸಿನಿಂದ ಕಾನಪುರಕ್ಕೆ ಹೊರಡಲು ಹೇಳಿದಳು. ಪ್ರಮೋದನಾದರೂ ಅದಕ್ಕೆ ಒಪ್ಪಿಕೊಂಡ. ಮೂರು, ನಾಲ್ಕು ದಿನಗಳಲ್ಲಿಯೇ ಹೊರಡಬೇಕೆಂದು ನಿರ್ಧರಿಸಿದರು.

ಹೊರಡುವದಿವಸ ಬಂದೇಬಿಟ್ಟಿತು. ಒಂದೊಂದಾಗಿ ಎಲ್ಲ ಸಾಮಾನುಗಳನ್ನು ನಾವಿನಲ್ಲಿಟ್ಟರು. ದಾಸ-ದಾಸಿಯರು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಮೊದಲಿನಂತಾಗಿದ್ದರೆ ಪ್ರಮೋದನು ಕನಕನನ್ನು ಹೀಗೆ ಬಿಟ್ಟು ಹೋಗಲು ಸಾಧ್ಯವಿದ್ದಿಲ್ಲ; ಆದರೆ ಈಗ ಅವಳ ನೆರಳೆಂದರೆ ಅವನಿಗಾಗುತ್ತಿದ್ದಿಲ್ಲ.

ಕನಕನು ಒಂದೇ ಸವನೆ ಮುಂಜಾವಿನಿಂದ ಎಲ್ಲ ಸಾಮಾನು ಹೋಗುವುದನ್ನು ನೋಡುತ್ತಿದ್ದಳು. ನೋಡಿ ಅಳುತ್ತಿದ್ದಳು. ಯಾವ ಅಣ್ಣನ ಸಲುವಾಗಿ ಇಂದಿನವರೆಗೆ ನೂರಾರು ಯಾತನೆಗಳನ್ನು ಸಹಿಸಿದ್ದಳೋ ಅದೇ ಅಣ್ಣನು ಇಂದು ಹೀಗೆ ಮಾಡುವುದನ್ನು ನೋಡಿ ಅವಳಿಗೆಷ್ಟು ದುಃಖವಾಗಿರಬಹುದು ?

ನೀರಜಾ ಇಂದು ಬಹಳ ಉಲ್ಹಾಸದಿಂದಿದ್ದಾಳೆ, ಕಾನಪುರಕ್ಕೆ ಹೊರಟಿದ್ದಾಳೆ. ಸಂನ್ಯಾಸಿಯ ದರ್ಶನವಾಗುವ ಸಂಭವವೂ ಇದೆ. ಅಂದಮೇಲೆ ಕೇಳುವುದೇನು ?

ನೀರಜಾ ಮನೆಬಿಟ್ಟು ಹೊರಗೆ ಬರುವಾಗ ಕೈಯೊಳಗಿನ ಡಬ್ಬಿಯನ್ನು ದಾಸಿಯ ಕೈಗೆ ಕೊಟ್ಟು—" ನೋಡು, ಕನಕ ಏನುಮಾಡುತ್ತಿದ್ದಾಳೆ ? " ಎಂದು ಹೇಳಿದಳು.

ನೀರಜಾನ ಹೃದಯವು ಆಗಾಗ ಹೊಡೆದುಕೊಳ್ಳುತ್ತಿತ್ತು. ಇಷ್ಟೆಲ್ಲ ಆದರೂ ಅವಳು ಕನಕನನ್ನು ಪ್ರೀತಿಸುತ್ತಿದ್ದಳು.

" ಪಾಪ ಕನಕ ವ್ಹರಾಂಡದೊಳಗೆ ನಿಂತುಕೊಂಡಿದ್ದಾಳೆ. ಆಹಾ ! ತಾಯಿ ! ಅವಳನ್ನೂ ಏಕೆ ಕರೆದುಕೊಂಡು ಹೋಗುವುದಿಲ್ಲ ? ಪಾಪ ಮೋರೆ ಒಣಗಿಹೋಗಿದೆ ! " ದಾಸಿ ತಿರುಗಿಬಂದು ಹೇಳಿದಳು.

ದಾಸಿಯ ಮಾತನ್ನು ಕೇಳಿ ನೀರಜಾನಿಗೆ ದಯ ಬಂದಿತು. " ತಾಯಿ ನೋಡಿರಿ, ಪಾಪ ದಿನ ದಿನವೂ ಸೊರಗುತ್ತ ನಡೆದಿದ್ದಾಳೆ. ಇಷ್ಟಕ್ಕೇ ನೆರೆಹೊರೆಯ ಮಂದಿ ಏನೇನನ್ನೋ ಆಡಿಕೊಳ್ಳುತ್ತಾರೆ. " ಮತ್ತೆ ದಾಸಿ ಎಂದಳು

ನೀರಜಾ—" ಏನೆನ್ನುತ್ತಾರೆ ? "

ದಾಸಿ—" ಲಕ್ಷ್ಮಿಯಂಥ ಹುಡುಗೆ, ಬಹಳ ಸೀದಾ ಸಾದಾ ಇದ್ದಾಳೆ, ರೂಪಕ್ಕೆ ತಕ್ಕಂತೆ ಗುಣಗಳೂ ಇವೆ. ಬಾಯಿ ತೆಗೆದು ಮಾತನಾಡುವುದನ್ನೇ ಅರಿಯಳು. ಅಣ್ಣ ಕಿಟಕಿಟಿ ಮಾಡುತ್ತಾನೆಂದು ಕಾಣುತ್ತದೆ ಇಲ್ಲದಿದ್ದರೆ ಅವಳು ಹೀಗೇಕಾಗುತ್ತಿದ್ದಳು ? ಮುಂತಾಗಿ ಜನರು ಆಡಿಕೊಳ್ಳುತ್ತಾರೆ. "

ದಾಸಿಯ ಮಾತುಗಳು ನೀರಜಾನಿಗೆ ನಾಟಿದುವು. ಬೆಂಕಿಯಾದಳು. ಕನಕನ ಸಲುವಾಗಿ ಪ್ರಮೋದರ ಹೆಸರಿಗೆ ಕಲಂಕವೇ ? ಕನಕನು ಪ್ರಮೋದನಿಗೆ ಕಷ್ಟ ಕೊಡಲಿಕ್ಕೆಂದೇ ಹುಟ್ಟಿರುವಳೆ ! ಕನಕನ ಮೇಲೆ ಹುಟ್ಟಿದ ಅಂತಃ

ಕಗುಣವು ಈ ಮಾತುಗಳನ್ನು ಕೇಳಿ ಮಾಯವಾಯಿತು. ನಾವನ್ನು ಹತ್ತಿದ ಬಳಿಕ ಈ ಮಾತನ್ನೆಲ್ಲ ಗಂಡನಿಗೆ ಹೇಳಬೇಕೆಂದು ಆಲೋಚಿಸಿದಳು.

ಹೊತ್ತಿಗೆ ಸರಿಯಾಗಿ ನಾವು ಹೊರಟಿತು. ದೂರದಲ್ಲಿಯೇ ನಿಂತು ಕೊಂಡು ಕನಕನು ನೋಡುತ್ತಿದ್ದಳು. ತುಸು ಹೊತ್ತಿನಲ್ಲಿಯೇ ಅದು ಕಣ್ಮರೆಯಾಯಿತು. ಮನೆಗೆ ಬಂದು ಕನಕನು ಅಳಹತ್ತಿದಳು.

## ಛಿನ್ನ ತಂತ್ರಿ

ಇಳಿಹೊತ್ತಾಯಿತು, ಆಕಾಶದಲ್ಲಿ ಒಂದೊಂದಾಗಿ ಮೋಡಗಳು ಕೂಡ ಹತ್ತಿದ್ದುವು. ಅದರಿಂದ ಈಗಲೇ ಸಂಜೆಯಾದಂತೆ ಕಾಣುತ್ತಿತ್ತು. ಕನಕನು ಮನೆಯೊಳಗೆ ಕುಳಿತುಕೊಂಡು ಪತ್ರವನ್ನೋದುತ್ತಿದ್ದಳು. ಅದು ಹಿರಣ್ಯ ಕುಮಾರರು ಬರೆದ ಪತ್ರ. ಅದು ತುಸು ಹೊತ್ತಿನ ಹಿಂದೆ ಕನಕನಿಗೆ ಸಿಕ್ಕಿತ್ತು. ಕನಕನ ಮುಖವು ಅತ್ಯಂತ ಮಲಿನವೂ ಖಿನ್ನವೂ ಇದ್ದಿತು. ಒಂದು ಅಸಹ್ಯ ವೇದನೆಯ ಅನುಭವವಾಗಹತ್ತಿತು. ಮನಸ್ಸಿನಲ್ಲಿಯೇ ಪತ್ರವನ್ನು ಎರಡು ಮೂರು ಸಾರೆ ಓದಿಯೇ ಓದಿದಳು; ಆದರೆ ತಿಳಿಯಲಿಲ್ಲ. ಮತ್ತೆ ಓದ-ಲಾರಂಭಿಸಿದಳು ಪತ್ರದಲ್ಲಿ ಹೀಗೆ ಬರೆದಿದ್ದಿತು—

" ಕನಕ, ಸರಳ ಸ್ವಭಾವದ ಕನಕ, ನನ್ನ ಕನಕ............

ಆದರೆ ಇದು ಜೀವನದಲ್ಲಿಯೇ ಸಾಧ್ಯವಿಲ್ಲ. ಆದರೂ ಒಂದು ಸಾರೆ—ಕೊನೆಯ ಪ್ರಯತ್ನವೆಂದು —' ನನ್ನವಳು ' — ಎಂದು ಜೀವನದ ಅತೃಪ್ತ ಲಾಲಸೆಯನ್ನು ಹಿಂಗಿಸಿಕೊಳ್ಳಲೆ? ಕನಕ, ಹೃದಯೇಶ್ವರಿ ಮುಂತಾದ ಯಾವುದೇ ಸಂಬೋಧನದಿಂದ ನನ್ನ ಇಚ್ಛೆ ಈಡೇರುವುದಿಲ್ಲ. ನಿನ್ನನ್ನು ಕರೆಯಲು ಉಪಯುಕ್ತವಾದ ಶಬ್ದಗಳೇ ಜಗತ್ತಿನಲ್ಲಿ ಸಿಗುವುದಿಲ್ಲ. ನನ್ನ ಜೀವನ ಸರ್ವಸ್ವ, ಇನ್ನು ನಾನು ಹೊರಡುತ್ತೇನೆ.

" ಉಫ್ ! ಆವೇಶದಲ್ಲಿ ಏನೇನನ್ನೋ ಬರೆದೆ. ನೀವು ಇದಕ್ಕೆ ಅಪಾರ್ಥ ಮಾಡಿಕೊಳ್ಳುವಿರಾ ! ಸರಳೆ ! ದುರ್ದೈವಿ, ದೀನ-ದುಃಖಿಯೆಂದು ತಿಳಿದು ಈ ಅಪರಾಧಿಯ ಮಾತನ್ನು ಅಪಾರ್ಥ ಮಾಡಿಕೊಳ್ಳಬೇಡಿರಿ. ಇದು ನಾನು ಹೋಗುವ ಹೊತ್ತು. ನೋಡಿರಿ. ಈಗಲೂ ನೀವು ನನ್ನನ್ನು ಕ್ಷಮಿಸುವದಿಲ್ಲವೆ? ಇಲ್ಲ-ಇಲ್ಲ, ಕನಕ ! ನೀವು ದಯಾಮಯೀ ದೇವಿ ! ಇದಕ್ಕೆ ನೀವು ಅಪರಾಧ

ವೆನ್ನುವುದಿಲ್ಲ. ಈ ಜೀವನದಲ್ಲಿ ಎಂದೂ ನಿಮ್ಮನ್ನು 'ನನ್ನವಳು' ಎಂದು ಕರೆಯುವ ಸೌಭಾಗ್ಯವು ಲಭಿಸಲಿಲ್ಲ. ಇರಲಿ, ಪತ್ರದ ಮೂಲಕ ಅದನ್ನೇ ಪೂರ್ಣಗೊಳಿಸಲು ಪ್ರಯತ್ನ ಮಾಡಿದ್ದೇನೆ. ಕನಕ! ಕ್ಷಮಿಸಿರಿ! ಲಕ್ಷ್ಮಿ! ಈ ಮಧ್ಯೆ ನಿಮ್ಮ ಅಣ್ಣನನ್ನು ಕಾಣಲು ಹೋಗಿದ್ದೆ — ನಾನು ನಿಮ್ಮ ಶತ್ರುವಲ್ಲ ಎಂದು ಹೇಳಲು ಹೋಗಿದ್ದೆ. ಆದರೆ ಆತನು ಮೋರೆಯನ್ನೇ ತೋರಿಸಲಿಲ್ಲ. ಅದರಿಂದ ನಿಮ್ಮನ್ನು ಕಾಣುವ ಆಶೆಯೂ ಈಗ ಅಳಿಯಹತ್ತಿದೆ. ಈಗ ನಾನು ದೃಢ-ಸಂಕಲ್ಪ ಮಾಡಿ ಹೊರಡುತ್ತೇನೆ. ಎಲ್ಲವನ್ನೂ ಇಲ್ಲಿ ಸರಿಗೊಳಿಸಿದ್ದೇನೆ. ನಾಳೆ ಮುಂಜಾನೆಯೇ ಇಲ್ಲಿಂದ ಹೊರಡುವೆ. ನಾನು ನೌಕರಿಗೆ ದೀರ್ಘ ರಜೆಯ ಪತ್ರವನ್ನು ಕಳಿಸಿದ್ದೆ. ಅದರ ಉತ್ತರಕ್ಕಾಗಿ ಇಲ್ಲಿಯವರೆಗೆ ತಡೆದೆ. ಇಂದು ಉತ್ತರವೂ ದೊರೆಯಿತು ನಾಳೆಯೇ ಹೊರಟು ಹೋಗುವೆ. ನಿಮ್ಮನ್ನು ಮರೆಯಲು ಹಲವು ದಿವಸಗಳಿಂದ ಪ್ರಯತ್ನ ಮಾಡುತ್ತಿದ್ದೇನೆ; ನಾನು ಪ್ರಯತ್ನ ಮಾಡಿದಂತೆಲ್ಲ ನಿಮ್ಮ ಮೋಹನ ಮೂರ್ತಿ -- ಅದೇ, ಮಮತಾಮಯಿ ದೇವಿ — ಮೂರ್ತಿ — ಅಧಿಕ ನಿಕಟ ಕಾಣಿಸುತ್ತಿದೆ. ಅದನ್ನು ನೋಡುವ ಅಭಿಲಾಷೆ ಉತ್ತರೋತ್ತರವಾಗಿ ಹೆಚ್ಚಾಗುತ್ತಿದೆ. ಆದಕಾರಣ ಇನ್ನು ನಾನು ನಿಮ್ಮನ್ನು ಮರೆಯಲು ಪ್ರಯತ್ನವನ್ನೇ ಮಾಡುವುದಿಲ್ಲ. ನೀವೇ ನನ್ನ ಜೀವನ ಸರ್ವಸ್ವ. ನೀವು ನನ್ನ ಹೃದಯ ಮಂದಿರದ ದೇವಿ. ಮನಸ್ಸಿನೊಳಗೆಯೇ ನಿಮ್ಮನ್ನು ಪೂಜಿಸುವೆ – ನಿಮ್ಮ ಮೂರ್ತಿಯನ್ನು ಧ್ಯಾನಿಸುತ್ತಲೇ ಈ ಆಯುಷ್ಯವನ್ನು ನೀಗುವೆ. ಸುಂದರಿ! ಈ ಹೃದಯವು ನಿಮ್ಮ ಮೋಹನ ಮೂರ್ತಿಯ ದರುಶನ ಮಾತ್ರದಿಂದಲೇ ಪರಿಪೂರ್ಣವಾಗಿದೆ. ಹೀಗಿರಲು ನಿಮ್ಮನ್ನು ನಾನು ಹೇಗೆ ಮರೆಯಲಿ, ತಿಳಿಯದಾಗಿದೆ; ನಿಮ್ಮನ್ನು ಕೂಡಿಕೊಂಡು ಸುಖದಿಂದ ಕಾಲ ಕಳೆಯುವೆನೆಂದು ಆಶೆ ಮಾಡುತ್ತಿದ್ದೆ. ಇಂದು ಆ ಆಶೆ ಅಡಗಿತು ಅಂದಬಳಿಕ ನಾನು ಹೇಗೆ ಇರಲಿ? ನಾನು ಹೋಗುತ್ತೇನೆ— ಈ ಮಂಗಲಮಯೀ ಮೂರ್ತಿಯನ್ನು ಪೂಜಿಸಲು ಹೊರಡುತ್ತೇನೆ. ಅದರೊಳಗೆಯೇ ನನ್ನ ಆಯುಷ್ಯವನ್ನು ಕಳೆಯುವೆ. ಸರಳೆ! ಈ ದುರ್ದೈವಿಯದೊಂದು ಆಶೆಯಿದೆ — ಒಂದು ಪ್ರಾರ್ಥನೆಯಿದೆ—ನೀವು ಮಾತ್ರ ಸುಖದಿಂದ ಇರ್ರಿ!"

**ಚಿರಮಂಗಲಾಕಾಂಕ್ಷಿ**
**ಹಿರಣ್ಯಕುಮಾರ**

ಪತ್ರವನ್ನೋದಿ ಕನಕ ಆಲೋಚನೆ ಮಾಡಹತ್ತಿದಳು. ಈ ಜಗತ್ತಿನಲ್ಲಿ ಅವಳಿಗೆ ಈಗ ಯಾರೂ ಇಲ್ಲ. ಅಣ್ಣನ ಸಲುವಾಗಿ ಅವಳು ಚಿರಕಾಲದ ಸುಖವನ್ನು ತೊರೆದಳು. ಅವಳನ್ನು ಅವನು ಸ್ನೇಹದಿಂದ ಕಾಣಲಿಲ್ಲ. ಹೃದಯ ಸರ್ವಸ್ವ—ಹಿರಣ್ಮಬಾಬುಗಳೂ ಅವಳನ್ನು ಬಿಟ್ಟುಕೊಟ್ಟೇ ಹೊರಟಿದ್ದಾರೆ. ಅವಳನ್ನು ಈ ಘನಘೋರ ಯಾತನಾ ಸಮುದ್ರದಲ್ಲಿ ನಿರಾಶ್ರಿತಳನ್ನಾಗಿ ಮಾಡಿ ದೇಶವನ್ನು ತ್ಯಜಿಸಿ ಹೊರಟಿದ್ದಾರೆ. ದೇಶದೊಳಗಿದ್ದರೆ ಒಂದಿಲ್ಲೊಂದು ಸಾರೆ ಕೂಡುವ ಆಶೆಯಿತ್ತು. ಪ್ರಮೋದನ ಆ ಭ್ರಮೆ ಎಂದೂ ದೂರಾಗಲಿಕ್ಕಿಲ್ಲವೆ? ಅವನ ಭ್ರಮೆ ಹೋಗದಿದ್ದರೂ ಹಿರಣ್ಮಬಾಬುಗಳು ತುಸು ತಾಳ್ಮೆಯಿಂದಿದ್ದರಾದರೂ ಆಶೆಯಿರುತ್ತಿತ್ತು. ಇಂದು ಅವರೇ ಹೋಗುತ್ತಾರೆಂದಮೇಲೆ ಇನ್ನು ಇದ್ದು ಫಲವೇನು? ಯಾವ ಆಶೆಯಿಂದ ಅವಳು ಎಲ್ಲ ದುಃಖವನ್ನು ಸಹಿಸುವಳು?

ಕನಕಲತಾ ಯೋಚನೆಯಲ್ಲಿ ಮುಳುಗಿಕೊಂಡಿರುವಾಗಲೇ ಒಮ್ಮೆಲೇ ಗುಡುಗು ಮಿಂಚಿನ ಕಡಕಡಾಟವು ಆರಂಭವಾಯಿತು. ಸಂಜೆಯಿಂದಲೇ ಮೋಡಗವಿದಿತ್ತು. ಒಟ್ಟಾಗಿ ಕೂಡಿ ಮುಬ್ಬುಗವಿಯುವಂತೆ ಮಾಡಿದ್ದುವು. ಮಳೆಯೂ ಸುರುವಾಯಿತು. ತುಸುಹೊತ್ತಿನಲ್ಲಿಯೇ ಮುರಮಳೆ ಸುರುವಾಗಿ ಕನಕನು ಆ ನಿಬಿಡ ಮೇಘಾಚ್ಛನ್ನ ಆಕಾಶದತ್ತ ನೋಡಹತ್ತಿದಳು. ಶೂನ್ಯಮಯ ದೃಷ್ಟಿಯಿಂದ ಆ ಕಡೆಗೆ ನೋಡುತ್ತ ಅವಳು ಅಳಹತ್ತಿದಳು! ಒಮ್ಮೊಮ್ಮೆ ಏನನ್ನೋ ನೆನಪುಮಾಡಿಕೊಳ್ಳಲು ಯತ್ನಿಸುತ್ತಿದ್ದಳು ಆದರೆ ನೆನಪಾಗುತ್ತಿರಲಿಲ್ಲ. ಕನಕನ ಹೃದಯದೊಳಗೆ ಒಂದು ದೊಡ್ಡ ಆವೇಗ ಅನುರಾಗ, ವಿಯೋಗಗಳ ದ್ವಂದ್ವ ಯುದ್ಧವೇ ನಡೆದಿತ್ತು ದೇಹವು ಕಂಪಿಸುತ್ತಿತ್ತು, ತಲೆತಿರುಗುತ್ತಿತ್ತು. ಕಣ್ಣಿಗೆ ಕತ್ತಲೆ ಬಂದಂತಾಗುತ್ತಿತ್ತು, ಮೈಮೇಲೆ ಪರಿವೆಯೇ ಉಳಿಯಲಿಲ್ಲ. ಹೃದಯವು ದಡದಡಿಸುತ್ತಿದ್ದಿತು. ಕನಕನು ಜ್ಞಾನಶೂನ್ಯಳಾದಳು. ಈಗ ಅವಳಿಗೆ ಮೇಘಗಳ ಗರ್ಜನೆ ಕೇಳಿಸುವುದಿಲ್ಲ. ಯಾವಾಗಿನಿಂದಲೋ ತೊಯ್ಸಿಕೊಳ್ಳುತ್ತಿದ್ದಳು; ಆದರೆ ಅವಳಿಗೆ ತುಸುವಾದರೂ ಚಳಿಯಿಲ್ಲ. ಮೈಮೇಲಿನ ಬಟ್ಟೆ ಬರೆಗಳೆಲ್ಲ ತೊಯ್ದಿದ್ದುವು. ಇಷ್ಟು ಹೊತ್ತಿಗೆ ಮತ್ತೆ ಮಿಂಚಿತು! ಕನಕನ ಕಣ್ಣಿಗೆ ದೀಪ ಹಚ್ಚಿದಂತಾಯಿತು. ಸಿಡಿಲು ಎಲ್ಲಿಯೋ ಹೊಡೆಯಿತು! ಹುಚ್ಚಳಂತೆ ಅವಳು

ಸಿಡಿಲನ್ನು ಹಿಡಿಯಲು ಓಡಿದಳು! ಕಡ ಕಡ ಸಪ್ಪಳಮಾಡುತ್ತ ಸಿಡಿಲು ದೂರದಲ್ಲೆಲ್ಲಿಯೋ, ಆಕಾಶದಿಂದ ಬಿದ್ದಿತು. ಅದು ಮತ್ತೆ ನೆಲದಮೇಲಿಂದೆದ್ದು ಆಕಾಶಮಾರ್ಗದಲ್ಲಿ ನಾಗಿನಿಯಂತೆ ಮೋಡಗಳನ್ನು ಭೇಧಿಸುತ್ತ ಮೇಲೇರಿತು!

* * * *

ಅನಾಥ ಬಾಲಿಕೆ ಹುಚ್ಚಳಂತೆ ಆ ಜಲವೃಷ್ಟಿಯಲ್ಲಿ ಕತ್ತಲೆಯೊಳಗೆ ಅತ್ತಿತ್ತ ತಿರುಗಾಡಹತ್ತಿದಳು.

## ಕತ್ತಲೆಯಲ್ಲಿ ನಕ್ಷತ್ರ!

ಬೆಳಗಾಗುತ್ತ ಬಂದಿದೆ. ಮಳೆಯು ನಿಂತಂತಾಗಿದೆ. ಮುಗಿಲೂ ನಿಚ್ಚಳವಾಗಿದೆ. ರಾತ್ರಿಯೆಲ್ಲ ಅಲೆದಾಡಿ ಕನಕಲತೆ ಅಪ್ರಸನ್ನಳಾಗಿದ್ದಾಳೆ. ಮುಳ್ಳುಕಂಟಿಗಳಲ್ಲಿ ಸಿಕ್ಕು ಗಾಸಿಯಾಗಿದ್ದಾಳೆ. ದೀನ ಮಲಿನ ವೇಷದಲ್ಲಿ ಹುಚ್ಚಿಯಂತೆ ಅವಳು ನದಿಯ ದಂಡೆಯಮೇಲಿರುವ ಒಂದು ಮನೆಯೊಳಗೆ ಹೊಕ್ಕಳು. ಬಾಗಿಲು ತೆರೆದಿತ್ತು. ಅನಿರ್ಬಂಧವಾಗಿಸೆಟ್ಟಗೆ ಒಂದು ಕೋಣೆಯೊಳಗೆ ನುಗ್ಗಿದಳು. ಒಮ್ಮೆಲೆ ಏನನ್ನೋ ನೋಡಿ ಕನಕಲತಾ ಚೀರಿಕೊಂಡು ಮೂರ್ಛಿತಳಾಗಿ ಬಿಟ್ಟಳು. ಹಿರಣ್ಯಕುಮಾರರ ಮನೆಯದು. ಈಗ ಪ್ರಯಾಗದಲ್ಲಿ ಈ ಮನೆಯೊಳಗೆ ಅವರು ಇರುತ್ತಿದ್ದರು. ಈ ಕೋಣೆಯೊಳಗೆ ಅವರು ಒಂದು ಕುರ್ಚಿಯಮೇಲೆ ವಿಚಾರಮಗ್ನರಾಗಿ ಕುಳಿತುಕೊಂಡಿದ್ದರು. ರಾತ್ರಿ ಅವರು ಕಣ್ಣಿಗೆ ಕಣ್ಣು ಸಹ ಹಚ್ಚಿದ್ದಿಲ್ಲ ಮಳೆ ನಿಲ್ಲುವವರೆಗೂ ಅವರು ಕುಳಿತುಕೊಂಡು ತಮ್ಮ ಭಾಗ್ಯವನ್ನು ಕುರಿತು ವಿಚಾರ ಮಾಡುತ್ತಿದ್ದರು. ಆರು ತಾಸು ರಾತ್ರಿಯಾದಮೇಲೆ ಶಿಪಾಯಿಗಳು ಕೆಲವು ಮುತ್ತಾಳರನ್ನು ಹಿಡಿದುಕೊಂಡು ಅವರ ಹತ್ತಿರ ತಂದಿದ್ದರು. ಆಗಷ್ಟೇ ಅವರು ಚಿಂತೆಯನ್ನು ಕೊಂಚಕಾಲ ಬದಿಗಿಟ್ಟಿದ್ದು. ಪೋಲಿಸರು ಹೋದಮೇಲೆ ಮತ್ತೆ ಖಿನ್ನಮನಸ್ಕರಾಗಿಯೇ ಕುಳಿತುಕೊಂಡಿದ್ದರು. ಒಮ್ಮೆಲೇ ಕನಕ ಅಲ್ಲಗೆಬಂದು ಮೂರ್ಛಿತಳಾಗಿ ಬೀಳಲು ಹಿರಣ್ಯಬಾಬುಗಳು ಮುಂದುಗಾಣದೆ ಅವಳ ಚಾಕರಿಯಲ್ಲಿ ತೊಡಗಿದ್ದರು.

ಶುಶ್ರೂಷೆಯಿಂದ ಕನಕ ಮೂರ್ಛೆತಿಳಿದು ಎದ್ದುಕುಳಿತಳು. ಹಿರಣ್ಯಬಾಬು ಮುಂದೇ ಇದ್ದರು. ಅವರನ್ನು ನೋಡಿ ಖೊಳ್ಳೆಂದು ನಕ್ಕು ಅವ

ಳೆಂದಳು "ನೀವು ಯಾರು ನೀವು? ದೇವತೆಗಳೇನು? ನಾನು ಧ್ಯಾನಸ್ಥಳಾದಾಗ ನೀವೇ ಕಾಣುತ್ತಿದ್ದಿರಿ. ನಾನು ಯಾವ ಹಾಡನ್ನು ಹಾಡುತ್ತಿದ್ದೆ? ಹೇಳಿರಿ. ನಾನು ಮತ್ತೆ ಹಾಡುತ್ತೇನೆ. ಓಃ ಓಃ ಓಃ...."

ಕನಕನಿಗೆ ಬುದ್ಧಿ ಭ್ರಮೆಯಾಗಿದೆಯೆಂದು ಹಿರಣ್ಯಬಾಬು ತಿಳಿದು ಕೊಂಡರು. ಅವಳವೂರನ್ನೂ ಅವಳ ಆ ವೇಷವನ್ನೂ ನೋಡಿ ಅವರ ಎದೆ ತಣ್ಣಗಾಯಿತು. "ಕನಕ, ನನ್ನ ಕನಕ, ನಾನು ನಿಮ್ಮ ಹಿರಣ್ಯಕುಮಾರ, ನನ್ನ ಗುರತು ಹತ್ತುವುದಿಲ್ಲವೆ?" ಎಂದು ನುಡಿದರು.

"ಹಿರಣ್ಯಕುಮಾರರೇನು? ನಿಮ್ಮ ಮೋರೆಯನ್ನು ನನಗೆ ಸ್ವಲ್ಪ ಚೆನ್ನಾಗಿ ತೋರಿಸಿರಿ." ಉನ್ಮಾದಿನಿ ಹೇಳಿದಳು. ಕನಕನು ಎದ್ದು ಕಳಿತಳು. ಮತ್ತೆ ಹಿರಣ್ಯರ ಮೋರೆಯನ್ನು ಬಹಳ ಹೊತ್ತು ನೋಡಿ—"ನೀವು ಹೇಳುವುದು ನಿಜ! ನೀವೇ ಹಿರಣ್ಯಕುಮಾರರು. ಹಿರಣ್ಯ ಒಂದು ಹಾಡು ಹಾಡಿರಿ. ಬೇಡ, ಬೇಡ. ನಾನೇ ಹಾಡುತ್ತೇನೆ. ನೀವು ಕೇಳುವಿರಾ!" ಎಂದಳು.

ಗುನು ಗುನು ಎಂದು ಹಾಡಿದ ಬಳಿಕ—"ನಾನು ಹಾಡುವುದಿಲ್ಲ, ಹಾಡುವುದಿಲ್ಲ. ನೀವು ನನ್ನ ದೇವತೆಯಲ್ಲ. ನೀವು ಹಿರಣ್ಯಕುಮಾರರಲ್ಲ. ಹಿರಣ್ಯ! ನೀವು ಎಲ್ಲಿಗೆ ಹೋದಿರಿ? ವಿದೇಶಕ್ಕೆ? ಅಲ್ಲಿಗೇತಕ್ಕೆ?" ಎಂದಳು. ಆ ಮೇಲೆ ಕನಕ ಚೀರಾಡಿ ಅಳಹತ್ತಿದಳು. ಎದ್ದು ಹಿರಣ್ಯಬಾಬು ಗಳ ಕಾಲನ್ನು ಹಿಡಿದುಕೊಂಡು—"ದೇವರು, ನಿಮ್ಮನ್ನು ಪೂಜಿಸುವೆ. ನನಗೆ ವರದಾನ ಮಾಡಿರಿ. ನನ್ನ ಹಿರಣ್ಯಬಾಬುಗಳೆಲ್ಲಿ ಹೇಳಿರಿ" ಎಂದು ಕೇಳಿದಳು.

"ಕನಕ, ಇದೇನು ನಾನೇ ನಿನ್ನ ಹಿರಣ್ಯನಲ್ಲವೆ? ಹೀಗೇಕೆ ಉನ್ಮಾದಿನಿ ಯಂತಾಗಿರುವೆ?" ಮೇಲಕ್ಕೆಬ್ಬಿಸಿ ಹಿರಣ್ಯಬಾಬುಗಳೆಂದರು. ಅವರ ಕಣ್ಣು ಗಳಲ್ಲಿಯೂ ನೀರು ತುಂಬಿಬಂದವು.

"ನೀವು ದೇವರು, ನೀವೂ ಅಳುತ್ತೀರಾ? ಎಲ್ಲರೂ ಅಳುತ್ತಾರೆಯೇ? ಹಾಗಾದರೆ ನಾನೂ ಅಳುತ್ತೇನೆ." ಎಂದಳು ಕನಕಲತಾ. ಕನಕನು ಹಿರಣ್ಯ ಬಾಬುಗಳ ಕೊರಳಿಗೆ ತೆಕ್ಕೆ ಬಿದ್ದು ಅಳಹತ್ತಿದಳು. ಹೇಗೊ ಪ್ರಯತ್ನ ಮಾಡಿ ಅವಳನ್ನು ಪಲ್ಲಂಗದ ಮೇಲೆ ಮಲಗಿಸಬೇಕಾದರೆ ಅವರಿಗೆ ಸಾಕು ಸಾಕಾಗಿ

ಹೋಯಿತು. ನಿದ್ದೆ ಹತ್ತಿದರೆ ಭ್ರಾಂತಿ ಕಡಿಮೆಯಾದೀತೆಂದು ಹಿರಣ್ಯಕುಮಾರರು ಬಾಟಲಿಯೊಳಗಿದ್ದ ಯಾವುದೋ ಔಷಧವನ್ನು ಅವಳ ಮೂಗಿಗೆ ಹಿಡಿದರು

" ನೀನು ಮಲಗದಿದ್ದರೆ ದೇವರು ನಿನ್ನ ಮೇಲೆ ಸಿಟ್ಟಾಗುವನು. ನೀನು ದೇವರಿಗೆ ಹೆದರುವುದಿಲ್ಲವೆ ? " ಹಿರಣ್ಯಬಾಬುಗಳೆಂದರು.

" ಸಿಟ್ಟಾಗುವನೆ ? ಹಾಗಾದರೆ ನಾನು ಹೋಗುತ್ತೇನೆ. " ಎಂದು ಕನಕ ಹರಡಿದ ಕೂದಲುಗಳನ್ನು ತೀಡಿಕೊಳ್ಳುತ್ತ ಮನಸ್ಸಿನೊಳಗೆಯೇ ಗುನು ಗುನು ಹಾಡುತ್ತ ಮಂಚ ಬಿಟ್ಟು ಎದ್ದಳು. " ಇಲ್ಲ, ಇಲ್ಲ, ಸಿಟ್ಟಾಗುವುದಿಲ್ಲ, ನೀನು ಮಲಗು. " ಹಿರಣ್ಯಬಾಬು ದುಃಖದಿಂದ ಹೇಳಿದರು.

ಅವಳು ಅವರ ಮಾತಿನ ಕಡೆಗೆ ಲಕ್ಷ್ಯ ಕೊಡಲಿಲ್ಲ. ನಗುತ್ತ ಕೈ ಚಪ್ಪಾಳೆ ಹೊಡೆಯುತ್ತಾ — " ಹಾಂ, ನೆನಪಾಯಿತು, ಈಗ ನೆನಪಾಯಿತು. ಅದೇ ಸುರ ! ನಿಮ್ಮ ಸಿತಾರವೆಲ್ಲಿದೆ ? ಬಾರಿಸಿರಿ, ನಾನು ಹಾಡುತ್ತೇನೆ ! " ಎಂದಳು -

ಹಿರಣ್ಯಬಾಬು ಸಿತಾರ ಬಾರಿಸುವುದನ್ನು ಬಲ್ಲವರಿದ್ದರು. ದೈವವಶಾತ್ ಅದೇ ಕೋಣೆಯೊಳಗೆ ಸಿತಾರವೂ ಇದ್ದಿತು. " ನೀನು ಮಲಗಿಕೊಂಡರೆ ನಾನು ಬಾಜಿಸುವೆ. " ಎಂದರು. ಇಷ್ಟು ಹೇಳಿ ಅವರು ಸಿತಾರನ್ನು ಕೈಯಲ್ಲಿ ತೆಗೆದುಕೊಂಡರು. ಕನಕನಿಗೆ ಸಿತಾರವೂ ಬಹಳ ಸೇರುತ್ತಿತ್ತು. ಬಾಜಿಸುವುದರಿಂದ ಕನಕನಿಗೆ ನಿದ್ದೆ ಬರಬಹುದು ಎಂದು ಅಭಿಪ್ರಾಯದಿಂದ ಹಿರಣ್ಯಬಾಬು ಮೆಲ್ಲ-ಮೆಲ್ಲಗೆ ಸಿತಾರ ಬಾಜಿಸಹತ್ತಿದರು. ಕನಕಲತಾ ಆಲಿಸುತ್ತಾ ಆಲಿಸುತ್ತಾ — " ಏಕೆ, ನಿಮ್ಮ ಆ ಮಧುರ ನಗೆಯೆಲ್ಲಿ ಹೋಯಿತು ? " ಎಂದಳು. ಉನ್ಮಾದಿನಿಯ ಮಾತು ಕೇಳಿ ಹಿರಣ್ಯಕುಮಾರರ ಮೋರೆಯ ಮೇಲೆ ವಿಷಾದದ ನಗೆಯೊಂದು ಸುಳಿದು ಹೋಯಿತು. ಅದನ್ನು ನೋಡಿ ಅವಳೂ ನಕ್ಕಳು. ಅವಳ ಕಣ್ಣುಗೊಂಬೆ ಸಣ್ಣವಾಗುತ್ತಾ ನಡೆದುವು ತುಸು ಹೊತ್ತಿನಲ್ಲಿಯೇ ಕನಕಲತಾ ನಿದ್ರಾದೇವಿಯ ಸುಕೋಮಲ ತೊಡೆಗಳ ಮೇಲೆ ವಿಶ್ರಾಂತಿಯನ್ನನುಭವಿಸಹತ್ತಿದಳು ಆದರೆ ಅವಳ ಅಧರಗಳ ಮೇಲೆ ನಸುನಗೆಯು ರೇಖೆ ಮಾತ್ರ ಹಾಗೆಯೇ ಇದ್ದಿತು.

ಕನಕಲತೆಯು ಸುಖನಿದ್ರೆಯನ್ನು ಕಂಡು ಹಿರಣ್ಯಕುಮಾರರ ಆನಂದಕ್ಕೆ ಎಣೆಯೇ ಇಲ್ಲದಾಯಿತು. ಅವರು ಸಿತಾರನ್ನು ಒಂದು ಬದಿಗಿರಿಸಿದರು.

ಅವಳ ನಿದ್ರಾಭಂಗವಾದರೆ ಹೇಗೆ ಎಂಬ ಹೆದರಿಕೆ ಅವರಿಗೆ. ಎಲ್ಲಿಯಾದರೂ ತುಸು ಶಬ್ದವಾದರೆ ಸಾಕು, ಹಿರಣ್ಮಬಾಬು ಹಾರಿಬೀಳುತ್ತಿದ್ದರು. ಅಷ್ಟರಲ್ಲಿಯೇ ದೂರದಲ್ಲಿ ಏನೋ ಸದ್ದಾಗತೊಡಗಿತು. ಕಿವಿಯೊಡ್ಡಿ ಕೇಳಹತ್ತಿದರು. ಕಾಲಿನ ಸಪ್ಪಳ ಬರಬರುತ್ತ ಅದು ಸಮೀಪದಲ್ಲಿಯೇ ಕೇಳಬರಹತ್ತಿತು. ಯಾರೋ ಆ ಕೋಣೆಯ ಕಡೆಗೆಯೇ ಬರುತ್ತಿರುವಂತೆ ಅವರಿಗೆನಿಸಿತು. ಯಾರು ಬಂದರೆಂದು ನೋಡಲು ಮೆಲ್ಲಗೆ ಹಿರಣ್ಮಕುಮಾರರು ಹೊರಗೆ ಬಂದರು.

## ನೌಕಾ ಯಾತ್ರೆ

ನೀರಿನ ವೇಗವು ತೀವ್ರವಾಗಿತ್ತು. ಅದರಿಂದ ನಾವನ್ನು ದಂಡೆಗೆ ಒಯ್ಯಲು ಪ್ರಮೋದಬಾಬು ಆದೇಶವಿತ್ತ. ಗಾಳಿ ವೇಗವಾಗಿ ಬೀಸಹತ್ತಿತು. ಅಂಬಿಗನು ಎಷ್ಟು ಪ್ರಯತ್ನ ಮಾಡಿದರೂ ನಾವು ದಂಡೆಗೆ ಬರಲಿಲ್ಲ. ಹವೆಯ ಆಘಾತಕ್ಕೆ ಸಿಕ್ಕು ನಾವು ಪ್ರಯಾಗದ ಕಡೆಗೆ ಸಾಗಿತು ಮಳೆ ಗಟ್ಟಿಯಾಗಿ ಬರಲಾರಂಭಿಸಿತು. ಸುತ್ತಲೂ ಕತ್ತಲೆಯು ಮೊತ್ತವೇ ಮೊತ್ತ. ಆಗಾಗ ಮಿಂಚು ಮಿಂಚಿದರೆ ನದಿಯ ರೌದ್ರರೂಪ ಮತ್ತು ನಾವುಗಳ ಮೇಲ್ಭಾಗವು ಮಾತ್ರ ಅಲ್ಲಿ ಇಲ್ಲಿ ಕಾಣಿಸುತ್ತಿದ್ದವು. ನೀರಜಾ ಪ್ರಮೋದನ ಭಯವಿಹ್ವಲ ವಕ್ಷದಮೇಲೆ ಮಸ್ತಕವನ್ನಿಟ್ಟುಕೊಂಡು ಮುಂದುಗಾಣದೆ ಸುಮ್ಮನಿದ್ದಳು.

ನಾವು ಗಾಳಿಯ ಹೊಡೆತಕ್ಕೆ ಒಮ್ಮೆ ಮೇಲೆ, ಮತ್ತೊಮ್ಮೆ ಕೆಳಗೆ, ತೇಲಹತ್ತಿತು. ಮನೆಯೇನೂ ಇನ್ನು ದೂರವಿದ್ದಿಲ್ಲ. ಆದರೆ ನಾವು ನಿಲ್ಲಿಸಿದರೂ ನಿಲ್ಲುತ್ತಿದ್ದಿಲ್ಲ. ಗಾಳಿಯ ಒಂದೇ ಆಘಾತವು ನಾವಿನ ಕರ್ಣಾಧಾರವನ್ನು ಕತ್ತರಿಸಿಕೊಂಡು ಎಲ್ಲಿಗೊ ತೆಗೆದುಕೊಂಡು ಹೋಯಿತು. ನಾವು ದಂಡೆಗೆ ಬರಲಿಲ್ಲ. ಮತ್ತಿಷ್ಟು ಆಳವಾದ ನೀರಿಗಿಳಿಯಿತು.

ಪ್ರಮೋದ ನೀರಜಾನನ್ನು ಎತ್ತಿಕೊಂಡು ದಂಡೆಯ ಮೇಲೆ ಹಾರಿಕೊಂಡಿದ್ದೊಂದು ಸಂತೋಷದ ಸಂಗತಿಯೇ ಎನ್ನಬೇಕು. ನೀರಜಾ ಮೂರ್ಛೆ ಹೋಗಿದ್ದಳು. ಅವಳನ್ನೆತ್ತಿಕೊಂಡು ಕಾಲುನಡಿಗೆಯಿಂದಲೇ ಹತ್ತಿರವಿದ್ದ ಗುಡಿಸಲಿನತ್ತ ಹೊರಟ. ಆಗ ಮಳೆ ರಪ್ ರಪ್ ಬೀಳುತ್ತಿತ್ತು. ಗಾಳಿಯೂ ಭರ್ ಎಂದು ಬೀಸುತ್ತಿತ್ತು. ಆಯಾಸವಾಗಿ ಆತನು ಅಲ್ಲಿಯೇ ಕುಳಿತುಕೊಂಡ. ತುಸು ಹೊತ್ತಿನಲ್ಲಿಯೇ ಮಿಂಚಿತು. ಆಗ ಸಮೀಪದಲ್ಲಿಯೇ ಒಂದು ಮಿಣಿ ಮಿಣಿ ದೀಪದ ಛಾಯೆ ಕಾಣಿಸಿತು. ಆಶಾನ್ವಿತನಾಗಿ ಕೂಡಲೆ ಆಕಡೆಗೆಯೇ

ನಡೆದ. ದೀಪವು ಒಮ್ಮೆಲೇ ಮಾಯವಾಯಿತು. ಸರಿ, ಆತನು ಹೆದರಿದ. ಮೈ 'ಜುಂ' ಎಂದಿತು. ಸೀರಜಾನನ್ನು ಕರೆದುಕೊಂಡು ಇಷ್ಟು ರಾತ್ರಿಯಲ್ಲಿ ಅವನು ಎಲ್ಲಿಗೆ ಹೋಗಬೇಕು? ಗಿಡದಡಿಯಲ್ಲಿಯೂ ನಿಲ್ಲಲು ಸಾಧ್ಯವಿರಲಿಲ್ಲ. ಬಿರುಗಾಳಿಯಿಂದ ಗಿಡ–ಮರಗಳು ಬೇರುಸಹಿತ ಕಿತ್ತು ಈಗ ಬೀಳುವವೇನೋ ಎನ್ನುವಂತಿದ್ದುವು. ನಿರಾಶೆಯಿಂದ ಅವನು ಹುಚ್ಚನಂತೆ ಮುಂದೆ ಹೊರಟ. ಒಮ್ಮೆಲೇ ಇಂಥ ಭಯಂಕರ ಸಮಯದಲ್ಲಿ ಅವನಿಗೆ ಮನುಷ್ಯನ ಕಾತರ ಚೀತ್ಕಾರವೊಂದು ಕೇಳಿಸಿತು. ಆಗ ಪ್ರಮೋದನಿಗೆ ತನ್ನ ಹತ್ತಿರದಲ್ಲೇ ಒಬ್ಬನು ಓಡಿಹೋಗುವುದು ಕಾಣಿಸಿತು. ಮತ್ತೆ ಮಿಂಚಿದಾಗ ಮುಂದೆ ಒಂದು ಬಿಳಿಯ ವಸ್ತು ಕಾಣಿಸಿತು. ಯಾವುದೋ ಹಳೆಯ ಮನೆ ಬಿದ್ದಿದೆಯೆಂದು ಆ ಕಡೆಗೆಯೇ ಹೊರಟ. ಅಲ್ಲಿಗೆ ಬಂದು ನೋಡಿದಾಗ ಅವನು ಹೌಹಾರಿದ. ನಿಂತಲ್ಲಿಯೇ ನಿಂತುಬಿಟ್ಟ. ಒಬ್ಬ ಮೃತಪ್ರಾಯನಾದ ಮನುಷ್ಯನು ಕಷ್ಟ ವ್ಯಂಜಕ ಆರ್ತನಾದ ಮಾಡುತ್ತಿರುವುದನ್ನು ನೋಡಿದ.

ತುಸು ಹೊತ್ತಿನ ಹಿಂದೆ ಕೇಳಿಸಿನ ಚೀತ್ಕಾರವು ಇದೇ ಮನುಷ್ಯನದೇ ಇರಬೇಕೇಂದೂ, ಹತ್ತಿರ ಹಾಯ್ದು ಓಡಿಹೋದವನೇ ಇವನಿಗೆ ಈ ಗತಿಯನ್ನು ಮಾಡಿರಬೇಕೆಂದೂ ಪ್ರಮೋದನು ಭಾವಿಸಿದ.

ಹತ್ತಿರ ಮೂರ್ಛೆಹೋದ ಸೀರಜಾ; ಮುಂದೆ ಮೃತಪ್ರಾಯವಾದ ಮನುಷ್ಯದೇಹ! ಆದುದರಿಂದ ಪ್ರಮೋದನು ಕಿಂಕರ್ತವ್ಯ ವಿಮೂಢನಾಗಿ ನಿಂತುಬಿಟ್ಟ. ಇದೇ ಹೊತ್ತಿಗೆ ಬೇರೊಬ್ಬನು ಅಲ್ಲಿಗೆ ಬಂದು 'ಮಹನೀಯರೆ ನೀವೇ ಸಂಕಟದಲ್ಲಿ ಬಿದ್ದವರೇನು? ನಾನು ಚೀತ್ಕಾರವನ್ನು ಕೇಳಿ ಇಲ್ಲಿಗೆ ಓಡಿಬಂದೆ. ಹತ್ತಿರದಲ್ಲಿಯೇ ನನ್ನ ಗುಡಿಸಲು ಇದೆ, ನೀವು ಅಲ್ಲಿಯ ವರೆಗೆ ಬಂದು ವಿಶ್ರಮಿಸಿರಿ." ಎಂದು ಹೇಳಿ ಪ್ರಮೋದನಿಗೆ ಆಮಂತ್ರಣವಿತ್ತ.

ಅವನನ್ನು ನೋಡಿ ಪ್ರಮೋದನಿಗೆ ಬಹಳ ಸಮಾಧಾನವಾಯಿತು. "ನಾನು ಸಂಕಟದೊಳಗೆ ಸಿಲುಕಿ ಆಶ್ರಯಸ್ಥಾನ ಹುಡುಕುತ್ತ ಹೊರಟಿದ್ದೆ. ಎದುರಿಗೆ ಈ ಮೃತಪ್ರಾಯ ಮನುಷ್ಯನನ್ನು ನೋಡಿದೆ. ಆದರೆ ನನ್ನ ಹೆಗಲ ಮೇಲೆ ಎಚ್ಚರದಪ್ಪಿದ ಹೆಂಡತಿಯಿದ್ದಾಳೆ. ಅದರಿಂದ ನಾನಿವನಿಗೆ ಸಹಾಯ ಮಾಡದಾದೆ. ನೀವು ಇವನನ್ನು ಹೊತ್ತುಕೊಂಡು ಗುಡಿಸಲಿಗೆ ನಡೆಯಿರಿ. ಬಹುಶಃ ಇವನು ಬದುಕಬಹುದು." ಎಂದು ಹೇಳಿದ ಪ್ರಮೋದ.

" ಒಳ್ಳೇದು ನೀವೂ ನಡೆಯಿರಿ. ನಾನು ಇವನನ್ನು ಹೊತ್ತುಕೊಂಡು ಬರುತ್ತೇನೆ." ಆ ಮನುಷ್ಯನು ಹೇಳಿದ.

ನೀರಜಾನನ್ನು ಹೊತ್ತುಕೊಂಡು ಆ ಅಪರಿಚಿತ ಮನುಷ್ಯನ ಕೂಡ ಪ್ರಮೋದ ಆ ಗುಡಿಸಲಿಗೆ ಹೋದ. ಒಂದು ಮೂಲೆಯೊಳಗೆ ಸ್ವಲ್ಪ ಬೆಂಕಿ ಹೊತ್ತಿಕೊಂಡಿತ್ತು. ಅದರ ಹತ್ತಿರದಲ್ಲಿಯೇ ಒಂದು ಚಾಪೆಯಿದ್ದಿತು. ಅದರ ಮೇಲೆ ಪ್ರಮೋದನು ನೀರಜಾನನ್ನು ಮಲಗಿಸಿ ಅವಳ ಕೈ ಕಾಲುಗಳಿಗೆ ಕಾವು ಕೊಡಹತ್ತಿದ. ಮೆಲ್ಲಮೆಲ್ಲಗೆ ಅವಳಿಗೆ ಮೈಮೇಲೆ ಪ್ರಜ್ಞೆ ಬಂದಿತು. ಅತ್ತ ಅಪರಿಚಿತ ಮನುಷ್ಯನು ಈಗ ಹೊತ್ತುಕೊಂಡು ಬಂದ ಆಹತ ಮನುಷ್ಯನ ಚಾಕರಿ ಮಾಡುತ್ತಿದ್ದ. ಆತನ ಕುತ್ತಿಗೆಯ ಹತ್ತರ ಹಾಯ್ದು ಗುಂಡು ಹೋಗಿತ್ತು. ಗಾಯವೇನೂ ಅಷ್ಟು ದೊಡ್ಡದಿದ್ದಿಲ್ಲ. ಪ್ರಯತ್ನ ಮಾಡಿದರೆ ಉಳಿಯುವ ಆಶೆಯಿತ್ತು. ಇನ್ನೊಂದು ಚಾಪೆಯಮೇಲೆ ಅವನನ್ನು ಮಲಗಿಸಿ ಗೃಹಸ್ವಾಮಿ ಅವನ ಗಾಯಕ್ಕೆ ಪಟ್ಟಿ ಕಟ್ಟಹತ್ತಿದ. ನೀರಜಾ ಸ್ವಲ್ಪ ಸಮಯದಲ್ಲಿಯೇ ಎಚ್ಚರಾದಳು. ಈಗ ಪ್ರಮೋದನಿಗೆ ಆಹತ ಮನುಷ್ಯನನ್ನು ನೋಡಲು ಸಮಯ ಸಿಕ್ಕಿತು. ನೀರಜಾನೂ ಅವನ ಕಡೆಗೆ ನೋಡಹತ್ತಿದಳು. ನೋಡುತ್ತಲೇ ಅವಳು ಚೀರಿಕೊಂಡಳು. ಪ್ರಮೋದನೂ ಸಂನ್ಯಾಸಿಯನ್ನು ಗುರುತಿಸಿದ. ಗುರುತಿಸುತ್ತಲೇ ವ್ಯಾಕುಲನಾಗಿ ಅವನು ಸಂನ್ಯಾಸಿಯ ಸೇವೆಯಲ್ಲಿ ತೊಡಗಿದ. ತುಸು ಹೊತ್ತಿನಲ್ಲಿ ಸಂನ್ಯಾಸಿಗೆ ಸ್ವಲ್ಪ ಆರಾಮವೆನಿಸಿತು. ಆತನ ಬಾಯಿಂದ ಮಾತು ಹೊರಬಿದ್ದುವು.

" ನೀವು ಯಾರಾದರೊಬ್ಬರು ಹೋಗಿ ಪೋಲೀಸರಿಗೆ ಬೇಗನೆ ತಿಳಿಸಿರಿ. ಇಲ್ಲವಾದರೆ ಬಹಳ ಅನರ್ಥವಾಗುವುದು." ವ್ಯಗ್ರತೆಯಿಂದ ಸನ್ಯಾಸಿ ಹೇಳಿದ.

ಎಲ್ಲರೂ ಸಂನ್ಯಾಸಿಯನ್ನೆ ನೋಡತೊಡಗಿದರು. ಅವನ ಮಾತಿನ ಅರ್ಥವೇ ಅವರಿಗೆ ಆಗಿಲ್ಲವೇನೋ ಎನ್ನುವಂತೆ ಅವರ ಗತಿಯಾಗಿತ್ತು. ತಂದೆ ಮಾತನಾಡುವುದನ್ನು ನೋಡಿ ನೀರಜಾ ಅವನನ್ನು ಅಪ್ಪಿಕೊಂಡು ಅಳಹತ್ತಿದಳು. ಸಂನ್ಯಾಸಿಯೂ ಪ್ರೇಮದಿಂದ ಮಾತನಾಡಲು ಅಸಮರ್ಥನಾದ.

" ಮಹನೀಯರೆ, ಇನ್ನು ಹೆದರುವ ಕಾರಣವಿಲ್ಲ. ಗುಂಡು ಹೊರಗೆ ಬಂದಿದೆ. ತುಸುವೇ ದಿವಸಗಳಲ್ಲಿ ನೆಟ್ಟಗಾಗುವಿರಿ. ಆದರೆ ಇದೆಲ್ಲ ಹೇಗೆ ನಡೆಯಿತು ?" ಸಂನ್ಯಾಸಿಯು ಕಡೆಗೆ ನೋಡಿ ಗೃಹಸ್ವಾಮಿ ಕೇಳಿದ.

ಗುಡಿಸಲಿನ ಸ್ವಾಮಿಯ ದನಿಯನ್ನು ಕೇಳಿ ಪ್ರಮೋದನು ಗುರುತಿಸಿದ. ಅವನಿಗೆ ಆಶ್ಚರ್ಯವೂ ಆಯಿತು. ಇವನು ಯಾಮಿನೀನಾಥನ ಹಿಂದಿನ ಆಳು. ಯಾಮಿನೀನಾಥನ ಕೂಡ ಕಾನಪುರಕ್ಕೆ ಹೋಗಿದ್ದ. ನೀರಜಾನೂ ಕಣ್ಣೊರೆಸಿಕೊಂಡು ನೋಡಿದಳು. ಗುರುತಿಸಿದಳು. ಆಶ್ಚರ್ಯದಲ್ಲಿ ಮುಳುಗಿದಳು "ಏನು, ನೀನೇ ಅಲ್ಲವೇ, ನಾವೆಯಲ್ಲಿ ನಾನು ಸಂಕಟದಲ್ಲಿ ಬಿದ್ದಾಗ ಸಂತಯಿಸಿದ್ದೆ, ಕೊನೆಗೆ ಪಾರು ಮಾಡಿದೆ. ಎಂದಳು ನೀರಜಾ.

ನೀರಜಾ ತಂದೆಯ ಕೊರಳನ್ನು ಬಿಟ್ಟಳು. ಗೃಹಸ್ವಾಮಿ ಸಂನ್ಯಾಸಿಯ ಬಾಯೊಳಗೆ ನೀರು ಬಿಡುತ್ತಾ—"ಹೂಂ, ಅವನೇ ನಾನು" ಎಂದು ಹೇಳಿ ಸಂನ್ಯಾಸಿಯ ಕಡೆಗೆ ತಿರುಗಿ, "ಮಹನೀಯರೆ, ಇನ್ನು ಹೆದರಬೇಡಿರಿ. ನೀವು ಈ ವಿಪತ್ತಿಗೆ ಹೇಗೆ ಗುರಿಯಾದಿರಿ?" ಎಂದು ಕೇಳಿದ.

"ನಾನೊಂದು ಕೆಲಸದ ಸಲುವಾಗಿ ಪ್ರಯಾಗದ ಒಂದು ಗುಡಿಗೆ ಹೊರಟಿದ್ದೆ. ಆದರೆ ದಾರಿಯಲ್ಲಿಯೇ ಹೊತ್ತು ಮುಳುಗಿತು. ಗಟ್ಟಿಯಾಗಿ ಮಳೆ ಬರಲಾರಂಭಿಸಿತು. ಅದರಿಂದ ದಾರಿಯಲ್ಲಿದ್ದ ಗುಡಿಯನ್ನಾಶ್ರಯಿಸ ಬೇಕಾಯಿತು. ಬಹಳ ಹೊತ್ತಾದರೂ ಮಳೆ ನಿಲ್ಲಲಿಲ್ಲ. ಅಷ್ಟರಲ್ಲಿ ಎರಡು ಮೂರು ಜನ ಇತ್ತಕಡೆಗೆಯೇ ಬರುವುದು ಕಾಣಿಸಿತು. ಅವರನ್ನು ನೋಡುತ್ತಲೇ ಏಕೋ ನನಗೆ ಸಂಶಯವಾಗಹತ್ತಿತು. ಬಂದವರೇ ಅವರು ಗುಡಿಯ ಮುಂದೆ ನಿಂತರು. ತಮ್ಮೊಳಗೇ ಮಾತನಾಡಹತ್ತಿದರು—"

"ಅವರು ಏನೇನು ಮಾತನಾಡಹತ್ತಿದರು?" ಎಲ್ಲರೂ ಕುತೂಹಲ ದಿಂದ ಕೇಳಿದರು.

"ನನಗೆ ಅವರ ಮಾತೆಲ್ಲ ಕೇಳಿಸಲಿಲ್ಲ; ಆದರೆ ನನ್ನ ಕಿವಿಗೆ ಬಿದ್ದ ಮಾತಿನ ತಾತ್ಪರ್ಯವನ್ನು ನೋಡಿ ನನ್ನ ತಲೆ ತಿರುಗಹತ್ತಿತು." ಹೇಳಿದ ಸಂನ್ಯಾಸಿ.

"ಅದರ ತಾತ್ಪರ್ಯವೇನು?" ಎಲ್ಲರೂ ವ್ಯಗ್ರಮನಸ್ಸಿನಿಂದ ಕೇಳಿದರು.

"ಅವರೆಲ್ಲರೂ ಹಿರಣ್ಯಕುಮಾರರನ್ನು ಕೊಲ್ಲಲು ಹೊರಟಿದ್ದರು. ಅವರು ಅಲ್ಲಿ ನಿಂತುಕೊಂಡು ತಮ್ಮ ಇನ್ನೊಬ್ಬ ಸಂಗಡಿಗನ ಹಾದಿ ನೋಡು ತ್ತಿದ್ದರು. ಆದರೆ ಬಹಳ ಹೊತ್ತಾದರೂ ಅವನು ಬರಲಿಲ್ಲ. ಆಗ ಅವರೊಳ ಗಿನವನೊಬ್ಬನು—"ಇಲ್ಲಿ ಹೀಗೆ ನಿಂತರೇನಾಗುವುದು? ನಡೆಯಿರಿ,

ಹೋಗುವಾ,'' ಎಂದು ಹೇಳಿದ. ಅವರು ಹೋದರೆಂದು ತಿಳಿದು ನಾನು ಅವರ ಗುಟ್ಟನ್ನು ಅರಿಲುಯ ಹೊರಬಿದ್ದೆ. ಹೊರಗೆ ಬಂದು ನೋಡಿದೆ, ಅವರೊಳಗಿನೊಬ್ಬನು ಇನ್ನೂ ನಿಂತುಕೊಂಡಿದ್ದ. ನಾನು ಅವರಾಡಿದ ಮಾತನ್ನೆಲ್ಲ ಕೇಳಿದ್ದೇನೆಂದು ಅವನು ತಿಳಿದು ನನ್ನ ಮೇಲೆ ಗುಂಡುಹಾರಿಸಿದ. ನಾನು ಕಡಕೊಂಡು ಬಿದ್ದೆ. ಸರಿ, ಮುಂದೇನಾಯಿತೊ ನನಗೆ ತಿಳಿಯಲಿಲ್ಲ. ಏನೇ ಆಗಲಿ, ಆದರೆ ಈಗ ಪೋಲೀಸರಿಗೆ ತಿಳಿಸುವುದು ತೀರ ಆವಶ್ಯಕ–" ಎಂದು ಸಂನ್ಯಾಸಿ ಹೇಳಿದ.

"ಹೂಂ, ಹೀಗೆ ಮಾಡದ್ದದಿರೆ ಕೊಲೆಯಾಗುವುದು." ಪ್ರಮೋದನೆಂದ.

ಮಳೆ ಇನ್ನೂ ಬರುತ್ತಲಿದ್ದಿತು. ಅದನ್ನು ಲಕ್ಷ್ಯಕ್ಕೆ ತಾರದೆ ಗೃಹಸ್ವಾಮಿ ಪೋಲೀಸರಿಗೆ ಸೂಚನೆ ಕೊಡಲು ಅಲ್ಲಿಂದ ಹೊರಟ.

## ಪಾಪಕ್ಕೆ ತಕ್ಕ ಫಲ!

ಎರಡು ತಾಸಿನಮೇಲೆ ಗೃಹಸ್ವಾಮಿ ಬಂದ. ಅವನ ಮೋರೆಯ ಮೇಲೆ ಆನಂದವು ಉಕ್ಕೇರುತಿದ್ದಿತು. "ಮಹನೀಯರೆ, ಮುಖ್ಯ ಕೊಲೆಗಾರನೇ ಸಿಕ್ಕ. ತಲೆಗಳ್ಳ! ಅವನ ಹೆಸರನ್ನು ಕೇಳುವಿರೇನು? ಅವನೇ ನಿಮ್ಮ ಪ್ರೀತಿಯ ಮಿತ್ರ ಯಾಮಿನೀಬಾಬು! ನನ್ನ ಮೊದಲಿನ ಒಡೆಯ ಯಾಮಿನೀ ಬಾಬು!'' ಅವನು ಪ್ರಮೋದನ ಕಡೆಗೆ ಮುಖ ಮಾಡಿ ಹೇಳಿದ.

ಪ್ರಮೋದ ನೀರಜಾರಿಬ್ಬರಿಗೂ ಸೋಜಿಗವೆನಿಸಿತು. ಆಗ ಸಂನ್ಯಾಸಿಗೆ ಸ್ವಲ್ಪ ಜೋಮು ಬಂದಿತ್ತು. ಆದರಿಂದ ಈ ಮಾತನ್ನು ಅವನು ಕೇಳಲಿಲ್ಲ. ಪ್ರಮೋದನಿಗೆ ನಂಬುಗೆಯಾಗಲಿಲ್ಲ. "ಯಾಮಿನೀಬಾಬು ಸಿಗಲು ಹೇಗೆ ಸಾಧ್ಯವಿದೆ? ಅವನು ಈಗ ಕಲಕತ್ತೆಯಲ್ಲಿದ್ದಾನೆ!'' ಆಶ್ಚರ್ಯದಿಂದ ನುಡಿದ.

"ಮಹನೀಯರೆ, ಎಲ್ಲ ಸಮಾಚಾರ ತಿಳಿದಬಳಿಕ ನಿಮಗೇ ಗೊತ್ತಾಗುವುದು. ನಾನು ಹೋಗಿ ಪೋಲೀಸರಿಗೆ ತಿಳಿಸಿದೆ. ಕೆಲವುಮಂದಿ ಪೋಲೀಸರು ಹಿರಣ್ಯಬಾಬುಗಳ ಮನೆಯ ಹತ್ತಿರಬಂದು ಅಡಗಿಕೊಂಡರು. ನಾನೂ ಅವರ ಜೊತೆಯಲ್ಲೇ ಇದ್ದೆ." ಆ ವ್ಯಕ್ತಿ ಹೇಳಿದ.

"ಹಿರಣ್ಯಕುಮಾರರೆಂದರೆ ಯಾರು, ಮೊದಲು ಇದನ್ನು ಹೇಳು?" ಪ್ರಮೋದನು ಕೇಳಿದ.

" ಆಲಿಪುರದ ಡೆಪ್ಯೂಟೀಕಲೆಕ್ಟರ ಇದ್ದಾರಲ್ಲ ಅವರೇ. ಬಿಡುವು ತೆಗೆದುಕೊಂಡು ಬಂದು ಇಲ್ಲಿಯೇ ಇರಹತ್ತಿ ತುಸು ದಿವಸಗಳಾಗುವು." ಗೃಹಸ್ವಾಮಿ ಹೇಳಿದ.

ಹಿರಣ್ಮಯಕುಮಾರರಾರೆಂಬುದನ್ನು ಪ್ರಮೋದನು ತಿಳಿದುಕೊಂಡ. ಆದರೆ ಏನೂ ಮಾತನಾಡಲಿಲ್ಲ.

" ನಾವು ಅಡಗಿಕೊಂಡು ನಿಂತಿದ್ದೆವು. ನಾಲ್ಕಯ್ದು ಮಂದಿ ಬಂದು ಹೆಬ್ಬಾಗಿಲಿನ ಹತ್ತಿರ ನಿಂತರು. ಬಾಗಿಲು ತೆರೆದಿತ್ತು. ಒಬ್ಬೊಬ್ಬರಾಗಿ ಒಳಗೆ ಹೊರಡುವುದರಲ್ಲಿದ್ದರು. ಆಗಲೇ ನಾವು ಆ ನಾಲ್ವರನ್ನೂ ಹಿಡಿದೆವು. ಅವರೊಳಗೆ ಯಾಮಿನೀಬಾಬೂ ಕೂಡ ಇದ್ದಾನೆ." ಗೃಹಸ್ವಾಮಿ ಹೇಳಿದ.

" ಅವನು ಬೇರೊಂದು ಕೆಲಸಕ್ಕೆ ಅದೇ ಹೊತ್ತಿಗೆ ಅವರ ಬಳಿಗೆ ಹೊರಟಿರಬಹುದು." ಪ್ರಮೋದನು ಹೇಳಿದ.

" ನೀವು ಯಾಮಿನೀಬಾಬು ದೋಷಿಯಲ್ಲವೆನ್ನುತ್ತೀರಾ? ಅವನೇ ನನಗೀಸ್ಥಿತಿಯನ್ನು ತಂದವನು. ಅವನಿಗೆ ಹೆದರಿಕೊಂಡೇ ನಾನು ಮನೆ-ಮಾರನ್ನು ತೊರೆದು ತಿರುಗಾಡುತ್ತಿದ್ದೇನೆ. ಅವನ ಅಪ್ಪಣೆಯ ಪ್ರಕಾರ ನಿಮ್ಮಮೇಲೆ ಗುಂಡು ಹಾರಿಸಲಿಲ್ಲ, ಇದೇ ನನ್ನ ತಪ್ಪು!" ಪ್ರಮೋದನ ಮಾತು ಕೇಳಿ ಗೃಹಸ್ವಾಮಿ ಸಿಟ್ಟಿಗೆದ್ದು ಹೇಳಿದ.

ಇಷ್ಟಾದಮೇಲೆ ರಾಮಧನನು ನೀರಜಾನನ್ನು ಅಪಹರಿಸಿಕೊಂಡು ಬಂದುದನ್ನೂ ಪ್ರಮೋದನನ್ನು ಕೊಲ್ಲಲು ಹಾಕಿದ ಹೊಂಚನ್ನೂ ಸಂಕ್ಷೇಪವಾಗಿ ಹೇಳಿದ. ಹೇಳುವಾಗ ಅವನ ಕಣ್ಣುಗಳಿಂದ ಕಿಡಿಯುದುರಹತ್ತಿದ್ದುವು. ನೀರಜೆಯ ಹೃದಯಕ್ರಿಯೆಯು ಮೆಲ್ಲಗೆ ನಡೆಯಹತ್ತಿತು. " ಯಾಮಿನಿ ನನ್ನನ್ನು ಕೊಲ್ಲುವನೆ? ಇದು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ. ನಿಜವಾದ ಕೊಲೆಗಡಕನು ನನ್ನ ಮುಂದೆಯೇ ಪಿಸ್ತೂಲು ಹಿಡಿದುಕೊಂಡು ಹೋಗುತ್ತಿದ್ದ. ನಾನು ಕಣ್ಮುಟ್ಟ ನೋಡಿದ್ದೇನೆ." ವಿಸ್ಮಿತನಾಗಿ ಪ್ರಮೋದನು ಹೇಳಿದ.

" ಹೂಂ, ಇದೇನೊ ನಿಜ. ಯಾಮಿನೀಬಾಬು ತಾನೇ ಕೊಲ್ಲಲು ಹೋಗಿದ್ದಿಲ್ಲ." ಗೃಹಸ್ವಾಮಿ ಹೇಳಿದ.

ಪ್ರಮೋದ—" ಅಲ್ಲ, ಒಬ್ಬ ದೊಡ್ಡಮನುಷ್ಯನೇ ಪಿಸ್ತೂಲು ಹಿಡಿದುಕೊಂಡು ಹೋಗುತ್ತಿದ್ದುದನ್ನು ಕಣ್ಣಾರೆ ನೋಡಿದ್ದೇನೆ. ಅವನು ಯಾಮಿನಿಯ ಆಳೇನು ಅಲ್ಲ."

ಗೃಹಸ್ವಾಮಿ—" ನನಗೆ ಗೊತ್ತಾಯಿತು. ನೀವು ಯಾರನ್ನು ನೋಡಿದಿರೆಂಬುದು. ನೀವು ಹಿರಣ್ಯಕುಮಾರರನ್ನು ನೋಡಿರಬಹುದು."

ಪ್ರಮೋದ—" ನಿನಗೆ ಇದೆಲ್ಲ ಹೇಗೆ ತಿಳಿಯಿತು?"

" ಒಬ್ಬ ಸಜ್ಜನನು ಬಂದು ಪಿಸ್ತೂಲನ್ನು ಕಸಿದುಕೊಂಡನೆಂದು ನನ್ನ ಗೆಳೆಯನು ಹೇಳಿದ್ದ. ಆ ಮೇಲೆ ಹಿರಣ್ಯಬಾಬುಗಳಿಂದ ಈ ಸಂಗತಿ ತಿಳಿಯಿತು." ಅವನು ಹೇಳಿದ.

ರಾಮಧನನು ಹಿರಣ್ಯಬಾಬುಗಳ ಮನೆಗೆ ಹೋದ ಬಳಿಕ ನಡೆದ ಸಂಗತಿಯನ್ನೆಲ್ಲ ಸಂಕ್ಷೇಪವಾಗಿ ಹೇಳಿದ.

" ನೀನು ಹಿರಣ್ಯಕುಮಾರರಿಂದ ಹೇಗೆ ಕೇಳಿದೆಯಲ್ಲವೆ? ಇದಕ್ಕೆ ಆಧಾರವೇನು? ನೀನು ನಿನ್ನ ಮಿತ್ರನಿಂದ ಏನು ಕೇಳಿದೆ?" ಪ್ರಮೋದನು ಕೇಳಿದ.

ಆಗ ಅವನು—" ನನ್ನ ಗೆಳೆಯ ಯಾಮಿನೀನಾಥನ ಸೇವಕನಿದ್ದಾನೆ. ನಾನು ಒಪ್ಪದ್ದರಿಂದ ಅವನಿಗೂ, ಬೇರೊಬ್ಬ ಮನುಷ್ಯನಿಗೂ ನಿಮ್ಮನ್ನು ಕೊಲ್ಲಲು ಯಾಮಿನಿಬಾಬು ಅಪ್ಪಣೆ ಮಾಡಿದ. ಆದರೆ ಗುರಿ ಎರಡು ಸಾರೆಯೂ ತಪ್ಪಿತು. ಆ ಮೇಲೆ ನೀವು ಹಿಡಿಯಲು ಓಡಿದಿರಿ. ಆಗ ಅವರು ಓಡಿ ಹೋದರು." ಎಂದು ಹೇಳಿದ.

ಪ್ರಮೋದ—" ಹೌದು, ನಾನು ಇಬ್ಬರು ಓಡುವುದನ್ನು ನೋಡಿದ್ದೆ. ಅವರು ಯಾಮಿನಿಯ ನೌಕರರೆ?"

ಗೃಹಸ್ವಾಮಿ—" ಪಿಸ್ತೂಲಿನ ಸಪ್ಪಳವನ್ನು ಕೇಳಿ, ಅವರು ಓಡುವುದನ್ನು ನೋಡಿ ಒಬ್ಬ ಸಜ್ಜನನು ಅವರನ್ನು ಬೆನ್ನಟ್ಟಿದ. ಮೊದಲು ಅವರು ಯಾರೆಂಬುದು ನನಗೂ ಗೊತ್ತಿದ್ದಿಲ್ಲ; ಆದರೆ ನಿಮಗೆ ಮೊದಲೇ ಹೇಳಿದೆನಲ್ಲ, ಅವರು ಹಿರಣ್ಯಬಾಬುಗಳೆಂದು. ಅವರನ್ನು ನೋಡಿ ಇಬ್ಬರೂ ಅತ್ತಿತ್ತ ಓಡಹತ್ತಿದರು. ಹಿರಣ್ಯಬಾಬು ಪಿಸ್ತೂಲು ಹಿಡಿದುಕೊಂಡವನ ಬೆನ್ನು ಹತ್ತಿದರು. ಅವನ ಕೈ ಹಿಡಿಯಹೋದರು. ಆದರೆ ಕೈಯ ಬದಲು ಪಿಸ್ತೂಲು ಸಿಕ್ಕಿತು ಆಗಲೇ ಅವನು ಓಡಿಹೋದ. ಮರುದಿನ ಇದೆಲ್ಲ ಸಂಗತಿ ನನ್ನ ಮತ್ತೊಬ್ಬ ಗೆಳೆಯನು ಹೇಳಿದ. ಇದರ ಮೇಲಿಂದ ನೀವು ಹಿರಣ್ಯಬಾಬುಗಳ ಕೈಯಲ್ಲಿ ಪಿಸ್ತೂಲು ಇದ್ದಾಗ ನೋಡಿದಂತೆ ಕಾಣುತ್ತದೆ."

ಇದೆಲ್ಲವನ್ನು ಕೇಳಿ ಪ್ರಮೋದನು ಕಕ್ಕಾವಿಕ್ಕಿಯಾದ. ಆದರೂ ಯಾಮಿನಿ ದೋಷಿಯೆಂದು ಒಪ್ಪಲು ಅವರು ಸಿದ್ಧರಿದ್ದಿಲ್ಲ. ಇದೇ ಹೊತ್ತಿಗೆ

ಒಬ್ಬ ಮುದುಕಿ ಆ ಗುಡಿಸಲಿಗೆ ಬಂದಳು. ಮುದುಕಿ ರಾಮಧನನ ದೊಡ್ಡಮ್ಮ. ಇಲ್ಲಿ ಇಷ್ಟು ಮಂದಿಯನ್ನು ನೋಡಿ ಗಾಬರಿಯಾದಳು. ಮಳೆ ಬರುತ್ತಿರುವುದರಿಂದ ನಿಂತರೆಂದು ರಾಮಧನನು ಅವಳಿಗೆ ಹೇಳಿದ.— “ ಒಳ್ಳೆಯದು, ಮಗು, ಒಳ್ಳೆಯದು — ಇಂಥ ಮಳೆಯಲ್ಲಿ, - ಇಂಥ ಹೊತ್ತಿನಲ್ಲಿ ಯಾರೂ ಹೊರಗೆ ಬೀಳುವುದಿಲ್ಲ! ನೀವು ಇಲ್ಲಿಗೆ ಬಂದು ಒಳ್ಳೆಯದು ಮಾಡಿದಿರಿ. ಆದರೆ ಒಬ್ಬ ಹುಚ್ಚಿ ............ ”

“ ಯಾವ ಹುಚ್ಚಿ ಅವಳು ? ” ಪ್ರಮೋದನು ಕೇಳಿದ.

ಮುದುಕಿ—“ ನಾನು ಬಹಳ ದಣಿದು ಮನೆಗೆ ಬರುತ್ತಿದ್ದೆ. ದಾರಿಯಲ್ಲಿ ಒಬ್ಬ ಹುಚ್ಚ ಹುಡುಗಿ .. .... ಆಹಾ ! ಇಂಥ ಸುಂದರಿಯನ್ನ ನಾನು ಎಂದೂ ನೋಡಿದ್ದಿಲ್ಲ — ಉನ್ಮಾದಿನಿಯಾಗಿ ಇಂಥ ಮಳೆಯೊಳಗೆಯೇ ಅಲೆದಾಡುತ್ತಿದ್ದಳು. ಪಾಪ! ಅವಳ ತಲೆಗೂದಲೆಲ್ಲ ಹರಡಿದ್ದುವು. ”

“ ಪಾಪ! ಯಾರ ಹುಡುಗೆಯೊ ಏನೊ ? ” ಪ್ರಮೋದ ನೀರಜಾ ಇಬ್ಬರೂ ಏಕಕಂಠದಿಂದ ಹೇಳಿದರು.

ಮುದುಕಿ — “ ಯಾರ ಹುಡುಗೆಯೊ ಏನೊ, ನನಗೆ ಗೊತ್ತಿಲ್ಲ. ಅವಳು ಕೇವಲ ಹಾಡು ಹೇಳುತ್ತಿದ್ದಳು. ನೀನು ಯಾರನ್ನು ಹುಡುಕುತ್ತೀ ಎಂದು ಕೇಳಿದೆ. ‘ ನಾನೇ ಪ್ರಮೋದ, ನೀರಜಾ — ಅಲ್ಲ ಹಿರಣ್ಯ, ಆಹಾಹಾ ! ಹುಡುಕುತ್ತೇನೆ !!ಹುಡುಕುತ್ತೇನೆ !!! ’ ಎಂದಳು ಅವಳು.

“ ಅಯ್ಯೊ ! ನಮ್ಮ ಕನಕನೇ ಆಗಿರಬೇಕು. ಅವಳ ವಯಸ್ಸೆಷ್ಟು ಹೇಳಬಲ್ಲೆಯಾ ? ” ಪ್ರಮೋದನು ವ್ಯಾಕುಲನಾಗಿ ಕೇಳಿದ. ”

ಮುದಿಕಿ— “ ಬಹಳೇನಿಲ್ಲ, ಹದಿನಾಲ್ಕು ಹದಿನೈದು ಇರಬಹುದು ”

ಈ ಮಾತನ್ನು ಕೇಳಿದ ಕೂಡಲೇ ಪ್ರಮೋದ ನೀರಜಾರಿಬ್ಬರ ಮೇಲೂ ಸಿಡಿಲೆರಗಿದಂತಾಯಿತು

“ ನೀನು ಇಲ್ಲಿಯೇ ಇರು. ಅವಳು ಖಂಡಿತವಾಗಿಯೂ ಕನಕನೇ ಇರಬೇಕೆಂದು ನನಗೆನಿಸುತ್ತದೆ. ಅವಳನ್ನು ಹುಡುಕಿಕೊಂಡು ಬರುತ್ತೇನೆ. ” ಪ್ರಮೋದನು ನೀರಜಾನಿಗೆ ಹೇಳಿದ.

ನೀರಜಾ— “ ಇಷ್ಟು ಹೊತ್ತಿಗೆ ಅವಳ ಸ್ಥಿತಿಯೇನಾಗಿದೆಯೋ ಏನೊ! ಪಾಪ ! ”

ಮುದುಕಿ—“ ನಾನು ಅವಳಿಗೆ ನನ್ನ ಕೂಡ ಬರಲು ಹೇಳಿದೆ; ಆದರೆ ಅವಳು ಹಾಡುತ್ತ ಎದುರಿಗಿರುವ ದೊಡ್ಡ ಮನೆಯೊಳಗೆ ಹೊಕ್ಕಳು.”

ಮುದುಕಿ ಹೊರಗೆ ಬಂದು ಪ್ರಮೋದನಿಗೆ ಆ ಮನೆಯನ್ನು ತೋರಿಸಿದಳು ಹುಚ್ಚನಂತೆ ಪ್ರಮೋದನು ಆ ಮನೆಯ ಕಡೆಗೆಯೇ ಓಡಿದ. ಗಾಬರಿಯಿಂದ ಅವನು ಆ ಮನೆಯೊಳಗೆ ನುಗ್ಗಿದ. ಯಾರೋ ಬಂದ ಸಪ್ಪಳವನ್ನು ಕೇಳಿ ಹಿರಣ್ಯಬಾಬು ಹೊರಗೆ ಬಂದರು. ಪ್ರಮೋದನು ಹುಚ್ಚನಂತೆ “ ಕನಕ ಎಲ್ಲಿದ್ದಾಳೆ ” ಎಂದು ಕೇಳಿದ.

ಮಾತನಾಡಿದರೆ ಕನಕ ಎದ್ದಾಳೆಂಬ ಹೆದರಿಕೆಯಿಂದ ಹಿರಣ್ಯನು ಮೆಲ್ಲಗೆ—“ ಇದೇ ಕೋಣೆಯೊಳಗೆ, ಆದರೆ ಸುಮ್ಮನಿರಿ. ಕನಕ ಮಲಗಿದ್ದಾಳೆ. ಗದ್ದಲ ಮಾಡಿದರೆ ಏಳುವಳು.” ಎಂದು ಹೇಳಿದರು. ಪ್ರಮೋದನು ಹಿರಣ್ಯಕುಮಾರರ ಮಾತಿನ ಕಡೆಗೆ ಲಕ್ಷ್ಯ ಕೊಡಲಿಲ್ಲ. ಕೋಣೆಯೊಳಗೆ ಹೋದ. ಹಿರಣ್ಯಬಾಬು ವ್ಯಾಕುಲರಾಗಿ ಅವನ ಹಿಂದೆ ಹೋದರು. ಕನಕನ ಪಲ್ಲಂಗದ ಹತ್ತಿರ ಹೋಗಿ ಪ್ರಮೋದನು ವ್ಯಗ್ರನಾಗಿ—“ ಕನಕ, ನನ್ನ ತಂಗಿ ಕನಕ!” ಎಂದ. ಹಿರಣ್ಯಬಾಬು ಇದನ್ನು ಕೇಳಿ ಮೆಲ್ಲಗೆ—“ ಸುಮ್ಮನಿರಿ! ಸುಮ್ಮನಿರಿ! ಕನಕ ಏಳುವಳು!” ಎಂದು ಹೇಳಿದರು.

ಪ್ರಮೋದನು ಹಿರಣ್ಯರ ಮಾತನ್ನು ಕೇಳಲಿಲ್ಲ. ಕನಕನ ಕೊರಳಿಗೆ ಕೈಹಾಕಿ ಕರೆದ—“ ನನ್ನ ಪ್ರೀತಿಯ ತಂಗಿ, ಕನಕ! ಎದ್ದು ಒಂದು ಸಾರೆ ನನ್ನ ಕೂಡ ಮಾತನಾಡು.”

ಕನಕಲತಾ ಎದ್ದಳು.

## ವಿಜಯ

ಮಸ್ತಿಷ್ಕದ ರೋಗಗಳಿಗೆ ನಿದ್ದೆಯೊಂದೇ ಮದ್ದು. ಇದನ್ನು ಬಿಟ್ಟರೆ ಔಷಧವಿಲ್ಲ. ತುಸು ಹೊತ್ತಿನ ಮೇಲೆ ಕನಕನ ಸ್ಥಿತಿ ಸ್ವಲ್ಪ ಸುಧಾರಿಸಿತು. ಪ್ರಮೋದನು ಅಕಸ್ಮಾತ್ತಾಗಿ ಹೀಗೆ ಆದರದಿಂದ ಕರೆಯುವದನ್ನೂ, ಮಲಿನ ಮುಖದಿಂದ ನಿಂತುಕೊಂಡಿದ್ದ ಹಿರಣ್ಯಕುಮಾರರನ್ನೂ ನೋಡಿ ಅವಳಿಗೆ ಏನೂ ತೋಚದಂತಾಯಿತು. ಅವಳ ಮುಖದ ಮೇಲೆ ಆನಂದದ ತೆರೆಗಳು ಸುಳಿಯಹತ್ತಿದುವು. ಅವಳು ಎದ್ದುದನ್ನು ನೋಡಿ ಹರ್ಷದಿಂದ ಪ್ರಮೋ

ದನು—“ ಕನಕ ! ನಾನೆಷ್ಟೋ ತಪ್ಪು ಮಾಡಿದ್ದೇನೆ. ನನ್ನ ಪ್ರೀತಿಯ ತಂಗಿ ! ನಾನು ಆ ಎಲ್ಲ ಅಪರಾಧಗಳ ಪ್ರಾಯಶ್ಚಿತ್ತವನ್ನು ಮಾಡುವೆ— ಹಿರಣ್ಯಬಾಬು ! ಏನೇ ಇರಲಿ, ನಿಮಗೆ ಕನಕನನ್ನು ಕೊಟ್ಟು ಮದುವೆ ಮಾಡುತ್ತೇನೆ.” ಎಂದು ಹೇಳಿದ.

ಇದನ್ನು ಕೇಳುತ್ತಲೇ ಕನಕನಿಗೆ ಹಿಂದಿನ ಘಟನೆಗಳೆಲ್ಲ ನೆನಪಿಗೆ ಬಂದುವು. ಅಣ್ಣನ ಕಠೋರತನ, ಹಿರಣ್ಯಬಾಬುಗಳ ನಿಷ್ಠುರತನ ಎಲ್ಲವೂ ಜ್ಞಾಪಕಕ್ಕೆ ಬಂದುವು. ಹಲವಾರು ದಿನಗಳಾದ ಮೇಲೆ ಇಂದು ಪ್ರಮೋದನು ಅವಳನ್ನು ಇಷ್ಟು ಪ್ರೀತಿಯಿಂದ ಕರೆದದ್ದು. • ಹಿರಣ್ಯಕುಮಾರರು ಹತ್ತಿರದಲ್ಲಿಯೇ ನಿಂತಿದ್ದರು. ಇಷ್ಟು ಆನಂದವನ್ನು ಅವಳು ಹೇಗೆ ಸಹಿಸುವಳು ! ಕನಕನಿಗೆ ಮತ್ತೆ ಭ್ರಮೆಯಾಯಿತು. ತಲೆ ಮತ್ತೆ ತಿರುಗಲಾರಂಭಿಸಿತು. ರಕ್ತದ ಒತ್ತಡವು ತೀವ್ರವಾಯಿತು. —“ ಅಣ್ಣ, ಇಂಥ ಆದರದ ಸಂಭಾಷಣೆಯನ್ನು ನಾನು ಬಹಳ ದಿನಗಳ ನಂತರ ಕೇಳಿದೆ. ಇಂಥ ಸುಖವು ಎಂದಾದರೂ ಸಿಗುವುದೆಂದು ನಾನು ಕನಸಿನಲ್ಲಿಯೂ ಯೋಚಿಸಿದ್ದಿಲ್ಲ.” ಎಂದಳು ಕನಕಲತಾ.

ಕನಕನು ಒಂದೇಸವನೆ ಕಣ್ಣೀರು ಸುರಿಸುತ್ತಿದ್ದಳು. ಅದರಿಂದ ಪ್ರಮೋದನ ಕೈ ಒದ್ದೆಯಾಯಿತು. ಕನಕನು ನಾಚಿಕೆ, ಅಭಿಮಾನದ ದೃಷ್ಟಿಯಿಂದ ಹಿರಣ್ಯಕುಮಾರರ ಕಡೆಗೆ ನೋಡಿ -“ ಹಿರಣ್ಯಕುಮಾರ ! ಈ ಜನ್ಮದಲ್ಲಿಯಂತೂ ಇಚ್ಛೆ ಈಡೇರಲಿಲ್ಲ. ದೇವರನ್ನು ಪೂಜೆ ಮಾಡಿದುದಕ್ಕೆ ಫಲ ಸಿಗುವಂತಿದ್ದರೆ— ವಿಶುದ್ಧ ಪ್ರೇಮಕ್ಕೆ ಫಲ ಸಿಗುವಂತಿದ್ದರೆ— ಸತ್ತ ಮೇಲೆ ಅವಶ್ಯವಾಗಿ ನಾವು ಕೂಡುವೆವು.” ಎಂದು ಹೇಳಿ ಅವಳು ಸುಮ್ಮನಾದಳು. ಕನಕನ ಮಾತಿನ ಅರ್ಥವೇ ಹಿರಣ್ಯಕುಮಾರರಿಗೆ ಆಗಲಿಲ್ಲ. ದುಃಖದಿಂದ ತುಂಬಿದ ಶೂನ್ಯದೃಷ್ಟಿಯಿಂದ ಅವಳ ಕಡೆಗೆ ನೋಡಹತ್ತಿದರು. ಪ್ರಮೋದನಿಗೆ ಇನ್ನು ತಡೆಯಲಾಗಲಿಲ್ಲ. ಅವನು ಸುಮ್ಮನೆ ಅಳಹತ್ತಿದ.

ಕನಕಲತಾ ಮತ್ತೆ ಸಾವಕಾಶವಾಗಿ ಹೇಳಲಾರಂಭಿಸಿದಳು. “ ಹಿರಣ್ಯಕುಮಾರರೆ, ಕಾಣಿಸುವುದಿಲ್ಲ. ಹತ್ತಿರ ಬನ್ನಿರಿ. ಸಾಯುವಾಗಲಾದರೂ ಕಣ್ತುಂಬ ನೋಡುತ್ತೇನೆ. ಒಂದು ಸಾರೆಯಾದರೂ ಮನವಾರೆ ......... ...” ಇಷ್ಟು ಹೇಳಿ ಕನಕಲತಾ ಸುಮ್ಮನಾದಳು. ಅವಳಿಗೆ ಮುಂದೆ ಮಾತನಾಡುವು

ದಾಗಲಿಲ್ಲ. "ತಂಗಿ, ಹೀಗೇಕೆ ಮಾತನಾಡುತ್ತಿ? ಏನಾಗಿದೆ ನಿನಗೆ?" ಪ್ರಮೋದನೆಂದ. ಕನಕನ ವೇದನೆ ಹೆಚ್ಚಿತು. ಪ್ರಮೋದನೂ ಅಳಲಾರಂಭಿಸಿದ. ಹಿರಣ್ಯ ಹುಚ್ಚನಂತೆ ಪ್ರಮೋದನಿಗೆ— "ಸುಮ್ಮನಿರಿ! ಸುಮ್ಮನಿರಿ! ಕನಕ ನಿದ್ದೆ ಹೋಗಿದ್ದಾಳೆ. ಅವಳನ್ನು ಎಬ್ಬಿಸಬೇಡಿರಿ." ಎಂದರು.

ಹಿರಣ್ಯಬಾಬು ಹತ್ತಿರ ಕುಳಿತುಕೊಂಡು ಹುಡುಗರಂತೆ ಅವಳನ್ನು ಮಲಗಿಸಹತ್ತಿದರು. ಮತ್ತೊಮ್ಮೆ ಕನಕನು ಕಣ್ದೆರೆದು ಹಿರಣ್ಯಕುಮಾರರನ್ನು ನೋಡಿದಳು ಅವಳ ಅಧರಗಳ ಮೇಲೆ ಅಪೂರ್ವ ಸುಖದ ಭಾವವು ಕಾಣಿಸ ಹತ್ತಿತು. ಕನಕಲತಾ ಮತ್ತೆ ಕಣ್ಣು ಮುಚ್ಚಿದಳು.

* * * *

ಅಣ್ಣನ ಕೈ ಮೇಲೆ ತಲೆಯನ್ನಿಟ್ಟು ಕನಕಲತಾ ಮಲಗಿಯೇ ಬಿಟ್ಟಳು. ಅರಳದ ಮುನ್ನವೇ ಪುಷ್ಪವು ತತ್ತರಿಸಿತು.

ಪ್ರಮೋದನಿಗೆ ಗೊತ್ತಾಯಿತು. ಗಟ್ಟಿಗಟ್ಟಿಯಾಗಿ ಅಳಹತ್ತಿದ. ಹಿರಣ್ಯ ಕುಮಾರರು ಮತ್ತೆ ಹುಡುಗರಂತೆ— "ಅಳಬೇಡಿರಿ, ಕನಕ ಏಳುವಳು." ಎಂದರು. ಹಿರಣ್ಯಬಾಬುಗಳ ಆಶೆ ಈಡೇರಲಿಲ್ಲ. ಕನಕಲತಾ ಮುಚ್ಚಿದ ಕಣ್ಣು ಗಳನ್ನು ಮತ್ತೆ ತೆಗೆಯಲೇ ಇಲ್ಲ. **ಮೊಗ್ಗು ಅರಳಿ ತನ್ನ ಸೌರಭವನ್ನು ಬೀರುವ ಮುನ್ನವೇ ಬಾಡಿತು!**

## ಉಪಸಂಹಾರ

ರಾಮಧನ ಮತ್ತು ಸಂನ್ಯಾಸಿಗಳ ಹೇಳಿಕೆಯ ಪ್ರಕಾರ ಯಾಮಿನೀ ನಾಥನಿಗೆ ಆಜನ್ಮ ಕಾರಾಗೃಹವಾಸವಾಯಿತು. ಸಂನ್ಯಾಸಿ ತಪಸ್ಸು ಮಾಡಲು ಹೊರಟುಹೋದ. ರಾಮಧನನು ಹಿರಣ್ಯಬಾಬುಗಳಲ್ಲಿರಹತ್ತಿದ.

ಎಷ್ಟೋ ವರುಷಗಳು ಗತಿಸಿದುವು. ಈ ಮಧ್ಯ ಜಗತ್ತಿನೊಳಗೆ ಎಷ್ಟೋ ಬದಲಾವಣೆಗಳಾದುವು. ಎಷ್ಟೋ ಮಂದಿ ದುಃಖಿಗಳು ಸುಖಿಗಳಾದರು. ತಿಪ್ಪೆ ಉಪ್ಪರಿಗೆಯಾಯಿತು. ಉಪ್ಪರಿಗೆ ತಿಪ್ಪೆಯಾಯಿತು. ಇಷ್ಟು ಸ್ವಲ್ಪ ಸಮ ಯದಲ್ಲಿಯೇ ಎಷ್ಟೋ ಮಂದಿ ತಾಯಂದಿರು ಮಕ್ಕಳ ಶೋಕವನ್ನು ಮರೆತರು. ಎಷ್ಟೋ ಮಿತ್ರರು ಮಿತ್ರ-ಶೋಕವನ್ನು ಮರೆತರು. ಎಷ್ಟೊ ಪತ್ನೀವ್ರತ

ಸ್ವಾಮಿಗಳು ಹೆಂಡತಿ ಸತ್ತ ಕೂಡಲೆ ಪುನರ್ವಿವಾಹ ಮಾಡಿಕೊಂಡರು. ಪ್ರಮೋದನೂ ತುಸು ದಿವಸಗಳಲ್ಲಿಯೆ ಕನಕನನ್ನು ಮರೆತ. ಕೇವಲ ಆಗಾಗ ನೆನಸುತ್ತಿದ್ದ. ಪ್ರಮೋದನಿಗೆ ಗಂಡು ಹೆಣ್ಣು ಇಬ್ಬರು ಮಕ್ಕಳಾದರು. ಅವರನ್ನು ನೋಡಿ ಅವನಿಗೆ ತನ್ನ ಬಾಲ್ಯಕಾಲದ ನೆನಪು ಬರುತ್ತಿದ್ದಿತು. ಒಮ್ಮೊಮ್ಮೆ ಕನಕನ ನೆನಪು ಬಂದಾಗ ದುಃಖವೆನಿಸುತ್ತಿದ್ದಿತು. ಆದರೆ ನೀರಜಾನನ್ನು ನೋಡಿ ಅವನು ಎಲ್ಲ ದುಃಖವನ್ನೂ ಮರೆಯುತ್ತಿದ್ದ.

ಕನಕನು ತೀರಿಕೊಂಡಮೇಲೆ ಪ್ರಮೋದ ಹಿರಣ್ಮಯರು ಪರಸ್ಪರ ವಿದ್ರೋಹ ಭಾವವನ್ನು ಮರೆತರು.—ಇಬ್ಬರೂ ಪ್ರೀತಿಯ ಮಿತ್ರರಾದರು. ಪ್ರಮೋದನು ಸ್ವಲ್ಪ ದೊಡ್ಡ ಮನಸ್ಸು ಮಾಡಿದ್ದರೆ ಹಿರಣ್ಮಯಬಾಬು ಆಜೀವನ ಸುಖಿಯಾಗುತ್ತಿದ್ದರು. ಆದರೆ ಈಗ ಅವನು ಎಷ್ಟೇ ಕನಿಕರ ತೋರಿಸಿದರೂ ಆ ದುಃಖವೇನೂ ಕಡಿಮೆಯಾಗಲಿಲ್ಲ.



# ಸಮಾಜ ಪುಸ್ತಕಾಲಯ ಧಾರವಾಡ.

## ಇವರ ಸುಂದರ ಪ್ರಕಟನೆಗಳು.

| | | | |
|---|---|---|---|
| ಕಾಲಯಾನ (ಭಾರತೀಸುತ) | ೦ | ೧೦ | ೦ |
| ಎರಡು ಸೆಳೆತ (ಮಲ್ಹಾರಿ) | ೧ | ೧೨ | ೦ |
| ಅನ್ನಪೂರ್ಣಾಮಂದಿರ (ಶೆಟ್ಟಿ) | ೨ | ೦ | ೦ |
| ಸಾವಿನ ಉಡಿಯಲ್ಲಿ (ಎನ್ಕೆ) | ೪ | ೦ | ೦ |
| ಗಂಡುಹೆಣ್ಣಿನ ಸಮಸ್ಯೆ | ೪ | ೮ | ೦ |
| ಬಿರುಗಾಳಿ (ಪ್ರೊ. ಘಡಕೆ) | ೪ | ೮ | ೦ |
| ರಮಾನಾಥ (ಪ್ರೇಮಚಂದ) | ೪ | ೦ | ೦ |
| ಧರ್ಮಸಂಕಟ (ವಾಡೇದ) | ೨ | ೦ | ೦ |
| ಸಮ್ರಾಟ ಹರ್ಷವರ್ಧನ | ೨ | [illegible] | ೦ |
| ಬೆಳವಲದ ಭಾಗ್ಯಲಕ್ಷ್ಮಿ | ೨ | ೮ | ೦ |
| ಮಾಧವ ಲೀಲೆ | ೧ | ೮ | ೦ |
| ರಾಜಯೋಗಿ (ಆನಂದಕಂದ) | ೨ | ೦ | ೦ |
| ಸುದರ್ಶನ ( ,, ) | ೧ | ೮ | ೦ |
| ಹೊಸಹೆಜ್ಜೆ (ಭಾರ್ಗವ) | ೦ | ೧೦ | ೦ |
| ಮನೆಯ ಸುಖಶಾಂತಿ | ೦ | ೧೨ | ೦ |
| ಡಾಕ್ಟರ್ ಗಿರೀಶ (ಪತ್ತೇದಾರಿ) | ೦ | ೬ | ೦ |
| ದೇವದಾಸ (ಶರತ್ಕಾದಂಬರಿ) | ೧ | ೮ | ೦ |
| ವೈಕುಂಠನ ಮೃತ್ಯುಪತ್ರ ( ,, ) | ೧ | ೮ | ೦ |
| ಷೋಡಶಿ ,, | ೨ | ೦ | ೦ |
| ವಿಜಯ ,, | ೩ | ೮ | ೦ |
| ಶ್ರೀಕಾಂತ (೮ ಭಾಗ ಪೂರ್ಣ) | ೧೦ | ೦ | ೦ |
| ರಾಜಲಕ್ಷ್ಮಿ ,, | ೧ | ೮ | ೦ |
| ಭೂಮಾತೆ ಮತ್ತು ಮಂದಿರ | ೧ | ೮ | ೦ |
| ಚಿತ್ರ ,, | ೦ | ೧೨ | ೦ |
| ಪ್ರೇಮಪಥ ,, | ೦ | ೭ | ೦ |
| ಹೇಮಾಂಗಿನಿ ,, | ೦ | ೬ | ೦ |
| ಮಂಗಲಸೂತ್ರ ,, | ೦ | ೪ | ೦ |
| ಮಹೇಶ ,, | ೦ | ೪ | ೦ |
| ಅಬಾಗಿನಿಯ ಸ್ವರ್ಗ ,, | ೦ | ೨ | ೦ |
| ಗೃಹದಾಹ (ಪ್ರೇಮಚಂದ) | ೧ | ೮ | ೦ |
| ಪ್ರತಿಬಿಂಬ (ಕಾಣೇಕರ) | ೦ | ೬ | ೦ |
| ಚಕಮಕಿ (ಬೇಂದ್ರೆ) | ೨ | ೦ | ೦ |
| ಮಾತ್ರೆಗಳು (ಬೀಚಿ) | ೦ | ೧೨ | ೦ |
| ಘಾಟೀಮುದುಕ (ದೇವುಡು) | ೮ | ೮ | ೦ |
| ಉದರ್ಕಕಥಾವಳಿ (ಜೋಶಿ) | ೦ | ೮ | ೦ |
| ನಮ್ಮ ಬದುಕು | ೦ | ೧೫ | ೦ |
| ಸನ್ಯಾಸಿನಿ (ಹಪಿ ಯುವರನಾಟಕ) | ೦ | ೧೦ | ೦ |
| ರೇಡಿಯೋ ನಾಟಕಗಳು | ೧ | ೮ | ೦ |
| ಮಕ್ಕಳ ಒಡಪು (ಶಂ ಬಾ) | ೦ | ೫ | ೦ |
| ಕ್ರಾಂತಿಯ ನೂರು ವರ್ಷ | ೦ | ೧೨ | ೦ |
| ಆಗಸ್ಟ ವೀರರು | ೦ | ೮ | ೦ |
| ಆಜಾದ ಹಿಂದ | ೧ | ೦ | ೦ |
| ಸುಭಾಷ ಸೀಮೋಲ್ಲಂಘನ | ೨ | ೮ | ೦ |
| ನೇತಾಜಿ | ೧ | ೮ | ೦ |
| ಕೈಗನ್ನಡಿ (ಸಾಮುದ್ರಿಕಶಾಸ್ತ್ರ) | ೩ | ೮ | ೦ |
| ಕನ್ನಡಿಯ ಹುಟ್ಟು (ಶಂ.ಬಾ.) | ೩ | ೧೨ | ೦ |
| ಕಾಮಕುಂಜ (ಕಾಮಶಾಸ್ತ್ರ) | ೩ | ೮ | ೦ |
| ರತಿರಹಸ್ಯ ,, | ೩ | ೮ | ೦ |
| ಅನಂಗರಂಗ ,, | ೩ | ೮ | ೦ |
| ಕಾಮಶಾಸ್ತ್ರ ,, | ೩ | ೮ | ೦ |
| ವಿಕೃತ ಕಾಮ ,, | ೩ | ೮ | ೦ |
| ಭ್ರಾಂತಿಮತ್ತು ಲೈಂಗಿಕಶಿಕ್ಷಣ | ೩ | ೮ | ೦ |

### ಎಂಡಾಣೆಮಾಲೆ

ಗಾಂಧೀಟೋಪಿ, ಗಾಂಧೀಹುಚ್ಚು, ವಿಧವಾ ಕುಮಾರಿ, ನೌಕರಿ, ನಾನೇಹೊಲೆಯ ನಾರೀರತ್ನ, ಕಲಿತಹೆಂಡತಿ, ಸೌಭಾಗ್ಯವತಿ, ಬಂಗರದ ಹೊಗೆ, ಬಡವರ ರೊಟ್ಟಿ, ರಾವಬಹಾದ್ದೂರ, ಸನಾತನೀಸೂಳೆ